# ಕೊಪ್ಪಳ : ಒಂದು ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ. ಪ್ರೌಢ ಪ್ರಬಂಧ)

ಸಂಶೋಧಕರು

**ಡಿ. ಎಸ್. ಅಶ್ವಥ್**

ಮಾರ್ಗದರ್ಶಕರು

**ಡಾ. ಕೆ. ಎಂ. ಸುರೇಶ್**

ನಿರ್ದೇಶಕರು,
ವಸ್ತು ಸಂಗ್ರಹಾಲಯ
ಕನ್ನಡ ವಿಶ್ವವಿದ್ಯಾಲಯ ಹಂಪಿ





ವಸ್ತು ಸಂಗ್ರಹಾಲಯ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ ಹಂಪಿ

೨೦೧೯

# ಕೊಪ್ಪಳ : ಒಂದು ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ. ಪ್ರೌಢ ಪ್ರಬಂಧ)

ಸಂಶೋಧಕರು

**ಡಿ. ಎಸ್. ಅಶ್ವಥ್**

ಮಾರ್ಗದರ್ಶಕರು

**ಡಾ. ಕೆ. ಎಂ. ಸುರೇಶ್**

ನಿರ್ದೇಶಕರು,
ವಸ್ತು ಸಂಗ್ರಹಾಲಯ
ಕನ್ನಡ ವಿಶ್ವವಿದ್ಯಾಲಯ ಹಂಪಿ






ವಸ್ತು ಸಂಗ್ರಹಾಲಯ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ ಹಂಪಿ

೨೦೦೧

# ಪ್ರಮಾಣ ಪತ್ರ

**'ಕೊಪ್ಪಳ : ಒಂದು ಸಾಂಸ್ಕೃತಿಕ ಅಧ್ಯಯನ'** ಎಂಬ ಪ್ರೌಢ ಪ್ರಬಂಧವನ್ನು **ಡಾ.ಕೆ.ಎಂ. ಸುರೇಶ್** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಮಾಜ ವಿಜ್ಞಾನಗಳ ನಿಕಾಯದ ವಸ್ತು ಸಂಗ್ರಹಾಲಯ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿದ್ದೇನೆ. ಈ ಪ್ರಬಂಧವು ಮೂಲವಾಗಿದ್ದು ಇದರ ಯಾವುದೇ ಇಡಿಯಾದ ಅಥವಾ ಬಿಡಿಯಾದ ಭಾಗವನ್ನು ಯಾವುದೇ ಪದವಿಗಳಿಗೆ ಅಥವಾ ಇನ್ನಾವುದೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಬೆಂಗಳೂರು

ದಿನಾಂಕ : 25-5-2001

(ಡಿ. ಎಸ್. ಅಶ್ವಥ್)

# ಪ್ರಮಾಣ ಪತ್ರ

ಶ್ರೀ. **ಡಿ. ಎಸ್. ಅಶ್ವಥ್** ಇವರು ನನ್ನ ಮಾರ್ಗದರ್ಶನದಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾಲಯದ ಸಮಾಜವಿಜ್ಞಾನಗಳ ನಿಕಾಯ, ವಸ್ತು ಸಂಗ್ರಹಾಲಯ ವಿಭಾಗಕ್ಕೆ **'ಕೊಪ್ಪಳ : ಒಂದು ಸಾಂಸ್ಕೃತಿಕ ಅಧ್ಯಯನ'** ಎಂಬ ಪ್ರೌಢ ಪ್ರಬಂಧವನ್ನು ಸಿದ್ಧಪಡಿಸಿ ಪಿಎಚ್. ಡಿ. ಪದವಿಗಾಗಿ ಸಿದ್ಧಪಡಿಸಿದ್ದಾರೆ. ಪ್ರಕೃತ ಪ್ರಬಂಧವು ಮೂಲವಾಗಿದ್ದು ಇದರ ಯಾವುದೇ ಇಡಿಯಾದ ಅಥವಾ ಬಿಡಿಯಾದ ಭಾಗವನ್ನು ಯಾವುದೇ ಪದವಿಗಳಿಗೆ ಅಥವಾ ಇನ್ನಾವುದೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ವಿದ್ಯಾರಣ್ಯ
ದಿನಾಂಕ : 28/1/2001

(ಡಾ. ಕೆ. ಎಂ. ಸುರೇಶ್)
ಕನ್ನಡ ವಿಶ್ವವಿದ್ಯಾಲಯ ಹಂಪಿ

# ಕೃತಜ್ಞತೆಗಳು

'ಕೊಪ್ಪಳ : ಒಂದು ಸಾಂಸ್ಕೃತಿಕ ಅಧ್ಯಯನ' ಪ್ರೌಢ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಒಪ್ಪಿಸಲು ನನಗೆ ಹರ್ಷವೆನ್ನಿಸುತ್ತಿದೆ. ನನಗೆ ಕೊಪ್ಪಳಕ್ಕೆ ಜಿಲ್ಲಾಧಿಕಾರಿಯಾಗಿ ವರ್ಗವಾಗಿದ್ದಾಗ ಅಲ್ಲಿಯ ಹತ್ತು ಹಲವು ಸಂಗತಿಯನ್ನು ತಿಳಿದುಕೊಂಡೆ. ಚರಿತ್ರೆಯುದ್ದಕ್ಕೂ ಒಂದು ಮಹತ್ವದ ಸ್ಥಳವಾಗಿ ಅದು ನನಗೆ ಕಂಡಿತು. ಅಲ್ಲಿನ ಚರಿತ್ರೆಯು ಕುತೂಹಲಕರವಾಗಿ ಕಂಡಿತು. ಕೊಪ್ಪಳ ಜಿಲ್ಲೆಯ ಹೈದರಾಬಾದ್ ವಿಮೋಚನೆಯ ಹೋರಾಟದ ಕಥೆಯಾದ 'ವಿಮೋಚನೆ' ಯನ್ನು ಜಿಲ್ಲಾಡಳಿತದ ಮೂಲಕ ಪ್ರಕಟಿಸುವ ಏರ್ಪಾಡು ಮಾಡಿದೆ. ಅಲ್ಲಿನ ಶಿಲಾ ಶಾಸನಗಳು, ಕೋಟೆ, ಇತ್ಯಾದಿಗಳು ಕೊಪ್ಪಳ ಚರಿತ್ರೆಯನ್ನು ಕಟ್ಟಿಕೊಡುವಂತೆ ಪ್ರೇರೇಪಿಸಿದವು. ಆ ಕಾರಣದಿಂದ ಅದರ ಚರಿತ್ರೆಯ ಸಾಂಸ್ಕೃತಿಕ ಹೆಜ್ಜೆ ಗುರುತುಗಳನ್ನು ಹಿಡಿಯಲು ಪ್ರಯತ್ನಿಸಿದೆ. ನಾನು ವೃತ್ತಿ ಸಂಶೋಧಕನಲ್ಲ ಆದರೂ ಅಲ್ಲಿನ ಸಮಗ್ರ ಅಧ್ಯಯನದಿಂದ ದೊರೆತ ಮಾಹಿತಿಗಳನ್ನು ಕ್ರೋಢೀಕರಿಸಿ ಕೊಪ್ಪಳದ ಬಗೆಗೆ ನೇರವಾದ ಇತಿಹಾಸವನ್ನು ರಚಿಸಿರುವೆ. ಇದು ಕೊಪ್ಪಳದ ಬಗೆಗಿನ ಸಮಗ್ರ ಅಧ್ಯಯನವಲ್ಲ. ಕೇವಲ ಒಂದು ನಿಟ್ಟಿನ ಅಧ್ಯಯನ ಮಾತ್ರ. ಆ ಬಗೆಗೆ ನನಗೆ ಅತೃಪ್ತಿಯಿದೆ. ಅಲ್ಲಿ ಉತ್ಖನನ ಮತ್ತು ಸಂಶೋಧನೆಗಳು ಜೊತೆಜೊತೆಗೆ ನಡೆಯಬೇಕೆಂಬುದು ನನ್ನ ಆಶಯ.

ಆದರೂ ಇಂತಹ ಸಂದರ್ಭದಲ್ಲಿ ನಾನು ಹಲವರನ್ನು ನೆನೆಯಬೇಕು. ನನ್ನ ಅಧ್ಯಯನ ಕುತೂಹಲವನ್ನು ಗುರುತಿಸಿ ನನ್ನನ್ನು ಸಂಶೋಧನಾರ್ಥಿಯನ್ನಾಗಿ ಆಯ್ಕೆ ಮಾಡಿಕೊಂಡ ಅಂದಿನ ಕುಲಪತಿಗಳಾದ ಡಾ. ಎಂ. ಎಂ. ಕಲಬುರ್ಗಿಯವರಿಗೆ ಮತ್ತು ಅಧ್ಯಯನವನ್ನು ಮುಂದುವರೆಸುವಂತೆ ಹೇಳಿ ಪ್ರೋತ್ಸಾಹಿಸಿ ಅವಕಾಶ ಮಾಡಿಕೊಟ್ಟ ಇಂದಿನ ಕುಲಪತಿಗಳಾದ ಡಾ. ಹೆಚ್. ಜೆ. ಲಕ್ಕಪ್ಪಗೌಡರಿಗೆ ಮೊದಲು ನಾನು ಕೃತಜ್ಞತೆಗಳನ್ನು ಹೇಳುವೆ.

ಡಾ. ಕೆ. ಎಂ. ಸುರೇಶ್ ಅವರು ಸೂಕ್ತ ಮಾರ್ಗದರ್ಶನ ನೀಡುವ ಮೂಲಕ ನೆರವಾದರು. ಅವರ ಮಾರ್ಗದರ್ಶನವು ನಿಜಕ್ಕೂ ಮನನೀಯವಾಗಿತ್ತು. ಈ ಸಂದರ್ಭದಲ್ಲಿ ಅವರಿಗೆ ಅನಂತ ಕೃತಜ್ಞತೆಗಳನ್ನು ಸಲ್ಲಿಸುವೆ.

ಅಧ್ಯಯನಾಂಗದ ನಿರ್ದೇಶಕರಾಗಿದ್ದ ಮತ್ತು ಪ್ರಸ್ತುತ ಕುಲಸಚಿವರಾದ ಡಾ.ಕೆ.ವಿ.ನಾರಾಯಣರು ಹಾಗೂ ನನ್ನ ಅಧ್ಯಯನಕ್ಕೆ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಕಾರಣರಾದ ಪ್ರೋ: ಮಲ್ಲೇಪುರಂ ಜಿ. ವೆಂಕಟೇಶ ಮತ್ತು ಕನ್ನಡ ವಿಶ್ವ ವಿದ್ಯಾಲಯದ ಎಲ್ಲ ಸಿಬ್ಬಂದಿ ವರ್ಗಕ್ಕೂ ಹಾಗೂ ಕನ್ನಡ ವಿಶ್ವ ವಿದ್ಯಾಲಯದ ಗ್ರಂಥಾಲಯಾಧಿಕಾರಿಗಳಾದ ಶ್ರೀ ಜೆ. ಆರ್.ರಾಮಮೂರ್ತಿ ಮತ್ತು ಅವರ ಸಿಬ್ಬಂದಿ ವರ್ಗಕ್ಕೂ ನನ್ನ ಕೃತಜ್ಞತೆ ಹೇಳುವೆ .

ನನ್ನ ಅಧ್ಯಯನಕ್ಕೆ ತೊಂದರೆಯಾಗದಂತೆ ನೋಡಿಕೊಂಡ ಎಲ್ಲಾ ರೀತಿಯಿಂದ ಸಹಕರಿಸಿ ಪ್ರೋತ್ಸಾಹಿಸಿದ ನನ್ನ ಶ್ರೀಮತಿಯಾದ ವನಜಾ ಅವರಿಗೂ ಈ ಸಂದರ್ಭದಲ್ಲಿ ಕೃತಜ್ಞತೆಗಳನ್ನು ಹೇಳದಿರಲಾರೆ .

ಹಿತೈಷಿಗಳಾದವರು ಮತ್ತು ಪ್ರೇರಣೆಯನ್ನು ನೀಡಿ ಪ್ರೋತ್ಸಾಹಿಸಿದ ಶ್ರೀ ಬಿ.ಸಿ.ಪಾಟೀಲರು ಮತ್ತು ಶ್ರೀ ಮಲ್ಲಿನಾಥ ಉಪಕಾರ್ಯದರ್ಶಿಗಳು, ಜಿಲ್ಲಾ ಪಂಚಾಯತ್, ಕೊಪ್ಪಳ - ಅವರನ್ನು ನಾನು ಈ ಸಂದರ್ಭದಲ್ಲಿ ನೆನೆದು ಕೃತಜ್ಞತೆಗಳನ್ನು ಅರ್ಪಿಸುವೆ.

ನನ್ನ ಅಧ್ಯಯನಕ್ಕೆ ಎಲ್ಲ ರೀತಿಯಿಂದ ನೆರವಾದ ನನ್ನ ಪರಿವಾರಕ್ಕೂ ನನ್ನ ಕಛೇರಿಯ ಸಿಬ್ಬಂದಿ ವರ್ಗಕ್ಕೂ ಹಾಗೆಯೇ ವಿಶೇಷವಾಗಿ ಗಂಗಾವತಿ ಷುಗರ್ಸ್ ಕಂಪನಿಯ ಉದ್ಯೋಗಿಯಾದ ಶ್ರೀಮತಿ ವನಜಾಕ್ಷಿ ಅವರಿಗೂ ಕೊಪ್ಪಳದ ಜಿಲ್ಲಾಧಿಕಾರಿ ಕಛೇರಿಯಲ್ಲಿ ನನ್ನ ಆಪ್ತ ಸಿಬ್ಬಂದಿಯಾಗಿದ್ದ ಶ್ರೀ ಅಜಿತ ಸಿಂಗ, ಶ್ರೀ .ಶ್ರೀಧರಾಚಾರ ಮತ್ತು ಅಲ್ಲಿನ ಗ್ರಾಮಲೆಕ್ಕಾಧಿಕಾರಿಗಳಾದ ಶ್ರೀ . ಲಾಯಕ್ ಅಲಿ ಹಾಗೂ ಶ್ರೀ ಚಂದ್ರಶೇಖರ, ಪ್ರಾಜಕ್ಟ ಮ್ಯಾನೇಜರ, ನಿರ್ಮಿತಿ ಕೇಂದ್ರ ಕೊಪ್ಪಳ ಅವರಿಗೂ ಈ ಸಂದರ್ಭದಲ್ಲಿ ಕೃತಜ್ಞತೆಗಳನ್ನು ಹೇಳುವೆ . ವಿಶೇಷವಾಗಿ ನನ್ನ ಆಪ್ತ ಸಿಬ್ಬಂದಿಗಳಾಗಿರುವ ಶ್ರೀ.ಮಂಜುನಾಥ ಮತ್ತು ಶ್ರೀಮತಿ. ಶ್ರೀಮತಿಯವರು ಕೊಟ್ಟ ಸಹಕಾರಕ್ಕೆ ಕೃತಜ್ಞತೆ ಹೇಳುವೆ. ಅಂದವಾಗಿ ತುಂಬಾ ಚೊಕ್ಕಟವಾಗಿ ಕಂಪ್ಯೂಟರನಲ್ಲಿ ಅಕ್ಷರ ಸಂಯೋಜಿಸಿ ಹಲವು ಸಲಹೆಗಳನ್ನಿತ್ತ ಡಾ.ಕೊಟ್ರಸ್ವಾಮಿ ಎ.ಎಂ.ಎಂ., ಉಪನ್ಯಾಸಕರು, ಚಿತ್ರದುರ್ಗ - ಅವರಿಗೆ ಮತ್ತು ಎನ್.ಐ.ಸಿ.ಯ ಶ್ರೀ . ಉಮಾಶಂಕರ್ ಮತ್ತವರ ವೃತ್ತಿ ಬಳಗಕ್ಕೂ ನನ್ನ ಕೃತಜ್ಞತೆಗಳನ್ನು ತಿಳಿಸುವೆ.

ಒಟ್ಟಾರೆ ಈ ಸಮಗ್ರ ಅಧ್ಯಯನ ಹೊರಹೊಮ್ಮಲು ನೆರವು, ಸಲಹೆ, ಸಹಕಾರ, ಪ್ರೋತ್ಸಾಹ ನೀಡಿದ ಎಲ್ಲ ನನ್ನ ಸ್ನೇಹಿತರಿಗೆ ಹಾಗೂ ಹಿತಚಿಂತಕರಿಗೆ ನನ್ನ ಧನ್ಯವಾದಗಳನ್ನು ಅರ್ಪಿಸುವೆ.

ಡಿ.ಎಸ. ಅಶ್ವಥ್.

ಬೆಂಗಳೂರು

ದಿನಾಂಕ:

# ಪರಿವಿಡಿ

ಅಧ್ಯಾಯ ೧

# ಕೊಪ್ಪಳ: ಸಾಂಸ್ಕೃತಿಕ ಅಧ್ಯಯನದ ನೆಲೆಗಳು ಮತ್ತು ಅಧ್ಯಯನದ ಪ್ರಸ್ತುತತೆ

೧. ೧. ಅಧ್ಯಯನದ ಉದ್ದೇಶ

೧. ೨. ಅಧ್ಯಯನದ ತಾತ್ವಿಕತೆ

೧. ೩. ಅಧ್ಯಯನದ ಸ್ವರೂಪ

೧ . ೪. ಅಧ್ಯಯನದ ವ್ಯಾಪ್ತಿ

ಅಧ್ಯಾಯ ೧

# ಕೊಪ್ಪಳ: ಸಾಂಸ್ಕೃತಿಕ ಅಧ್ಯಯನದ ನೆಲೆಗಳು ಮತ್ತು ಅಧ್ಯಯನದ ಪ್ರಸ್ತುತತೆ

ಈಗ ನಾವು ಹೊಸ ಶತಮಾನವೊಂದಕ್ಕೆ ಕಾಲಿಡುತ್ತಿದ್ದೇವೆ. ಕಳೆದ ಶತಮಾನದಲ್ಲಿ ವಿಶ್ವದಲ್ಲಿ ಸಮರೋಪಾದಿಯಲ್ಲಿ ಅದ್ಭುತ ಘಟನೆಗಳು ನಡೆದುಹೋಗಿವೆ. ವಿಶ್ವದ ಪ್ರಮುಖ ವಿದ್ಯಮಾನಗಳಲ್ಲಿ ಆಧುನಿಕತೆ ಆವರಿಸಿಕೊಂಡಿರುವುದು, ಎರಡು ಮಹಾಯುದ್ಧಗಳು ನಡೆದು ಹೋಗಿರುವುದು, ಸೋವಿಯತ್ ರಷ್ಯಾದ ಸಂಘಟನೆ ಮತ್ತು ವಿಘಟನೆ ಗಮನಾರ್ಹವಾದವುಗಳು. ಇವುಗಳ ಪರಿಣಾಮವಾಗಿ ವಿಶ್ವದೆಲ್ಲೆಡೆ ಜಾಗತೀಕರಣವೆಂಬ ನವ ವಸಾಹತುಶಾಹಿ ತನ್ನ ಕಬಂಧ ಬಾಹುಗಳನ್ನು ಚಾಚುವಂತಾಗಿದೆ. ಜಗತ್ತಿನಾದ್ಯಂತ ಅಮೇರಿಕಾದ ಏಕಸ್ವಾಮ್ಯತೆ ಹೆಚ್ಚುತ್ತಿದೆ. ಅವರ ಸಾಮ್ರಾಜ್ಯಶಾಹಿ ಆಕಾಂಕ್ಷೆಗಳು ಅನಂತವಾಗತೊಡಗಿವೆ. ವಿಶ್ವದ ಮೂರನೆಯ ರಾಷ್ಟ್ರಗಳು ನವ

ವಸಾಹತೀಕರಣದ ಪ್ರಕ್ರಿಯೆಗೆ ತೀವ್ರವಾಗಿ ಒಳಪಡುತ್ತಿವೆ. ಇಂಥ ಸಂದರ್ಭದಲ್ಲಿ ಮಾನವಿಕ ವಿಜ್ಞಾನ ಶಿಸ್ತುಗಳ ಅಧ್ಯಯನದ ಆಶಯಗಳು ಯಾವ ನಿಟ್ಟಿನತ್ತ ಕ್ರಮಿಸಬೇಕೆಂಬುದು ಬಹುದೊಡ್ಡ ಸಮಸ್ಯೆಯಾಗಿದೆ. ಈ ನವ ವಸಾಹತೀಕರಣದ ಹಿನ್ನೆಲೆಯಲ್ಲಿ ಜಾಗತೀಕರಣ ಪ್ರಕ್ರಿಯೆ ನಡೆಯುತ್ತಿದೆ. ಇಂತಹ ಸನ್ನಿವೇಶದಲ್ಲಿ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನಗಳು ನಾಗಾಲೋಟದಿಂದ ಹೊಸ ಆವಿಷ್ಕಾರಗಳನ್ನು ಕಂಡುಕೊಂಡು ಮುಂದಿನ ಮಾರ್ಗದ ನಿರೀಕ್ಷಣೆಗೆ ಕಾಯ್ದುಕುಳಿತಿವೆ. ಆದರೆ ಮಾನವಿಕ ವಿಜ್ಞಾನಗಳಿಗೆ ಈ ಹಾದಿ ಸ್ಪಷ್ಟವಾಗಿಲ್ಲ. ಮಾನವಿಕ ವಿಜ್ಞಾನಗಳಿಂದೇನು ಪ್ರಯೋಜನ ಎನ್ನುವ ಪ್ರಶ್ನೆ ಮತ್ತು ಅವುಗಳ ಬಗೆಗೆ ಔದಾಸೀನ್ಯ ಮನೋಭಾವ ಸಹಜವಾದ ಸಂಗತಿಯಾಗಿದೆ. ಹೊಸ ಶತಮಾನದ ಆಶಯಗಳ ಜೊತೆಗೆ ಮಾನವಿಕ ವಿಜ್ಞಾನಗಳು ಸ್ಪಂದಿಸುತ್ತಿಲ್ಲ ನಿಜ. ಆದರೆ ಅವು ಸಂಸ್ಕೃತಿಯ ಜೀವಂತಿಕೆಗೆ ನಿದರ್ಶನವಾಗಿವೆ. ಮಾನವಿಕ ವಿಜ್ಞಾನಗಳ ಬಗೆಗೆ ಮೂಗು ಮುರಿಯುವ ಒಂದು ವರ್ಗ ನಮ್ಮ ನಡುವೆ ಬೆಳೆದಿದೆ. ಇದನ್ನು ಗಮನಿಸಿಯೂ ಇಂತಹ ವಿಚಿತ್ರ ಸನ್ನಿವೇಶದಲ್ಲಿ ಹೊಸ ಶತಮಾನದ ಮಾನವಿಕ ವಿಜ್ಞಾನಗಳ ಸಂಶೋಧನೆಯು ನಿರಂತರವಾಗಿ ನಡೆಯುತ್ತಿದೆ. ಈ ಸಂಶೋಧನೆಗಳು ಯಾವ ಉದ್ದೇಶಕ್ಕಾಗಿ ಮತ್ತು ಯಾರ ಒಳಿತಿಗಾಗಿ ಎಂಬುದು ಇಲ್ಲಿ ಪ್ರಶ್ನೆಯಾಗಿದೆ. ಈ ಹೊತ್ತು ಇದರ ವಿವೇಚನೆಯೂ ಅಗತ್ಯ ನಮ್ಮ ಮುಂದಿದೆ.

ಮುಂದುವರಿದ ರಾಷ್ಟ್ರಗಳು ಜಾಗತೀಕರಣವೆಂಬ ಮಂತ್ರವನ್ನು ಹಿಡಿದು ಏಕೀಕೃತ ಘಟಕ ವ್ಯವಸ್ಥೆಯನ್ನು ರೂಪಿಸಿಕೊಳ್ಳುವ ಮಹತ್ವವಾದ ಹುನ್ನಾರವನ್ನು ಹೊಂದಿವೆ. ಈ ಹಿನ್ನೆಲೆಯಲ್ಲಿ ಪ್ರಾದೇಶಿಕ ಭಾಷೆ, ಸಂಸ್ಕೃತಿಗಳು ನಾಶವಾಗುವುದರಲ್ಲಿ ಎರಡು ಮಾತಿಲ್ಲ. ಪ್ರಪಂಚದಾದ್ಯಂತ ಏಕ ಸಂಸ್ಕೃತಿಗೆ ಪೂರಕವಾದಂಥ ಪ್ರತಿ ಪರಿಕರಗಳನ್ನು ಏಕಘಟಕ ವ್ಯವಸ್ಥೆಯಡಿ ತರುವ ಪ್ರಯತ್ನವನ್ನು ಮುಂದುವರೆದ ರಾಷ್ಟ್ರಗಳು ಮಾಡುತ್ತಿವೆ. ಹೀಗಾಗಿ ಬಹುರಾಷ್ಟ್ರೀಯ ಕಂಪನಿಗಳು ಭಾರತಕ್ಕೆ ಬಂದು ನೆಲೆಗೊಳ್ಳುತ್ತಿವೆ. ಈ ಹಿನ್ನೆಲೆಯಲ್ಲಿ ಭಾರತದಂಥ ಮೂರನೆಯ ಜಾಗತಿಕ ರಾಷ್ಟ್ರಗಳ ಬೌದ್ಧಿಕತೆಯನ್ನು ಬಹುರಾಷ್ಟ್ರೀಯ ಕಂಪನಿಗಳು ಕೊಳ್ಳೆ ಹೊಡೆಯುತ್ತಿವೆ. ಇದರ ಪರಿಣಾಮ ಮುಂದೊಂದು ದಿನ

ಭಾರತೀಯರಿಗೆ ಗಂಭೀರವಾಗಿ ತಟ್ಟಲಿದೆ. ಇಂಗ್ಲೀಷ್ ಸಂಸ್ಕೃತಿ ತನ್ನ ಪಾರಮ್ಯವನ್ನು ಉಳಿಸಿಕೊಂಡು ಹಲವು ಪ್ರಾದೇಶಿಕ ಭಾಷೆಗಳ ನಾಶಕ್ಕೆ ಕಾರಣವಾಗಬಹುದಾದ ಸನ್ನಿವೇಶವನ್ನು ನಿರ್ಮಾಣ ಮಾಡುತ್ತಿದೆ. ನಾವು ಯಾವುದನ್ನು ನಮ್ಮ ಸಂಸ್ಕೃತಿ ಎಂದು ಕರೆದುಕೊಳ್ಳುತ್ತಿದ್ದೇವೆಯೋ ಅದು ನಮ್ಮಿಂದ ದಿನೇ ದಿನೇ ದೂರವಾಗುತ್ತಿದೆ. ಶಾಲಾ ಹಂತಗಳಲ್ಲಿ ಇಂಗ್ಲಿಷ್ ಶಿಕ್ಷಣ ಮಾಧ್ಯಮದ ಅಗತ್ಯ ಹೆಚ್ಚು ಪ್ರಸ್ತುತವಾಗುತ್ತಾ ಹೋಗುತ್ತಿದೆ. ಏಕೆಂದರೆ ನವ ವಸಾಹತುಶಾಹಿ ವ್ಯವಸ್ಥೆಯಲ್ಲಿ ಉದ್ಯೋಗಗಳು ಸೃಷ್ಟಿಯಾಗುವುದೇ ಬಹುರಾಷ್ಟ್ರೀಯ ಕಂಪನಿಗಳಲ್ಲಿ . ಅಲ್ಲಿ ಇಂಗ್ಲೀಷ್ ಭಾಷಾ ಮಾಧ್ಯಮದಲ್ಲಿ ಕಲಿಯದ ಅಭ್ಯರ್ಥಿಯು ಅಸ್ಪೃಶ್ಯನೆಂಬಂತೆ ನಡೆಸಿಕೊಳ್ಳಲಾಗುತ್ತಿದೆ. ಭಾರತದ ಒಂದು ವರ್ಗ ಈಗಾಗಲೇ ಇದನ್ನು ಮನಗಂಡು ಶಿಕ್ಷಣವನ್ನು ಇಂಗ್ಲೀಷ್ ಮಾಧ್ಯಮದ ಮೂಲಕ ಪಡೆಯುವಲ್ಲಿ ಯಶಸ್ವಿಯಾಗಿದೆ. ಇಂಗ್ಲೀಷ್ ಭಾಷೆಯ ಆಡುಮಾತು ಸಮಾಜದ ಮೇಲ್ವರ್ಗದ ಮತ್ತು ಪ್ರಜ್ಞಾವಂತ ಕೆಳವರ್ಗದ ಸಮಾಜವನ್ನು ಆಕ್ರಮಿಸಿಬಿಟ್ಟಿದೆ. ಈ ಎರಡು ಸ್ತರಗಳಿಗೆ ಪರಿಸ್ಥಿತಿಯ ಅರಿವುಂಟಾಗಿದೆ. ಆದರೆ ಮತ್ತೊಂದು ವರ್ಗ ನಿರಂತರವಾಗಿ ಹಿಂದುಳಿಯುತ್ತಲೇ ಇದೆ. ಎಷ್ಟೋ ಗ್ರಾಮೀಣ ಪ್ರದೇಶಗಳಲ್ಲಿ ಶಾಲೆಯೇ ಇಲ್ಲ; ಶಾಲೆಯಿದ್ದರೆ ಶಿಕ್ಷಕರಿಲ್ಲ; ಶಿಕ್ಷಕರಿದ್ದರೆ ಕಲಿಯುವ ವಾತಾವರಣವಿಲ್ಲ; ಕಲಿಯುವ ವಾತಾವರಣವಿದ್ದರೂ ಇಂಗ್ಲೀಷ್ ಭಾಷೆ ಅವರ ಪರಿಸರಕ್ಕೆ ಒಗ್ಗದ ಸಂಗತಿಯಾಗಿದೆ. ಇಲ್ಲಿ ಎರಡರ ಸಂಘರ್ಷವನ್ನು ಕಾಣಬಹುದು. ಒಂದು ಆಡಳಿತ ಪ್ರೇರಿತ ಕನ್ನಡ ಮಾಧ್ಯಮದಲ್ಲಿ ಶಿಕ್ಷಣ, ಇನ್ನೊಂದು ಇಂಗ್ಲೀಷ್ ಭಾಷೆ ಭವಿಷ್ಯಕ್ಕೆ ಅಗತ್ಯವೆನ್ನುವಂತಹ ವಾತಾವರಣದ ನಿರ್ಮಾಣ. ಈ ಎರಡರ ಹಿನ್ನೆಲೆಯಲ್ಲಿ ಗ್ರಾಮೀಣ ಪ್ರದೇಶದ ಶಿಕ್ಷಣ ಜಿಜ್ಞಾಸುಗಳ ಪರಿ ವಿಚಿತ್ರವಾಗಿದೆ. ಕನ್ನಡ ಭಾಷೆಯನ್ನು ಮಾಧ್ಯಮವನ್ನಾಗಿ ಹೊಂದಿ ಸಂಸ್ಕೃತಿ ಮತ್ತು ಪರಂಪರೆಗಳನ್ನು ರಕ್ಷಣೆ ಮಾಡಿಕೊಳ್ಳಬೇಕೋ ಅಥವಾ ಇಂಗ್ಲೀಷ್ ಭಾಷೆಯನ್ನು ಕಲಿತು ಬಹುರಾಷ್ಟ್ರೀಯ ಕಂಪನಿಗಳಲ್ಲಿ ಕೆಲಸವನ್ನು ಹುಡುಕಿಕೊಂಡು ಹೋಗಬೇಕೋ ಎನ್ನುವ ಸಂದಿಗ್ಧ ಸ್ತಿತಿ ಉಂಟಾಗಿದೆ. ಈ ಬೆಳವಣಿಗೆ ಸಾಮಾನ್ಯವಾಗಿ ಎಲ್ಲರಿಗೂ ತಿಳಿದಿದೆ. ಆದರೆ ಪ್ರಭುತ್ವದ ನೀತಿ ನಿರ್ಧಾರಗಳಿಗೆ ಬದ್ಧರಾಗುತ್ತಾ ಈ ಎರಡೂ ಕ್ರಮಗಳನ್ನು ಕೈಬಿಟ್ಟು ಕುಳಿತುಕೊಳ್ಳುವವರೇ ಹೆಚ್ಚು ಜನ. ಈ ಹಿನ್ನೆಲೆಯಲ್ಲಿ ಹೊಸದೊಂದು ಶಿಕ್ಷಣ ಮಾಧ್ಯಮದ ಕ್ರಮದ

ತುರ್ತು ಅಗತ್ಯ ನಮಗಿದೆ. ಅದೇನೇ ಇದ್ದರೂ ನಾವು ನಮ್ಮ ಸಂಸ್ಕೃತಿಗೆ ವಿಮುಖರಾಗುತ್ತಾ ಹೋಗುತ್ತಿದ್ದೇವೆ. ಬಹುರಾಷ್ಟ್ರೀಯ ಕಂಪೆನಿಗಳು ತೆರೆದ ಹಲವಾರು ದೂರದರ್ಶನ ವಾಹಿನಿಗಳಿಂದ ಸಂಸ್ಕೃತಿ ನಿಧಾನಗತಿಯಲ್ಲಿ ಏಕಘಟಕ ಸ್ವರೂಪಕ್ಕೆ ಒಳಗಾಗುತ್ತಿದೆ. ಇಂತಹ ಸನ್ನಿವೇಶದಲ್ಲಿ ನಮ್ಮ ಸಂಸ್ಕೃತಿಯ ನೆಲೆ-ಬೆಲೆಗಳನ್ನು ಚರ್ಚಿಸಬೇಕಾದ ಅಗತ್ಯ ನಮ್ಮ ಮುಂದಿದೆ.

ಈ ಹೊತ್ತು, ಕಳೆದ ಶತಮಾನದಲ್ಲಿ ನಡೆದ ಅಧ್ಯಯನ ಮಾದರಿಗಳು ನಮ್ಮ ಮುಂದಿವೆ. ಅವು ಸಾಂಸ್ಕೃತಿಕ ಸಂದರ್ಭಗಳೊಡನೆ ಸ್ಪಂದಿಸುತ್ತಾ ವಿಭಿನ್ನ ರೂಪ ತಾಳಿ ಬೆಳೆಯತೊಡಗಿವೆ. ಸಂಸ್ಕೃತಿಯ ಅಧ್ಯಯನವೆಂದರೆ ನಮ್ಮ ಸಂದರ್ಭಕ್ಕೆ ಮತ್ತು ಅಗತ್ಯಕ್ಕೆ ತಕ್ಕಂತೆ ಚರಿತ್ರೆಯನ್ನು ಪುನಾರಚಿಸುವುದಾಗಿದೆ. ಈ ಹಿನ್ನೆಲೆಯಲ್ಲಿ ಬಹುರಾಷ್ಟ್ರೀಯ ಕಂಪನಿಗಳು ಉಂಟುಮಾಡಿದ ಪರಿಣಾಮಗಳನ್ನು ಕುರಿತು ಚರ್ಚಿಸುವುದು ಅನಿವಾರ್ಯವೆನ್ನಿಸುತ್ತದೆ. ಬಹುರಾಷ್ಟ್ರೀಯ ಕಂಪನಿಗಳಿಂದಾಗಿ ಭವಿಷ್ಯದಲ್ಲಿ ದುರ್ಬಲ ಸರ್ಕಾರಗಳು ರಚನೆಯಾಗುವ ಸಂಭವವಿದೆ. ಆಗಾಮಿ ದಿನಗಳಲ್ಲಿ ಭಾರತದ ರಾಜತಾಂತ್ರಿಕ ವ್ಯವಸ್ಥೆಯು ದಿನೇದಿನೇ ಕುಸಿಯುವ ಸಾಧ್ಯತೆಗಳಿವೆ. ಜನರಿಗೆ ಒದಗಿದ್ದ ಸಾರ್ವಭೌಮತ್ವ ಎಲ್ಲೋ ಒಂದು ಕಡೆಯಿಂದ ಕ್ಷೀಣವಾಗುತ್ತಾ ಹೋಗುತ್ತಿದೆ. ಏಕೆಂದರೆ ಇಡೀ ನಮ್ಮ ಸಂದರ್ಭದ ಸಂಸ್ಕೃತಿ ರೂಢಿಸಿಕೊಂಡ ಜೀವನ ಕ್ರಮವು ಬಹುರಾಷ್ಟ್ರೀಯ ಕಂಪನಿಗಳ ಉತ್ಪಾದನೆಗಳನ್ನು ಅವಲಂಬಿಸಿದೆ. ಭಾರತೀಯ ಸಂದರ್ಭದಲ್ಲಿ ಹೇಳುವುದಾದರೆ ವಿಶ್ವವ್ಯಾಪಾರ ಸಂಘಟನೆಯ (W.T.O)ಹಿನ್ನೆಲೆಯಲ್ಲಿ ದೇಶೀಯ ಸಂಸ್ಕೃತಿಗಳ ವಿನಾಶದ ನಾಂದಿ ತುಂಬಾ ದೂರವೇನೂ ಉಳಿದಿಲ್ಲ. ಈಗಾಗಲೇ ಹಳೆಯ ಮತ್ತು ಹೆಚ್ಚು ವೆಚ್ಚದ ಉತ್ಪಾದನಾ ತಂತ್ರಜ್ಞಾನ ವಿಶ್ವವ್ಯಾಪಾರ ಸಂಘಟನೆಯಲ್ಲಿ ಭಾರತದಂಥ ರಾಷ್ಟ್ರವು ಲಾಭವನ್ನು ನಿರೀಕ್ಷಿಸುವ ಮಟ್ಟದಲ್ಲಿಲ್ಲ. ಮಾತ್ರವಲ್ಲದೆ ಮಾರುಕಟ್ಟೆಯಲ್ಲಿ ಭಾರತದ ಉತ್ಪಾದನೆಗಳು ಸ್ಪರ್ಧಿಸಲಾರವು. ಟರ್ಮಿನೇಟರ್ ತಳಿಗಳು ಮತ್ತು ಅತ್ಯಂತ ಮುಂದುವರೆದ ಪುನರಾವರ್ತನೆಯ ತಂತ್ರಜ್ಞಾನವನ್ನು ಭಾರತಕ್ಕೆ ಪ್ರಥಮ ರಾಷ್ಟ್ರಗಳು ನೀಡುತ್ತಿಲ್ಲ. ಈ ಹಿನ್ನೆಲೆಯಲ್ಲಿ ಉತ್ಪಾದನಾ ದಾರಿದ್ರ್ಯ, ಕೃಷಿ ದಾರಿದ್ರ್ಯ, ಬಡತನವೆಂಬ ಅಪಾನುಷವಾದ ಅಂಶಗಳಿಂದ ಭಾರತವು

ಕೊರಗಬಹುದಾದ ಸ್ಥಿತಿ ಬರುವುದನ್ನು ನಿರೀಕ್ಷಿಸಬಹುದು. ಇಂತಹ ಸನ್ನಿವೇಶದಲ್ಲಿ ಮಾನವಿಕ ವಿಜ್ಞಾನಗಳ ಅಧ್ಯಯನವು ಅದೆಷ್ಟು ಪ್ರಸ್ತುತ ಎನ್ನುವ ಬಹುದೊಡ್ಡ ಪ್ರಶ್ನೆ ನಮ್ಮ ಮುಂದೆ ಎದ್ದುನಿಲ್ಲುತ್ತದೆ.

ಸಂಸ್ಕೃತಿ ಅಧ್ಯಯನ ಇವೆಲ್ಲ ಪ್ರಸ್ತುತಗಳನ್ನು ವಿವೇಚಿಸುತ್ತದೆ. ಸಂಸ್ಕೃತಿ ಅಂಗವಾಗಿ ಜೀವನ ಕ್ರಮ ರೂಪಗೊಳ್ಳುತ್ತದೆ. ಆ ಜೀವನ ಕ್ರಮದಂತೆ ಮನುಷ್ಯ ಆಧುನಿಕ ಮತ್ತು ಅತ್ಯಾದುನಿಕನಾಗಿದ್ದರೂ ಅವನು ಸಂಸ್ಕೃತಿ ಅಧ್ಯಯನದ ಪರಿಧಿಗೆ ಒಳಗಾಗಲೇಬೇಕು. ಕೊಪ್ಪಳದಂತಹ ಒಂದು ಸಣ್ಣ ನಗರವು ಪರಂಪರೆಯಲ್ಲಿ ಧಾಷ್ಟ್ಯ್ಯದಿಂದ ಬೆಳೆದಿದೆ. ಆ ನಗರವು ಇಂದು ಜಾಗತೀಕರಣದ ಪ್ರಕ್ರಿಯೆಗೆ ಒಳಗಾಗುತ್ತಿದೆ. ಅತ್ಯಾಧುನಿಕವೆನ್ನುವಂಥ ತಂತ್ರಜ್ಞಾನಗಳ ಬಳಕೆ ಅಲ್ಲಾಗದಿದ್ದರೂ ವಿಶ್ವವ್ಯಾಪಾರ ಸಂಘಟನೆಯಂಥ (W.T.O) ವಿದ್ಯಮಾನಗಳ ಒಳಗೆ ಕೊಪ್ಪಳ ಪ್ರದೇಶ ಒಳಗೊಳ್ಳುತ್ತದೆ. ಇಂತಹ ಸಂದರ್ಭದಲ್ಲಿ ಒಂದು ಸಂಸ್ಕೃತಿಯ ವಿವೇಚನೆ ಮಹತ್ವಪೂರ್ಣದ್ದೆಂದು ಕಾಣುತ್ತದೆ. ಕೊಪ್ಪಳದ ಸುತ್ತಮುತ್ತಣ ಪ್ರದೇಶವು ಇಂದು ಬಹುರಾಷ್ಟ್ರೀಯ ಕಂಪನಿಗಳ ಕೈಗಾರಿಕಾ ವಸಾಹತುಗಳಾಗಿರುವುದು ತಿಳಿದುಬರುವ ಸಂಗತಿ. ಬಹುರಾಷ್ಟ್ರೀಯ ಕಂಪನಿಗಳಿಗೆ ಸಂಸ್ಕೃತಿಯ ಏಳುಬೀಳಿನ ಚರಿತ್ರೆಗಳು ಪ್ರಸ್ತುತವಾಗುವುದಿಲ್ಲ. ಅವರಿಗೆ ಲಾಭವೊಂದೇ ಮುಖ್ಯಗುರಿ. ಆ ಉದ್ದೇಶದ ಈಡೇರಿಕೆಗಾಗಿ ಸಂಸ್ಕೃತಿಯ ಯಾವ ಆಯಾಮಗಳನ್ನು ಕುರಿತು ಅವರು ಚಿಂತಿಸುವುದಿಲ್ಲ. ಕೋಟೆ ಕೊತ್ತಲಗಳಂತಹ ದೇವಾಲಯಗಳಂತಹ ಪ್ರಾಚೀನ ಅವಶೇಷಗಳ ಮಹತ್ವವನ್ನು ಅವು ಅರಿಯಲಾರವು. ಒಂದಿಲ್ಲೊಂದು ದಿನ ನಮ್ಮ ಸ್ಮಾರಕಗಳೆಲ್ಲವೂ ಬಹುರಾಷ್ಟ್ರೀಯ ಕಂಪನಿಗಳ ಕೈಗಾರಿಕಾ ವಸಾಹತುಗಳಾಗಿ ಪರಿಣಮಿಸುವುದರಲ್ಲಿ ಎರಡು ಮಾತಿಲ್ಲ. ಇಂತಹ ಸಂದರ್ಭದಲ್ಲಿ ನಮ್ಮ ಪರಂಪರೆಯ ತಾಣವೊಂದು ದಾಖಲಾಗಬೇಕು. ಅದರ ಚರಿತ್ರೆಯ ಮೇಲೆ ಬೆಳಕು ಚೆಲ್ಲಬೇಕು ಮತ್ತು ಬಹುರಾಷ್ಟ್ರೀಯ ಕಂಪನಿಗಳಿಂದ ಅಂತಹ ಜಾಗಗಳನ್ನು ಸಂರಕ್ಷಿಸಿಕೊಳ್ಳಬೇಕು ಎನ್ನುವ ಕಳಕಳಿ ನಮ್ಮ ಪೀಳಿಗೆಯ

ಜನರದ್ದಾಗಬೇಕು. ಈ ಹಿನ್ನೆಲೆಯಲ್ಲಿ ಕೊಪ್ಪಳದಂತಹ ನಗರ ಪ್ರದೇಶದ ಅಥವಾ ಅರೆನಗರ ಪ್ರದೇಶದ ಜೀವನ ಕ್ರಮಗಳನ್ನು ಚರಿತ್ರೆಯಾದ್ಯಂತ ಗ್ರಹಿಸಿ ಕ್ರೋಢೀಕರಿಸಿ ಪ್ರಕಟಿಸುವ ಕಾರ್ಯ ತುರ್ತಾಗಿ ಆಗಬೇಕಾಗಿದೆ.

ಕೊಪ್ಪಳದ ಸಾಂಸ್ಕೃತಿಕ ಅಧ್ಯಯನದಿಂದೇನು ಪ್ರಯೋಜನ ಎಂದು ಹಲವರು ಪ್ರಶ್ನಿಸಬಹುದು. ಪ್ರಾದೇಶಿಕ ಸಂಸ್ಕೃತಿಗಳು ನಾಶವಾಗುತ್ತಿರುವ ಹಿನ್ನೆಲೆಯಲ್ಲಿ ಕೊಪ್ಪಳವು ಒಂದು ಅಧ್ಯಯನದ ವಸ್ತುವಾಗಿದೆ. ಅದೀಗ ಹಳೆಯ ಜೀವನ ಕ್ರಮವನ್ನು ಮರೆತು ಆಧುನಿಕತೆಯೆಂಬ ಸೋಗನ್ನು ಹಾಕಿಕೊಳ್ಳುತ್ತಿದೆ. ಈ ಸನ್ನಿವೇಶದಲ್ಲಿ ಅದು ಹೊಸ ಸಂಸ್ಕೃತಿಯೊಂದರೊಡನೆ ಹೇಗೆ ಸಮನ್ವಯಗೊಳ್ಳುತ್ತಿರುವರೆಂಬುದು ಕುತೂಹಲದ ಸಂಗತಿ. ಈ ಕುತೂಹಲವು ಅಧ್ಯಯನ ಮಾಡಬೇಕು ಎಂಬ ಪ್ರೇರಣೆಯನ್ನು ನೀಡಿತು. ಬಹುರಾಷ್ಟ್ರೀಯ ಕಂಪನಿಗಳ ಹಿನ್ನೆಲೆಯಲ್ಲಿ ದುರ್ಬಲ ಸರ್ಕಾರಗಳು ರಚನೆಯಾಗುತ್ತವೆ. ಪ್ರಜಾಪ್ರಭುತ್ವವು ತನ್ನ ಬೇರುಗಳನ್ನು ಸಡಿಲಿಸಿಕೊಳ್ಳುತ್ತತ್ತದೆ. ಇಂತಹ ಸಂದರ್ಭದಲ್ಲಿ ಕೈಗಾರಿಕೆಗಳ ದೈತ್ಯಾಕಾರವಾಗಿ ಬೆಳೆಯುತ್ತಿವೆ. ಇಂತಹ ಬೆಳವಣಿಗೆಯ ಸನ್ನಿವೇಶದಲ್ಲಿ ಜನಗಳು ಹೊಸ ಪರಿಸರವೊಂದಕ್ಕೆ ಹೇಗೆ ಒಗ್ಗಿಸಿಕೊಳ್ಳುತ್ತಿದ್ದಾರೆ ಎಂಬುದು ಅಧ್ಯಯನದಿಂದ ಗೋಚರವಾಗುವ ಸಂಗತಿ. ಕೊಪ್ಪಳದ ಚರಿತ್ರೆಯಲ್ಲಿ ನಡೆದ ಹಲವು ಇಂಥ ಪ್ರಯೋಗಗಳ ಅಧ್ಯಯನದಿಂದ ಪ್ರಸ್ತುತ ಬದಲಾಗುತ್ತಿರುವ ಸಂದರ್ಭದ ಸಂಸ್ಕೃತಿಯನ್ನು ಗಮನಿಸಿ ಪರಿಸ್ಥಿತಿಯನ್ನು ಅರ್ಥೈಸಿಕೊಳ್ಳುವ ಪ್ರಯತ್ನವು ಇದಾಗಿದೆ. ಏಕೆಂದರೆ ಚರಿತ್ರೆಯಲ್ಲಿ ಕೊಪ್ಪಳ ಪ್ರದೇಶವು ಹಲವು ಇಂಥ ಸನ್ನಿವೇಶಗಳನ್ನು ಕಂಡಿದೆ. ಒಂದು ಕಾಲಕ್ಕೆ ಬೌದ್ಧ ಧರ್ಮೀಯರ ಆಡಳಿತ ಮತ್ತು ಬೌದ್ಧ ಧರ್ಮದ ಜೊತೆಗೆ ಹೊಂದಾಣಿಕೆಯನ್ನು ಆ ಪ್ರದೇಶ ಮಾಡಿಕೊಂಡಿದೆ. ಅನಂತರದ ಒಂದೂವರೆ ಸಾವಿರ ವರ್ಷಗಳಷ್ಟು ಕಾಲದಲ್ಲಿ ಮತ್ತೊಂದು ಧರ್ಮವಾದ ಜೈನಧರ್ಮ ಮತ್ತು ಜೈನಧರ್ಮದ ಆಡಳಿತ ಇವುಗಳಿಗೆ ಒಳಗಾಗಿ ತನ್ನ ಚರಿತ್ರೆಯನ್ನು ರೂಪಿಸಿಕೊಂಡಿದೆ. ಸಾಮ್ರಾಜ್ಯಗಳು ಬದಲಾದಂತೆ ಆಡಳಿತಾತ್ಮಕ ನೀತಿ ನಿರ್ಧಾರಗಳು ಬದಲಾಗುತ್ತವೆ. ಅನ್ಯಭಾಷಿಕ, ಅನ್ಯಧರ್ಮೀಯ ಆಡಳಿತಗಳು ವಿಚಿತ್ರ

ಸನ್ನಿವೇಶಗಳನ್ನು ರೂಪಿಸುವಂಥ ನೀತಿ ನಿರ್ಧಾರಗಳನ್ನು ಹೊಂದುತ್ತವೆ ಎನ್ನುವ ಕುತೂಹಲ ಆ ಪ್ರದೇಶದ ಜನಸಾಮಾನ್ಯನಿಗೆ ಚರಿತ್ರೆಯಾದ್ಯಂತ ಇದೆ. ವಿಜಯನಗರದ ಅರಸರ ಸಂದರ್ಭದಲ್ಲಿ ರಾಜಧಾನಿಗೆ ಅತಿ ಸಮೀಪದಲ್ಲಿ ಇದ್ದುಕೊಂಡು ಬೇರೊಂದು ಧರ್ಮೀಯ, ಬೇರೊಂದು ಭಾಷಿಕರ ದಾಳಿಗೆ ತುತ್ತಾದ ಸಂದರ್ಭದಲ್ಲಿ ಜನತೆಯ ಭಯ ಆತಂಕಗಳು ಸಂಸ್ಕೃತಿ ಚರಿತ್ರೆಯಲ್ಲಿ ಕಾಣಸಿಗುತ್ತವೆ. ಇಸ್ಲಾಂ ಧರ್ಮದ ಸಾಮ್ರಾಜ್ಯದ ನೀತಿ ನಿರ್ಧಾರಗಳು, ಇಸ್ಲಾಂ ಧರ್ಮ ಮತ್ತು ಹಿಂದೂ ಜನತೆ ಮುಖಾಮುಖಿಯಾದಾಗ ಸಾಮ್ರಾಜ್ಯದ ಜನಸಾಮಾನ್ಯನ ಸ್ಪಂದನಗಳನ್ನು ನಮೂದು ಮಾಡುವ ಉದ್ದೇಶದಿಂದ ಅಧ್ಯಯನ ಮಾಡುವ ಸಹಜ ಕುತೂಹಲ ಉಂಟಾಯಿತು. ಸುಮಾರು ಆರುನೂರು ವರ್ಷಗಳ ಕಾಲ ಕೊಪ್ಪಳದ ಜನತೆ ಇಸ್ಲಾಂ ಮತೀಯರಿಂದ ಮತ್ತು ಉರ್ದುಭಾಷಿಕರಿಂದ ಆಳಿಸಿಕೊಂಡಿದೆ. ಅನಂತರ ಇಂಗ್ಲೀಷ್ ಭಾಷಿಕರ ಮತ್ತು ಕ್ರೈಸ್ತಧರ್ಮೀಯರ ಅಪ್ರತ್ಯಕ್ಷ ಆಳ್ವಿಕೆಗೆ ಒಳಪಟ್ಟಿದೆ. ಇಂತಹ ಸಂದರ್ಭಗಳಲ್ಲಿ ಅದು ಹೇಗೆ ಆಯಾ ಧರ್ಮೀಯರ ಆಯಾ ಭಾಷಿಕರ ಜೊತೆ ಸಮನ್ವಯ ಮಾಡಿಕೊಂಡಿದೆ ಎಂಬುದು ಕೌತುಕದ ವಿಚಾರ.

ನಮ್ಮ ಸಂದರ್ಭದಲ್ಲಿ ಕೊಪ್ಪಳ ಪ್ರದೇಶವು ಅಂತಹ ಮತ್ತೊಂದು ಸನ್ನಿವೇಶವನ್ನು ಕಂಡಿದೆ. ಪ್ರಜಾಪ್ರಭುತ್ವ ಅದರೊಟ್ಟಿಗೆ ಅಧಿಕಾರಶಾಹಿ ಮತ್ತು ವಸಾಹತುಶಾಹಿಗಳ ನೇರ ಆಕ್ರಮಣಗಳಿಗೆ ಒಳಗಾದ ಒಂದು ಪ್ರದೇಶದ ಚಾರಿತ್ರಿಕ ಹಿನ್ನೆಲೆಗಳನ್ನು ಅರಿತು ಅಲ್ಲಿ ಜನಸಾಮಾನ್ಯನು ಸಮನ್ವಯಗೊಳಿಸಿಕೊಳ್ಳುವ ನೆಲೆಗಳನ್ನು ಅರಿಯುವುದು ಪ್ರಸ್ತುತದ ಸಂಗತಿ. ನೇರವಾಗಿ ಜಾಗತೀಕರಣ ಜನಸಾಮಾನ್ಯನಿಗೆ ತಲುಪದಿದ್ದರೂ ಸರ್ಕಾರದ ನೀತಿನಿರ್ಧಾರಗಳ ಹಿನ್ನೆಲೆಯಲ್ಲಿ ಜಾಗತೀಕರಣದ ಹಿನ್ನೆಲೆಗೆ ಅವನು ಒಳಗಾಗುತ್ತಿದ್ದಾನೆ. ಕೊಪ್ಪಳದ ಸನ್ನಿವೇಶ ಇದರಿಂದ ಹೊರತಾಗಿಲ್ಲ. ಜನಸಾಮಾನ್ಯ ಅನಿಶ್ಚಿತ ಮಳೆಯಿಂದಾಗಿ ಅನಿಶ್ಚಿತ ಆರ್ಥಿಕ ವರ್ಷಗಳನ್ನು ಅನುಭವಿಸುತ್ತಿದ್ದಾನೆ. ಬಹುರಾಷ್ಟ್ರೀಯ ಕಂಪನಿಗಳು ರೂಪಿಸಿದ ಔದ್ಯೋಗಿಕ ಆಸರೆಗಳನ್ನು ಅನಿವಾರ್ಯವಾಗಿ ಅವಲಂಬಿಸಬೇಕಾದ ಸ್ಥಿತಿ ಅಲ್ಲಿ ಈಗ ವಿಪರ್ಯಾಸವಾಗಿದೆ. ಕೃಷಿ ಕ್ಷೇತ್ರ ಅನಿಶ್ಚಿತವಾದಂತಹ ಹಂತಕ್ಕೆ ತಲುಪಿದೆ. ಮುಂದುವರೆದ ರಾಷ್ಟ್ರಗಳ

ಕೃಷಿ ತಂತ್ರಜ್ಞಾನ ಮತ್ತು ಅತ್ಯಾಧುನಿಕ ಕೈಗಾರಿಕಾ ತಂತ್ರಜ್ಞಾನಗಳು ಕೈಗೆಟುಕಲಾರದ ಸನ್ನಿವೇಶದಲ್ಲಿ ಜನಸಾಮಾನ್ಯನು ಏನನ್ನು ಅವಲಂಬಿಸಬೇಕು ಎಂಬ ಗೊಂದಲಕ್ಕೆ ಒಳಗಾಗಿರುವನು. ಬಹುರಾಷ್ಟ್ರೀಯ ಕಂಪನಿಯ ಸಂಸ್ಕೃತಿಗೆ ಅವನು ಒಳಗಾಗಬೇಕಾಗಿದೆ. ಅದೊಂದೇ ಅವನಿಗೆ ದಾರಿ. ಚರಿತ್ರೆಯಾದ್ಯಂತ ಇಂತಹ ಸಮನ್ವಯವನ್ನು ಆ ಪ್ರದೇಶದ ನಾಗರಿಕ ರೂಢಿಸಿಕೊಂಡಿರುವುದು ತಿಳಿದುಕೊಳ್ಳುವ ಸಹಜ ಕುತೂಹಲವೇ ಈ ಅಧ್ಯಯನಕ್ಕೆ ಕಾರಣವಾಯಿತು.

ಕೊಪ್ಪಳದ ಬಗೆಗೆ ಹಲವು ಅಧ್ಯಯನಗಳು ನಮ್ಮ ಸಂದರ್ಭದಲ್ಲಿ ಏರ್ಪಟ್ಟಿವೆ. ಈಗ್ಗೆ ಎರಡು ಶತಮಾನಗಳಿಂದ ಅಲ್ಲಿ ಸಾಂಸ್ಕೃತಿಕ ಸನ್ನಿವೇಶಗಳನ್ನು ಕುರಿತು ಅಧ್ಯಯನಗಳು ಹಲವು ಮುಖವಾಗಿ ಏರ್ಪಟ್ಟಿವೆ. ಕ್ರಿಶ್ಚಿಯನ್ ಮಿಶನರಿಗಳು ಎರಡು ಶತಮಾನಗಳಷ್ಟು ಹಿಂದೆಯೇ ಅಲ್ಲಿಗೆ ಬಂದು ಶಾಸನ, ಕೈಫಿಯತ್ತುಗಳು, ಬಖೈರುಗಳು, ಗ್ರಂಥಸಂಪಾದನೆ, ಚರಿತ್ರೆಯ ಮರುನಿರ್ಮಾಣ, ಧರ್ಮಪ್ರಸಾರದಂತಹ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ತೊಡಗಿದ್ದರು. ಅನಂತರ ಪಿ.ಬಿ. ದೇಸಾಯಿಯವರು, ನ.ಭ.ಶಾಸ್ತ್ರಿ ಮುಂತಾದ ಸ್ಥಳೀಯ ವಿದ್ವಾಂಸರು ಕೊಪ್ಪಳದ ಚರಿತ್ರೆಯನ್ನು ರೂಪಿಸಿಕೊಡಲು ತೊಡಗಿದರು. ಈ ನಿಟ್ಟಿನಲ್ಲಿ ಹಂಪಾ ನಾಗರಾಜಯ್ಯ ಅವರ ಚಂದ್ರಕೊಡೆ, ಕೊಪ್ಪಳದ ಶಾಸನಗಳು ಮುಖ್ಯ ಪ್ರಕಟಣೆಗಳು. ಗವಿದೀಪ್ತಿ, ತಿರುಳ್ಗನ್ನಡ ಮುಂತಾದ ಸ್ಮರಣಸಂಚಿಕೆಗಳು ಕೊಪ್ಪಳದ ಚರಿತ್ರೆಯ ನಿರೂಪಣೆಗೆ ತೊಡಗಿದವು. ಕನ್ನಡ ವಿಶ್ವವಿದ್ಯಾಲಯವು ಸಂಪಾದಿಸಿದ ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಕೊಪ್ಪಳ ಜಿಲ್ಲೆಯ ದೇವಾಲಯಗಳ ಮೇಲೆ ಹಾಕಿಕೊಂಡ ಯೋಜನೆಗಳು ಮತ್ತೊಂದು ಪ್ರಮುಖ ಸಾಂಸ್ಕೃತಿಕ ಅಧ್ಯಯನವಾಗಿ ರೂಪಗೊಂಡವು. ಬಿ.ಸಿ.ಪಾಟೀಲರು ಸ್ಥಾನಿಕ ವಿದ್ವಾಂಸರಾಗಿ ಕೊಪ್ಪಳದ ಪರಂಪರೆಯ ಬಗೆಗೆ ಶೋಧಿಸಿದವರಾಗಿದ್ದಾರೆ. ಈ ಎಲ್ಲಾ ಪ್ರಕಟಣೆಗಳನ್ನವಲಂಬಿಸಿ ಕೊಪ್ಪಳದ ಚರಿತ್ರೆಯನ್ನು ಪುನಾರಚಿಸುವ ಕುತೂಹಲದಿಂದ ಅಧ್ಯಯನಕ್ಕೆ ತೊಡಗಿಕೊಳ್ಳಲಾಯಿತು.

ಸಂಸ್ಕೃತಿ ಸಂಶೋಧನೆ ಕೇವಲ ಬೌದ್ಧಿಕ ಪರಿಶ್ರಮ ಮಾತ್ರವಲ್ಲ; ಇಂದಿನ ಸಮಾಜದ ಸಮುದಾಯಗಳ ಭವಿಷ್ಯತ್ತಿಗೆ ಸಹಾಯಕವಾಗಬೇಕು. ಸಾಂಸ್ಕೃತಿಕ ಅನನ್ಯತೆಯನ್ನು ಸ್ಥಾಪಿಸುತ್ತಲೇ ಆ ಅನನ್ಯತೆ ಬೃಹತ್ ಸಾಂಸ್ಕೃತಿಕ ಕಥನದ ಒಂದು ಅಂಶವನ್ನಾಗಿ ಪರಿಗಣಿಸಬೇಕು. ಅದನ್ನು ಹಾಗೆನ್ನುವಂತೆ ಮನಗಾಣಿಸಬೇಕು. ಒಂದು ಪ್ರದೇಶದ ಎಲ್ಲ ವಲಯಗಳ ಚಿಂತನೆಗಳು ವಿವಿಧ ಆಯಾಮಗಳನ್ನು ಹೊಂದಿ ಅವು ಚರ್ಚಿತವಾಗಬೇಕು. ಇವೆಲ್ಲವನ್ನು ಒಳಗೊಂಡಂತೆ ನಮ್ಮ ಸಂಸ್ಕೃತಿ ಚಿಂತನೆಗಳು ಹಾಗೂ ಸಂಶೋಧನೆಗಳು ಬೆಳೆಯಬೇಕಾಗಿದೆ. ಈ ನಿಟ್ಟಿನಲ್ಲಿ ಇದೊಂದು ಸಣ್ಣ ಪ್ರಯತ್ನ ಮಾತ್ರ.

## ೧.೧ ಅಧ್ಯಯನದ ಉದ್ದೇಶ ಮತ್ತು ತಾತ್ವಿಕತೆ

೧೮-೧೯ ಮತ್ತು ೨೦ನೇ ಶತಮಾನದಲ್ಲಿಯ ಪಾಶ್ಚಿಮಾತ್ಯರು ಹಾಕಿಕೊಟ್ಟ ಅಧ್ಯಯನ ಶಿಸ್ತುಗಳಲ್ಲಿ ಚರಿತ್ರೆಯೂ ಒಂದು. ಅನೇಕ ಶಿಸ್ತುಗಳನ್ನು ಹುಟ್ಟು ಹಾಕಿದ ಹಿರಿಮೆ ವಸಾಹತು ಕಾಲಘಟ್ಟದ್ದು. ಚರಿತ್ರೆಯ ಬಗೆಗೆ ಬೆಳಕು ಚೆಲ್ಲಲು ನಮ್ಮಲ್ಲಿದ್ದ ಆಕರಗಳು ಚೆಲ್ಲಾಪಿಲ್ಲಿಯಾಗುತ್ತಿದ್ದ ಸಂದರ್ಭದಲ್ಲಿ ವಸಾಹತು ಕಾಲಘಟ್ಟದಲ್ಲಿನ ಬ್ರಿಟಿಷ್ ಅಧಿಕಾರಿಗಳು ಮತ್ತು ಕ್ರೈಸ್ತ ಮಿಶನರಿಗಳು ಅವುಗಳ ಕ್ರೋಢೀಕರಣಕ್ಕೆ ನಾಂದಿ ಹಾಡಿದರು. ನಮಗೊಂದು ಅಂದರೆ ಭಾರತೀಯರಿಗೊಂದು ಸಮಗ್ರ ಚರಿತ್ರೆಯಿದೆ. ನಮಗೊಂದು ಸಾಂಸ್ಕೃತಿಕ ಪರಂಪರೆಯಿದೆ. ಅಲ್ಲಿ ಸಾಹಿತ್ಯ ವಿಪುಲವಾಗಿ ಬೆಳೆದಿದೆ. ವಾಸ್ತುಕಲೆ ಮತ್ತು ಲಲಿತಕಲೆಗಳು ಹುಲುಸಾಗಿ ಬೆಳೆದಿವೆ ಎನ್ನುವ ಸಂಗತಿಯನ್ನು ತೋರಿಸಿಕೊಟ್ಟವರು ಅವರಾಗಿದ್ದಾರೆ. ಧರ್ಮ ಕಾರಣಕ್ಕಾಗಿ ಇಡೀ ರಾಷ್ಟ್ರವನ್ನು ಅಲೆದು ಅವರು ಮಾಹಿತಿಗಳನ್ನು ಸಂಗ್ರಹಿಸಿದರು. ಅವರು ಸಂಗ್ರಹಿಸಿಕೊಟ್ಟ ಅದೆಷ್ಟೋ ಆಕರಗಳು ನಮಗಿಂದು ಚರಿತ್ರೆಯ ಬಗೆಗಿನ ಪ್ರಾಥಮಿಕ ಹೊಳಹುಗಳಾಗಿವೆ. ಚರಿತ್ರೆಯ ಕಾಲಾನುಕ್ರಮಣಿಕೆಯ ನಿರ್ಧಾರ, ಅವರ ಮುಂದಿದ್ದ ಏಕಮೇವ ಉದ್ದೇಶ ಜೊತೆಗೆ ಸಾಹಿತ್ಯಚರಿತ್ರೆಯ ಶಿಸ್ತುಬದ್ಧ ಅಧ್ಯಯನಗಳು ನಮಗಿಂದು ಕೊಡುಗೆಗಳಾಗಿವೆ. ಪ್ರಕೃತ ಅಧ್ಯಯನಕ್ಕೆ ಹಲವು ಉದ್ದೇಶಗಳನ್ನು ಹಾಕಿಕೊಳ್ಳಲಾಗಿದೆ. ಕ್ರೈಸ್ತ

ಮಿಶನರಿಗಳು ಬಿಟ್ಟು ಹೋದ ಪೊಸಿಟಿವಿಸ್ಟ್ ಮಾದರಿಯ ಅಧ್ಯಯನ ಒದಗಿಸಿದ ಆಕರಗಳನ್ನು ಐಡಿಯಲಿಸ್ಟ್ ಆಲೋಚನೆಗಳಲ್ಲಿ ಇಟ್ಟು ನೋಡುವಂಥ ಪ್ರೇರಣೆಯಿಂದ ಅಧ್ಯಯನದ ಉದ್ದೇಶಗಳನ್ನು ಕಂಡುಕೊಳ್ಳಲಾಗಿದೆ.

೧. ಕೊಪ್ಪಳ ಪ್ರದೇಶವು ತುಂಬಾ ಕುತೂಹಲಕರವಾದ ಚರಿತ್ರೆಯನ್ನು ಒಳಗೊಂಡಿದೆ. ಈ ಕುತೂಹಲಕ್ಕೆ ಕಾರಣವಾದ ಅಂಶಗಳು ಹಲವು. ಅವುಗಳಲ್ಲಿ ಪ್ರಾಗೈತಿಹಾಸಿಕ ಕಾಲಘಟ್ಟದಿಂದ ಜನವಸತಿ ಪ್ರದೇಶವಾಗಿ ನಮ್ಮ ಸಂದರ್ಭದವರೆಗೆ ಮುಂದುವರಿದು, ಏಕಘನಾಕೃತ ಚರಿತ್ರೆಯನ್ನು ನಿರೂಪಿಸಿಕೊಂಡು ಬಂದಿದೆ. ಇದಕ್ಕೆ ಕಾರಣವಾದ ಅಂಶಗಳನ್ನು ಕಂಡುಕೊಳ್ಳುವುದು ಮತ್ತು ಅವುಗಳ ಬಗೆಗೆ ಆದರ್ಶವಾದಿ ಆಲೋಚನೆಗಳ ಜೊತೆಗೆ ಮುಖಾಮುಖಿಯಾಗುವುದು ಪ್ರಸ್ತುತ ಅಧ್ಯಯನದ ಉದ್ದೇಶಗಳಲ್ಲಿ ಒಂದಾಗಿದೆ.

೨. ಕೊಪ್ಪಳದ ಭೌಗೋಳಿಕ ಪ್ರದೇಶವು ಬೆಟ್ಟ ಗುಡ್ಡಗಳಿಂದಾವೃತವಾಗಿದೆ. ತುಸು ದೂರದಲ್ಲಿ ತುಂಗಭದ್ರಾ ನದಿ ಹರಿಯುತ್ತಿದೆ. ಕೃಷಿಯೋಗ್ಯವಾದ ಫಲವತ್ತಾದ ಭೂಮಿಯು ಮತ್ತೊಂದೆಡೆ ದೊರಕುತ್ತಿದೆ. ಅನತಿ ದೂರದಲ್ಲಿಯೇ ಕೈಗಾರಿಕೆಗೆ ಯೋಗ್ಯವಾದ ಗುಣಮಟ್ಟದ ಖನಿಜ ಸಂಪನ್ಮೂಲಗಳನ್ನು ಹೊಂದಿದೆ. ಇಂಥ ಸಂದರ್ಭದಲ್ಲಿ ಕೊಪ್ಪಳ ಪ್ರದೇಶದ ಜನರ ಬದುಕು ಬವಣೆಗಳು ಚರಿತ್ರೆಯಲ್ಲಿ ಹೇಗೆ ನಿರೂಪಿತವಾಗಿವೆ ಎಂಬುದನ್ನು ಕಂಡುಕೊಳ್ಳುವುದು ಮತ್ತು ಮುಂದೆ ಬದುಕು ಬವಣೆಗಳು ಪಡೆದುಕೊಳ್ಳಬಹುದಾದಂತಹ ತಿರುವುಗಳನ್ನು ಕುರಿತು ಅಧ್ಯಯನವು ಆಲೋಚಿಸುತ್ತಾ ಹೊರಡುತ್ತದೆ.

೩. ಈಜಿಪ್ಟ್, ಬೆಬಿಲೋನಿಯಾ, ಸೈಂಧವ, ಮುಂತಾದ ನಾಗರಿಕತೆಗಳಿಗೆ ಕೊಪ್ಪಳದ ಪ್ರಾಗೈತಿಹಾಸಿಕ ನೆಲೆಗಳನ್ನು ಹೋಲಿಸಿ ನೋಡುವುದು ಮತ್ತು ಸಾಮ್ಯ ವೈಷಮ್ಯತೆಗಳನ್ನು ಸೂಕ್ಷ್ಮವಾಗಿ

ಗುರುತಿಸುವುದು, ಸಿಕ್ಕ ಆಕರಗಳ ಹಿನ್ನೆಲೆಯಲ್ಲಿ ಚರಿತ್ರೆಯನ್ನು ಪುನಾರಚಿಸುವುದು ಮುಂತಾದ ಆಶಯಗಳನ್ನು ಅಧ್ಯಯನವು ಒಳಗೊಂಡಿದೆ.

೪. ಧರ್ಮಗಳ ವಿಷಯವು ತುಂಬ ಸೂಕ್ಷ್ಮವಾದುದು. ಜನವಸತಿ ಪ್ರದೇಶಗಳಲ್ಲಿ ಧಾರ್ಮಿಕ ಸೂಕ್ಷ್ಮತೆಗಳು ಸಂಸ್ಕೃತಿಯನ್ನೇ ಅಲ್ಲೋಲಕಲ್ಲೋಲ ಮಾಡುವಂಥ ಸನ್ನಿವೇಶಗಳನ್ನು ನಿರ್ಮಾಣ ಮಾಡುತ್ತವೆ. ನಮ್ಮ ಸಂದರ್ಭದ ಭಾರತದಲ್ಲೂ ಧರ್ಮದ ವಿಷಯ ಬಂದಾಗ ಅತ್ಯಂತ ಹೆಚ್ಚು ಜಾಗರೂಕರಾಗುವುದು ನಮಗೆ ತಿಳಿದ ಸಂಗತಿ. ಆಚಾರ-ವಿಚಾರ, ನಡೆ-ನುಡಿ ಮುಂತಾದ ವಿಷಯಗಳಲ್ಲಿ ಧರ್ಮದ ನೇರ ಪ್ರಭಾವವಿರುತ್ತದೆ. ಧಾರ್ಮಿಕನಾದ ವ್ಯಕ್ತಿ ಮಾಡಬೇಕಾದ ಕಾರ್ಯಗಳು ಹಲವು. ಧಾರ್ಮಿಕಅಂಶವು ಅವನ ಅಧ್ಯಾತ್ಮಿಕ ಜಗತ್ತಿಗೆ ತೀರ ಹತ್ತಿರದ ಸಂಬಂಧವನ್ನು ಹೊಂದಿರುತ್ತದೆ. ಈ ಎಲ್ಲ ಅಂಶಗಳು ಸಂಸ್ಕೃತಿಯ ಅಂತರಂಗದಲ್ಲಿ ನಿರಂತರವಾಗಿ ಕೆಲಸ ಮಾಡುತ್ತಿರುತ್ತವೆ. ಧಾರ್ಮಿಕ ಆಕ್ರಮಣಗಳನ್ನು ಯಾವ ವ್ಯಕ್ತಿಯೂ ಸಹಿಸನು. ಪ್ರಪಂಚವು ಧರ್ಮದ ಹಿನ್ನೆಲೆಯಲ್ಲಿ ಹೋಳು ಹೋಳಾಗಿದೆ. ಈ ಎಲ್ಲ ನಿದರ್ಶನಗಳು ನಮ್ಮ ಮುಂದಿದ್ದರೂ ಕೊಪ್ಪಳ ಪ್ರದೇಶದ ಜನತೆ ನಿರಂತರವಾಗಿ ಧಾರ್ಮಿಕ ವಿಷಯವಾಗಿ ಹಲವು ಬದಲಾವಣೆಗಳನ್ನು ಕಂಡುಂಡವರಾಗಿದ್ದಾರೆ. ಅಲ್ಲಿ ನಡೆದ ಧಾರ್ಮಿಕ ಆಗುಹೋಗುಗಳ ಬಗೆಗೆ ಮುಖಾಮುಖಿಯಾಗುವುದು ಪ್ರಸ್ತುತ ಅಧ್ಯಯನದ ಮಹತ್ವದ ಉದ್ದೇಶಗಳಲ್ಲೊಂದಾಗಿದೆ. ಏಕೆಂದರೆ ಅಲ್ಲಿ ಬೌದ್ಧ, ಜೈನ, ವೈಷ್ಣವ, ಶೈವ-ವೀರಶೈವ, ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳು ಒಂದಿಲ್ಲೊಂದು ರೀತಿಯಲ್ಲಿ ಸಾಮ್ರಾಜ್ಯವನ್ನು ನಿರ್ಮಾಣ ಮಾಡಿವೆ. ಜೊತೆಗೆ ಹಲವು ಸಾಮ್ರಾಜ್ಯಗಳು ನಿರ್ನಾಮವನ್ನು ಹೊಂದಿವೆ. ಇಂತಹ ಎಲ್ಲ ಸಂದಿಗ್ಧತೆಗಳು ಚರಿತ್ರೆಯಲ್ಲಿ ಬಂದು ಹೋಗಿವೆ. ಸೂಕ್ಷ್ಮ ವಿಚಾರಗಳನ್ನು ಅಧ್ಯಯನವು ವಿವಚಿಸುವ ಯೋಜನೆಯನ್ನು ಹೊಂದಿದೆ.

೫. ಕೊಪ್ಪಳ ಪ್ರದೇಶವನ್ನಾಳಿದ ರಾಜಕೀಯ ಮನೆತನಗಳನ್ನು ಕ್ರೋಢೀಕರಿಸುವ ಉದ್ದೇಶ ಪ್ರಸ್ತುತ ಅಧ್ಯಯನಕ್ಕಿದೆ. ಕೊಪ್ಪಳ ಪ್ರದೇಶ ಅದೆಷ್ಟು ಅರಸರುಗಳಿಂದ ಆಳಿಸಿಕೊಂಡಿತು, ಯಾವ ಯಾವ ಅರಸುಮನೆತನಗಳ ಕಾಲದಲ್ಲಿ ತನ್ನ ಪಾತ್ರವನ್ನು ಹಿರಿ-ಕಿರಿದು ಮಾಡಿಕೊಂಡಿತು ಎಂಬುದು ಕುತೂಹಲಕರ ಅಂಶ. ಆ ನಿಟ್ಟಿನಿಂದ ಇಲ್ಲಿ ಅಧ್ಯಯನವನ್ನು ಪ್ರಾರಂಭಿಸಲಾಗಿದೆ. ರಾಜಕೀಯ ಸಂಘಟನೆಗಳು ತಲೆದೋರಿದ ಕುರುಹಾಗಿ ಶಿಲಾಶಾಸನಗಳು, ಸಾಹಿತ್ಯ ಮತ್ತು ಸ್ಮಾರಕಗಳು ನಮಗೆ ವಿಪುಲವಾದ ಮಾಹಿತಿಯನ್ನು ಒದಗಿಸುತ್ತವೆ. ಕೊಪ್ಪಳದ ಸಂದರ್ಭದ ಮಾಹಿತಿಗಳ ಮೂಲಕ ಇದರ ಒಂದು ನಿರಂತರವಾದ ರಾಜಕೀಯ ಚರಿತ್ರೆಯನ್ನು ನಿರ್ಮಾಣ ಮಾಡುವ ಉದ್ದೇಶಗಳನ್ನು ಪ್ರಕೃತ ಅಧ್ಯಯನವು ಹೊಂದಿದೆ. ಇಲ್ಲಿ ಮೌರ್ಯರು, ಕದಂಬರು, ಗಂಗರು, ರಾಷ್ಟ್ರಕೂಟರು, ಸೇವುಣರು, ಶಿಲಾಹಾರರು, ಹೊಸಮಲೆಯ ದುರ್ಗದ ಅರಸರು, ಹೊಯ್ಸಳರು, ವಿಜಯನಗರದರಸರು, ಬಹಮನಿ ಸುಲ್ತಾನರು, ಬಿಜಾಪುರದ ಸುಲ್ತಾನರು, ಹೈದರಾಬಾದಿನ ನಿಜಾಮರು, ಬ್ರಿಟಿಷರು - ಹೀಗೆ ಹಲವು ಸಾಮ್ರಾಜ್ಯಗಳು ರಾಜಕೀಯವಾಗಿ ಪ್ರಣಾಳಿಕೆಗಳನ್ನು ರಚಿಸಿಕೊಂಡು ತಮ್ಮ ಆಡಳಿತದ ಕಸರತ್ತನ್ನು ತೋರಿಸಿಕೊಂಡಿವೆ. ಈ ಹಿನ್ನೆಲೆಯಲ್ಲಿ ಕೊಪ್ಪಳ ಪ್ರದೇಶದ ಆಡಳಿತಾತ್ಮಕ ಚರಿತ್ರೆಯನ್ನು ನಿಖರವಾಗಿಯಲ್ಲದಿದ್ದರೂ ಮಸುಕಾಗಿ ಹಿಡಿಯುವ ಪ್ರಯತ್ನವನ್ನು ಮಾಡಲಾಗಿದೆ. ನಿಖರವಾಗಿ ಆಡಳಿತಾತ್ಮಕ ಚರಿತ್ರೆಯನ್ನು ನಿರೂಪಿಸಲು ಹಲವು ಕೊರತೆಗಳಿವೆ. ಈ ದೃಷ್ಟಿಯಿಂದ ಅಧ್ಯಯನವನ್ನು ಒಂದು ಸೀಮಿತ ವಲಯಕ್ಕೆ ಅಳವಡಿಸಿಕೊಳ್ಳಲಾಗಿದೆ.

೬. ಕೊಪ್ಪಳ ಪ್ರದೇಶವಿಂದು ಆರ್ಥಿಕ ಚಟುವಟಿಕೆಗಳಲ್ಲಿ ಅತ್ಯಂತ ಹಿಂದುಳಿದ ಪ್ರದೇಶವೆಂದೇ ಹೇಳಬಹುದು. ಕೃಷಿಯನ್ನು ಅವಲಂಬಿಸಿದ ಜನರು ಅನಿಶ್ಚಿತ ಮಳೆಯಿಂದಾಗಿ ಕಂಗಾಲಾಗಿದ್ದಾರೆ. ಪ್ರಾಗೈತಿಹಾಸಿಕ ಕಾಲಘಟ್ಟದಿಂದ ಇಂದಿನವರೆಗೂ ಜನನಿಬಿಡ ಪ್ರದೇಶವಾದ ಇದು ಆರ್ಥಿಕ ಚಟುವಟಿಕೆಗೆ ಮತ್ತು ಅದರ ನಿರ್ವಹಣೆಗೆ ಏನನ್ನು ಅವಲಂಬಿಸಿದೆ ಎನ್ನುವುದು ಮತ್ತೊಂದು

ಕುತೂಹಲಕಾರಿಯಾದ ಅಂಶ. ಈ ಹಿನ್ನೆಲೆಯಲ್ಲಿ ಒಂದು ವಿಶದವಾದ ಚರ್ಚೆಯನ್ನು ಅಧ್ಯಯನದಲ್ಲಿ ಏರ್ಪಡಿಸಿಕೊಳ್ಳಲಾಗಿದೆ. ಏಕೆಂದರೆ ಆರ್ಥಿಕ ಅಂಶಗಳು ಯಾವತ್ತೂ ಜೀವನದಲ್ಲಿ ಮಹತ್ವದ ಸಂಗತಿಗಳು. ಚರಿತ್ರೆ ಇಂಥ ವಿಷಯಗಳಲ್ಲಿ ಹೇಗೆ ತನ್ನ ಬೆಳಕನ್ನು ಚೆಲ್ಲುತ್ತದೆ ಎಂಬುದು ಗಮನಿಸಬೇಕಾದ ಅಂಶ. ಆದುದರಿಂದ ಅಧ್ಯಯನದಲ್ಲಿ ಆರ್ಥಿಕ ಅಂಶಗಳನ್ನು ಅನುಲಕ್ಷಿಸಿ ಚರ್ಚಿಸಿಕೊಳ್ಳಲಾಗಿದೆ.

೭. ಶಿಕ್ಷಣಕ್ರಮವು ಇಂದು ಬಹಳ ಚರ್ಚೆಯ ವಸ್ತುವಾಗಿದೆ. ಅದರ ಮಾಧ್ಯಮ ಏನಾಗಿರಬೇಕು, ನಮ್ಮ ಆರ್ಥಿಕ, ಸಾಮಾಜಿಕ, ಬೌದ್ಧಿಕ ಹಿನ್ನೆಲೆಗೆ ತಕ್ಕಂಥ ಶಿಕ್ಷಣದ ಅಗತ್ಯ ಬರುವ ಶತಮಾನಗಳಲ್ಲಿ ನಾವು ಹೊಂದಬೇಕಾಗಿದೆ. ಇಂಥ ಸನ್ನಿವೇಶದಲ್ಲಿ ಕೊಪ್ಪಳ ಸಾಂಸ್ಕೃತಿಕ ಪರಿಸರದಲ್ಲಿ ಚರಿತ್ರೆಯುದ್ದಕ್ಕೂ ಬಳಸಿಕೊಂಡಿದ್ದ ಶಿಕ್ಷಣ ಕ್ರಮವನ್ನು ಕುರಿತು ಅಧ್ಯಯನಿಸುವ ಉದ್ದೇಶ ನಮ್ಮದಾಗಿದೆ. ಗುರುಕುಲ ಪದ್ಧತಿಯ ಅಗ್ರಹಾರ ಶಿಕ್ಷಣ ಪದ್ಧತಿಯು ಚರಿತ್ರೆಯಲ್ಲಿ ನೆಲೆನಿಂತಿರುವುದು ತಿಳಿದುಬರುವ ಅಂಶ. ಈ ನಿಟ್ಟಿನಲ್ಲಿ ಚರಿತ್ರೆಯ ಮೇಲೆ ಬೆಳಕು ಹಾಯಿಸಿ ಕರ್ನಾಟಕದಲ್ಲಿ ಮತ್ತು ಕೊಪ್ಪಳ ಪರಿಸರದಲ್ಲಿರುವ ಅಗ್ರಹಾರಗಳನ್ನು ಗುರುತಿಸುವುದು ಮತ್ತು ಅವುಗಳು ಅಲ್ಲಿ ನೆಲೆಗೊಂಡುದುದರ ಬಗೆಗೆ ವಿಪುಲವಾಗಿ ಚರ್ಚಿಸುವುದು ಈ ಅಧ್ಯಯನದ ಆಶಯಗಳಲ್ಲಿ ಒಂದಾಗಿದೆ.

೮. ಚರಿತ್ರೆಯ ಸಂದರ್ಭದಲ್ಲಿ ಸಾಮಾಜಿಕ ಸ್ಥಿತಿಗತಿಗಳನ್ನು ಚರ್ಚಿಸುವುದು ಒಂದು ಕ್ರಮ. ಆ ಕ್ರಮವರಿತು ಅಧ್ಯಯನದಲ್ಲಿ ಚರಿತ್ರೆಯಾದ್ಯಾಂತ ಸಾಮಾಜಿಕ ಪರಿಸ್ಥಿತಿಗಳನ್ನು ಗುರುತು ಹಾಕುವ ಕೆಲಸವನ್ನು ಪ್ರಸ್ತುತ ಅಧ್ಯಯನ ತನ್ನ ಗುರಿಯನ್ನಾಗಿರಿಸಿಕೊಂಡಿದೆ. ಏಕೆಂದರೆ ಯಾವುದೇ ಸಾಂಸ್ಕೃತಿಕ ಅಧ್ಯಯನವು ಸಾಮಾಜಿಕ ಅಧ್ಯಯನಗಳಿಂದ ಹೊರತಾಗಿರುವುದಿಲ್ಲ. ಸಂಸ್ಕೃತಿ ಮೈದಾಳುವುದೇ ಸಾಮಾಜಿಕ ಸಂದರ್ಭದಲ್ಲಿ. ಸಂಸ್ಕೃತಿಯು ಏಕವ್ಯಕ್ತಿಯಿಂದ ಸಂಭವಿಸತಕ್ಕದ್ದಲ್ಲ.

ಸಂಸ್ಕೃತಿ ಸಂಭವಿಸಬೇಕಾದರೆ ಒಂದು ಆಕೃತಿ ಬೇಕು. ಆ ಆಕೃತಿಯು ಕೇವಲ ಒಂದು ಅಥವಾ ಎರಡರಿಂದ ಸಂಭವಿಸಲಾರದು. ಅದಕ್ಕೆ ಮೂರರ ಅಗತ್ಯವಿರುತ್ತದೆ. ಒಂದು ತ್ರಿಕೋನವು ಎರಡು ರೇಖೆಗಳಿಂದ ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಒಂದು ಸಂಸ್ಕೃತಿ ಮೈದಾಳಬೇಕಾದರೆ ಒಂದೋ ಅಥವಾ ಎರಡು ಸಂಗತಿಗಳಿಂದ ಆಗದು. ಅದಕ್ಕೆ ಮೂರನೆಯ ಆಯಾಮವು ಬೇಕಾಗುತ್ತದೆ. ಈ ಮೂರು ಆಯಾಮಗಳಿಂದಲೇ ಸಂಸ್ಕೃತಿ ರೂಪುಗೊಳ್ಳುತ್ತದೆ. ಸಂಸ್ಕೃತಿ ಮುಖಿಯಾದ ಸಮಾಜವು ಕೊಪ್ಪಳ ಪ್ರದೇಶದಲ್ಲಿ ಹುಟ್ಟಿಕೊಂಡದ್ದು ಯಾವಾಗ, ವಿವಿಧ ಕಾಲಘಟ್ಟಗಳಲ್ಲಿ ಸಮಾಜವು ಸಂಸ್ಕೃತಿಯನ್ನು ಹೇಗೆ ಕಟ್ಟಿಕೊಟ್ಟಿತು, ಸಮಾಜದ ವಿಸಂಗತಿಗಳು ಹೇಗೆ ಸಂಸ್ಕೃತಿಯನ್ನು ವಿಘಟನೆಗೊಳಿಸಿದವು ಈ ಎಲ್ಲಾ ವಿವರಗಳನ್ನು ಈ ಅಧ್ಯಯನವು ಒಳಗೊಳ್ಳುವ ಯೋಜನೆಯನ್ನು ಹಾಕಿಕೊಂಡಿದೆ.

೯. ಕೊಪ್ಪಳ ಪರಿಸರದಲ್ಲಿ ಸುಮಾರು ೨೦೦ಕ್ಕೂ ಹೆಚ್ಚು ಶಾಸನಗಳನ್ನು ಕಾಣಬಹುದು. ಈ ಶಾಸನಗಳ ವ್ಯವಸ್ಥಿತ ಅಧ್ಯಯನ ನಡೆಯಬೇಕಾಗಿದೆ. ಈ ಹಿನ್ನೆಲೆಯಲ್ಲಿ ಯಾವ ಶಾಸನ ಯಾವ ಮನೆತನದ್ದು, ಆ ಶಾಸನ ಬರೆಸಿಕೊಳ್ಳಲು ಕಾರಣವಾದ ಅಂಶಗಳಾವುವು, ಆ ಶಾಸನಗಳ ಸಾಂದರ್ಭಿಕ ತುರ್ತು ಅಗತ್ಯವೇನಿತ್ತು ಮುಂತಾದ ವಿಷಯಗಳ ಬಗೆಗೆ ಆದರ್ಶವಾದಿ ವಿಚಾರಗಳೊಂದಿಗೆ ಅಧ್ಯಯನವು ಚರ್ಚಿಸ ಹೊರಟಿದೆ. ಈ ಹಿನ್ನೆಲೆಯಲ್ಲಿ ಕೊಪ್ಪಳದ ಸಮಗ್ರ ಶಾಸನಗಳನ್ನು ಅನುಲಕ್ಷಿಸಿ ಅವುಗಳ ವಿವಿಧ ಆಯಾಮಗಳನ್ನು ಚರ್ಚಿಸಲಾಗುವುದು.

೧೦. ಕೊಪ್ಪಳದ ಕೋಟೆಯ ಬಗೆಗೆ ಚರಿತ್ರೆಯಲ್ಲಿ ಮಹತ್ವದ ಪಾತ್ರವಿರುವುದು ತಿಳಿದುಬರುತ್ತದೆ. ಕೊಪ್ಪಳದಂತಹ ವಿಚಿತ್ರ ಪರಿಸರವಿರುವ ಸನ್ನಿವೇಶದಲ್ಲಿ ಕೋಟೆಯು ನಿರ್ಮಾಣವಾದ ಬಗೆ ಅಳವಡಿಸಿಕೊಂಡಿರುವ ತಂತ್ರಜ್ಞಾನ, ಅದರ ನಿರ್ಮಾಣದ ಅಗತ್ಯ ಇನ್ನಿತರ ಅಂಶಗಳನ್ನು ಚರಿತ್ರೆಯ ಪುಟಗಳನ್ನು ತಿರುವಿ ನೋಡುವಂತಹ ಕಾರ್ಯಕ್ಕೆ ಅಧ್ಯಯನವು ಕೈಹಾಕಿದೆ. ಏಕೆಂದರೆ

ಆ ಕೋಟೆಯನ್ನು ಯಾರು ಕಟ್ಟಿಸಲು ಆರಂಭಿಸಿದರು ಎಂಬುದು ಚರಿತ್ರೆಯ ವಿದ್ವಾಂಸರಿಗೆ ಸವಾಲಾದ ಸಂಗತಿಯಾಗಿದೆ. ಭೇಟಿ ಕೊಟ್ಟ ನೂರಾರು ಚರಿತ್ರೆಕಾರರು ಈ ವಿಷಯವನ್ನು ಕುರಿತು ಇನ್ನೂ ಸಮರ್ಪಕವಾಗಿ ಅಧ್ಯಯನ ಮಾಡಲಾಗಿಲ್ಲ. ಇಂತಹ ಸಂದರ್ಭದಲ್ಲಿ ಕೊಪ್ಪಳದ ಕೋಟೆಯ ಬಗೆಗೆ ಒಂದು ಸರಳರೇಖಾತ್ಮಕ ಚರ್ಚೆಯನ್ನು ಅಧ್ಯಯನವು ಒಳಗೊಂಡಿದೆ.

೧೧. ನಿಷಿಧಿಕಲ್ಲುಗಳು ವೀರಗಲ್ಲುಗಳು ಮುಂತಾದವುಗಳು ಕನ್ನಡ ನಾಡಿನ ಸಂಸ್ಕೃತಿಯ ಜೀವಾಳದ ಸಂಕೇತವಾಗಿವೆ. ಇವುಗಳ ಬಗೆಗೆ ಒಂದು ಸಮರ್ಥ ಚರ್ಚೆಯನ್ನು ಅಧ್ಯಯನದಲ್ಲಿ ಎತ್ತಿಕೊಳ್ಳಲಾಗಿದೆ. ಕೊಪ್ಪಳದಲ್ಲಿ ದೊರಕಿರುವ ನಿಷಿಧಿಕಲ್ಲುಗಳು, ವೀರಗಲ್ಲುಗಳ ಮಹತ್ವವನ್ನು ತಲಸ್ಪರ್ಶಿಯಾಗಿ ಇಲ್ಲಿ ಚರ್ಚಿಸುವ ಉದ್ದೇಶವನ್ನು ಅಧ್ಯಯನವು ಹೊಂದಿದೆ.

೧೨. ಕೊಪ್ಪಳವನ್ನು ಕೇಂದ್ರಭೂಮಿಕೆಯನ್ನಾಗಿರಿಸಿಕೊಂಡು ಕೊಪ್ಪಳದ ಪ್ರಾದೇಶಿಕ ಚರಿತ್ರೆಯನ್ನು ದಾಖಲು ಮಾಡುವ ಉದ್ದೇಶದಿಂದ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ. ಪ್ರತಿಯೊಂದು ಕನ್ನಡ ನಾಡಿನ ಗ್ರಾಮಗಳು ತನ್ನದೇ ಆದ ಚರಿತ್ರೆಗಳನ್ನು, ಸಾಂಸ್ಕೃತಿಕ ಮಹತ್ವವನ್ನು (Cultural Significence) ಗುರುತಿಸಿಕೊಂಡಿವೆ. ಈ ನಿಟ್ಟಿನಲ್ಲಿ ಪ್ರಾದೇಶಿಕ ಸಂಸ್ಕೃತಿಗಳು ವಿನಾಶದ ಅಂಚಿನಲ್ಲಿರುವಾಗ ಕೊಪ್ಪಳದ ಸಾಂಸ್ಕೃತಿಕ ವಿವರಗಳ ದಾಖಲಾತಿಯು ಹೆಚ್ಚು ಪ್ರಸ್ತುತವಾಗತೊಡಗುತ್ತದೆ. ಇಂತಹ ಸಂದರ್ಭದಲ್ಲಿ ಒಂದು ದಾಖಲಾತಿ ಎನ್ನುವಂಥ ಪ್ರಕ್ರಿಯೆಯನ್ನು ಅಳವಡಿಸಿಕೊಂಡು ಇಡೀ ಕೊಪ್ಪಳದ ಬಗೆಗೆ ಚಾರಿತ್ರಿಕ ಎಲ್ಲ ಸಂಗತಿಗಳನ್ನು ದಾಖಲು ಮಾಡುವ ಉದ್ದೇಶವನ್ನು ಪ್ರಸ್ತುತ ಅಧ್ಯಯನವು ಹೊಂದಿದೆ.

ಆನುಷಂಗಿಕ ನೆಲೆಯಲ್ಲಿ ಅಧ್ಯಯನವು ಇತರ ಉದ್ದೇಶಗಳನ್ನು ಹೊಂದಿದೆ. ಕೊಪ್ಪಳದ ಜೊತೆಗೆ ಸುತ್ತ ಮುತ್ತಣ ಪ್ರದೇಶಗಳ ಬಗೆಗೆ ಹೆಚ್ಚು ಮಹತ್ವದ ವಿಚಾರಗಳನ್ನು ದಾಖಲು ಮಾಡುವುದು. ಒಂದು ಸೀಮಿತ ಅವಕಾಶವನ್ನು ಉಪಯೋಗಿಸಿಕೊಂಡು ಕರ್ನಾಟಕ ಚರಿತ್ರೆಯೆಂಬ ಅಖಂಡ ಇತಿಹಾಸಕ್ಕೆ

ಕೆಲವು ಮಾಹಿತಿಗಳನ್ನು ಒದಗಿಸುವುದು, ಭಾರತೀಯ ಸಂಸ್ಕೃತಿಯೊಂದಿಗೆ ಕೊಪ್ಪಳ ಪ್ರದೇಶದ ಸಂಸ್ಕೃತಿಯು ಹೇಗೆ ಪೂರಕವಾದ ಅಂಶಗಳನ್ನು ನೀಡುತ್ತದೆ ಎಂಬುದನ್ನು ಗುರುತಿಸುವುದು - ಮುಂತಾದ ಉದ್ದೇಶಗಳನ್ನು ಅಧ್ಯಯನದಲ್ಲಿ ಹೊಂದಲಾಗಿದೆ. ನಮ್ಮ ಸಂದರ್ಭದಲ್ಲಿ ಅನೇಕ ಸಂಸ್ಕೃತಿ ಅಧ್ಯಯನಗಳು ನಡೆಯುತ್ತಿವೆ. ಇಂತಹ ಅಧ್ಯಯನಗಳಲ್ಲಿ ಕೊಪ್ಪಳ ಪ್ರದೇಶದ ಸಾಂಸ್ಕೃತಿಕಅಧ್ಯಯನವನ್ನು ಸೇರ್ಪಡೆಗೊಳಿಸುವುದು ಒಂದು ಔಚಿತ್ಯದ ವಿಚಾರವೆಂದು ತೋರುತ್ತದೆ. ಆ ನಿಟ್ಟಿನಲ್ಲಿ ಇಲ್ಲಿ ಕೊಪ್ಪಳ ಪ್ರದೇಶಕ್ಕೆ ಸಂಬಂಧಿಸಿದಂತೆ ಸಾಂಸ್ಕೃತಿಕ ಚರ್ಚೆಗಳನ್ನು ಏರ್ಪಡಿಸಿಕೊಳ್ಳಲಾಗಿದೆ.

## ೧. ೨ ಅಧ್ಯಯನದ ತಾತ್ವಿಕತೆ

ಅಧ್ಯಯನದ ತಾತ್ವಿಕತೆಯನ್ನು ಸ್ವಲ್ಪದರಲ್ಲಿ ಹೇಳಬೇಕಾದರೆ, ಈಗಾಗಲೇ ಬೆಳಕಿಗೆ ಬಂದಿರುವಂಥ ಕೊಪ್ಪಳದ ಚರಿತ್ರೆಯನ್ನು ಸರಳರೇಖಾತ್ಮಕವಾಗಿ ರೂಪಿಸುವುದು ಮತ್ತು ಕೊಪ್ಪಳವು ಚಾರಿತ್ರಿಕವಾಗಿ ಸಾಂಸ್ಕೃತಿಕ ಕೇಂದ್ರವಾಗಿತ್ತೆಂಬುದನ್ನು ಪ್ರತಿಪಾದಿಸುವುದು ಹಾಗೆಯೇ ವಿವಿಧ ಧರ್ಮೀಯರ ಆಡಳಿತದಲ್ಲಿ ಕೊಪ್ಪಳದ ಜನತೆಯು ಸಾಧಿಸಿಕೊಂಡು ಬಂದ ಸಮನ್ವಯ ಸಾಧ್ಯತೆಯನ್ನು ಅಧ್ಯಯನ ಮಾಡುವುದು, ಆಧುನಿಕ ಜಗತ್ತಿನೊಡನೆ ಕೊಪ್ಪಳದ ಜನತೆ ಸಮನ್ವಯ ಸಾಧಿಸಿಕೊಳ್ಳಲು ಹವಣಿಸುತ್ತಿರುವ ಹಲವು ವಿವರಗಳನ್ನು ಚರಿತ್ರೆಯನ್ನು ಮುಂದಿಟ್ಟುಕೊಂಡು ಚರ್ಚಿಸುವುದು ಜೊತೆಗೆ ಚಾರಿತ್ರಿಕ ಅಂಶಗಳನ್ನು ಸಾಧಾರವಾಗಿ ಕಾಲಾನುಕ್ರಮಣಿಕೆಯೊಂದಿಗೆ ಜೋಡಿಸಿಡುವುದು. ಈ ಎಲ್ಲಾ ಅಂಶಗಳು ಪೊಸಿಟಿವಿಸ್ಟ್ ಅಧ್ಯಯನದ ಮಾದರಿಯಲ್ಲಿ ಗ್ರಹಿಸಿ ಐಡಿಯಲಿಸ್ಟ್ ಆಲೋಚನೆಗಳಲ್ಲಿ ವಿಶ್ಲೇಷಿಸುವಂತಹ ಕ್ರಮವನ್ನು ಅನುಸರಿಸಿ ಅಧ್ಯಯನದ ತಾತ್ವಿಕತೆಯನ್ನು ರೂಪಿಸಿಕೊಳ್ಳಲಾಗಿದೆ.

## ೧. ೩ ಅಧ್ಯಯನದ ಸ್ವರೂಪ ಹಾಗೂ ಚೌಕಟ್ಟು

ಕೊಪ್ಪಳವು ಕನ್ನಡ ನಾಡಿನಲ್ಲಿ ಒಂದು ಸಾಂಸ್ಕೃತಿಕ ಮಹತ್ವದ ಸ್ಥಳ. ಇಲ್ಲಿ ಸಂಸ್ಕೃತಿಯ ಬಗೆಗೆ ನಡೆದ ಪ್ರಯೋಗಗಳು ಹತ್ತುಹಲವು. ಅವುಗಳನ್ನು ಹೆಕ್ಕಿ ವಿಶ್ಲೇಷಣೆಯ ಜಾಡಿನಲ್ಲಿ ಸರಳರೇಖಾತ್ಮಕವಾಗಿ ನಿರೂಪಿಸಬೇಕಾಗಿದೆ. ಈ ಪ್ರಯತ್ನಗಳು ಕೊಪ್ಪಳದ ಅಧ್ಯಯನದ ಸಂದರ್ಭದಲ್ಲಿ ಈವರೆಗು ನಡೆದಿಲ್ಲ. ಇಡೀ ಕೊಪ್ಪಳದ ಸಾಂಸ್ಕೃತಿಕ ಅಂಶಗಳನ್ನು ಒಂದು ಪ್ರಣಾಳಿಯಲ್ಲಿ ಹಿಡಿದಿಡುವ ಪ್ರಯತ್ನವು ತುರ್ತಾಗಿ ಆಗಬೇಕಾಗಿರುವ ಕಾರ್ಯ. ಜಾಗತೀಕರಣದ ಹಿನ್ನೆಲೆಯಲ್ಲಿ ಪ್ರಾದೇಶಿಕ ಸಂಸ್ಕೃತಿಗಳು ನಾಶವಾಗಿಹೋಗುವ ಅಪಾಯವನ್ನು ತಿಳಿದುಕೊಳ್ಳಲಾಗಿದೆ. ಈ ಹಿನ್ನೆಲೆಯಲ್ಲಿ ಕೊಪ್ಪಳ ಪ್ರದೇಶದ ಸಾಂಸ್ಕೃತಿಕ ಆಯಾಮಗಳನ್ನು ವ್ಯವಸ್ಥಿತಗೊಳಿಸಿ ಶಿಸ್ತುಬದ್ಧವಾಗಿ ರೂಪಿಸಬೇಕೆಂಬ ಬದ್ಧ ಆಶಯದಿಂದ ಅಧ್ಯಯನವನ್ನು ಎತ್ತಿಕೊಳ್ಳಲಾಗಿದೆ. ಇಲ್ಲಿ ಅಧ್ಯಯನಕಾರನು ಹೆಚ್ಚು ತೊಂದರೆಗಳನ್ನು ಎದುರಿಸಬೇಕಾಗಿ ಬಂದಿದೆ. ಆಕರಗಳನ್ನು ಜೋಡಿಸಿಕೊಳ್ಳುವಲ್ಲಿ ಆಧಾರಗಳನ್ನು ನಿರೂಪಿಸುವಲ್ಲಿ ಅನೇಕ ಸಮಸ್ಯೆಗಳು ತಲೆದೋರುತ್ತವೆ. ಒಂದು ಸಾಂಸ್ಕೃತಿಕ ಅಧ್ಯಯನವೆಂದಮೇಲೆ ಇಂತಹ ಸಂದಿಗ್ಧತೆಗೆ ಒಳಗಾಗುವುದು ಸಹಜವಾಗಿದೆ. ಇಲ್ಲಿ ಅಧ್ಯಯನ ಕೈಕೊಂಡ ಬಗೆಯನ್ನು ಈ ಕೆಳಗಿನಂತೆ ಹೇಳಬಹುದು:

೧. ಅಧ್ಯಯನವು ಸರಳರೇಖಾತ್ಮಕವಾಗಿದ್ದು ಸರಳ ನಿರೂಪಣೆಗಳನ್ನು ಹೊಂದಿದೆ. ಹಲವಾರು ಗೊಂದಲದ ವಿಷಯಗಳನ್ನು ತೀರ ಸರಳವಾಗಿ ನಿರೂಪಿಸಲಾಗಿದೆ. ಕಷ್ಟಕರವೆನ್ನುವ ಪರಿಸ್ಥಿತಿಯಲ್ಲಿ ಎಲ್ಲರೂ ಅದನ್ನು ಗ್ರಹಿಸುವ ಮಟ್ಟಿಗೆ ಭಾಷಿಕ ನೆಲೆಯಲ್ಲಿ ತಂತ್ರಗಳನ್ನು ಅಳವಡಿಸಿಕೊಳ್ಳಲಾಗಿದೆ. ಏಕೆಂದರೆ ಹಳಗನ್ನಡದ, ಸಂಸ್ಕೃತದ ಮತ್ತು ಪ್ರಾದೇಶಿಕವಾದ ಭಾಷೆಗಳು ಸಕಲರನ್ನು ಮುಟ್ಟಲಾರವು. ಈ ಕಾರಣದಿಂದ ಅತ್ಯಂತ ಜಾಗರೂಕವಾಗಿ ಭಾಷೆಯನ್ನು ಬಳಸಿಕೊಂಡು ವಿಷಯಗಳನ್ನು ನಿರೂಪಿಸಲಾಗಿದೆ.

೨. ಅಧ್ಯಯನವು ಪೊಸಿಟಿವಿಸ್ಟ್ ಆಲೋಚನೆಗಳಿಂದ ವಿವರಗಳನ್ನು ಗ್ರಹಿಸಿಕೊಂಡು ಅವುಗಳನ್ನು ಐಡಿಯಲಿಸ್ಟ್ ಆಲೋಚನೆಗಳಲ್ಲಿ ವಿಶ್ಲೇಷಿಸಿಕೊಳ್ಳಲಾಗಿದೆ. ಏಕೆಂದರೆ ಪೊಸಿಟಿವಿಸ್ಟ್‌ರ ಅಧ್ಯಯನಗಳು ನಮಗೆ ವಸಾಹತು ಕಾಲಘಟ್ಟದಿಂದ ದೊರೆಯುತ್ತವೆ. ಮಿಶನರಿಗಳು ನವೋದಯ ಕಾಲದ ದೇಶೀಯ ವಿದ್ವಾಂಸರುಗಳು ಹಾಕಿಕೊಟ್ಟ ಮಾದರಿ ಇದಾಗಿದೆ. ಸಂಸ್ಕೃತಿ ಅಧ್ಯಯನಗಳಲ್ಲಿ ಈ ಮಾದರಿ ಹೆಚ್ಚು ಜನಪ್ರಿಯವಾದದ್ದು. ಇದು ಆಕರಮುಖಿಯಾದ ಪ್ರಯತ್ನವಾಗಿರುತ್ತದೆ. ಇಲ್ಲಿ ಆಕರಗಳಿದ್ದರೆ ಚರಿತ್ರೆಯಿದ್ದೀತು ಎನ್ನುವ ಧೋರಣೆಯಿದೆ. ಆರ್.ನರಸಿಂಹಾಚಾರ್ ಅವರಿಂದ ಹುಟ್ಟಿಕೊಂಡ ಈ ಮಾದರಿಯು ಕನ್ನಡದ ಪ್ರಸಿದ್ಧ ವಿದ್ವಾಂಸರುಗಳಾದ ಡಾ. ಹೆಚ್. ತಿಪ್ಪೇರುದ್ರಸ್ವಾಮಿ, ಡಾ. ಚಿದಾನಂದಮೂರ್ತಿ, ಡಾ. ಎಂ.ಂ. ಕಲಬುರ್ಗಿ, ರಾಷ್ಟ್ರಕವಿ ಗೋವಿಂದಪೈ, ಮುಳಿಯತಿಮ್ಮಪ್ಪಯ್ಯ ನಮ್ಮ ಸಂದರ್ಭದ ಡಾ. ಬಿ. ರಾಜಶೇಖರಪ್ಪ, ಡಾ. ರು.ಮ. ಷಡಕ್ಷರಯ್ಯ, ಡಾ.ಬಸವರಾಜ್, ಡಾ.ಸೂರ್ಯನಾಥ ಕಾಮತ್, ಡಾ.ಶೇಕ್ ಆಲಿ ಮುಂತಾದ ವಿದ್ವಾಂಸರು ಆಕರಮುಖಿಯಾಗಿ ಚರಿತ್ರೆಯನ್ನು ಕಟ್ಟುವ ಪ್ರಯತ್ನವನ್ನು ಮಾಡಿದರು. ಈ ಪ್ರಯತ್ನದಲ್ಲಿ ಯಶಸ್ಸು ಕಂಡರೂ ಅವು ಈಗ ಐಡಿಯಲಿಸ್ಟ್ ಆಲೋಚನೆಗಳಲ್ಲಿ ವಿಶ್ಲೇಷಿಸಿಕೊಳ್ಳಬೇಕಾಗಿದೆ. ಈ ಹಿನ್ನೆಲೆಯಲ್ಲಿ ಕೊಪ್ಪಳ ಪ್ರದೇಶದಲ್ಲಿ ದೊರೆತ ಅನೇಕ ಶಾಸನಗಳು, ಸ್ಮಾರಕಗಳು ಮತ್ತು ಇತರ ಆಕರಗಳಿಂದ ಸಂಗ್ರಹಿಸಲಾದ ಮಾಹಿತಿಯನ್ನು ಹಲವು ನಿಟ್ಟುಗಳಿಂದ ವಿವೇಚಿಸುವ ಕಾರ್ಯವನ್ನು ಇಲ್ಲಿ ಮಾಡಲಾಗಿದೆ. ಗೌಣವೆನಿಸಿದ ವಿಷಯಗಳನ್ನು ಬಿಟ್ಟು ಮಹತ್ವವೆನ್ನಿಸಿದ ವಿಷಯಗಳನ್ನು ಹೆಚ್ಚು ಚರ್ಚಿಸಲಾಗಿದೆ. ಅಧ್ಯಯನಕಾರ ಇಲ್ಲಿ ವಿಶ್ಲೇಷಣೆಯ ಸ್ವಾತಂತ್ರ್ಯವನ್ನು ಅನುಸರಿಸಿದ್ದಾನೆ.

೩. ಸಂಸ್ಕೃತಿ ಅಧ್ಯಯನಗಳುರೂಪಗೊಳ್ಳುವಲ್ಲಿ ಒಂದು ಕ್ರಮವನ್ನು ಅನುಸರಿಸುತ್ತವೆ. ಅವುಗಳಲ್ಲಿ ಮೊದಲನೆಯ ಸ್ತರದ ಅಧ್ಯಯನವು ಆಕರ ಸಂಗ್ರಹಣೆಗೆ ಮಾತ್ರ ಸೀಮಿತವಾಗಿರುತ್ತದೆ. ಹಲವು ಸಂಶೋಧನಾ ಗ್ರಂಥಗಳು ಮಾಹಿತಿ ಸಂಗ್ರಹಣೆಯ ನೆಲೆಯಲ್ಲಿ ಪರ್ಯವಸಾನಗೊಳ್ಳುತ್ತವೆ.

ಎರಡನೆಯ ಸ್ತರವು ವರ್ಣನಾತ್ಮಕ ಸಂಶೋಧನೆಯಾಗಿದ್ದು ಇಲ್ಲಿ ಸಂಗ್ರಹಿಸಿಕೊಳ್ಳಲಾದ ಅಥವಾ ಈಗಾಗಲೇ ಸಂಗ್ರಹಿಸಿರುವ ಆಕರಗಳಿಗೆ ವಿಶ್ಲೇಷಣೆಯನ್ನು ಹಲವು ಆಯಾಮಗಳ ನಿಟ್ಟಿನಲ್ಲಿ ನೋಡಲಾಗುತ್ತದೆ. ಇದು ಎರಡನೆಯ ಸ್ತರದ ಸಂಶೋಧನೆ. ಮೂರನೆಯದು ವ್ಯಾಖ್ಯಾನ ನೆಲೆಯ ಸಂಶೋಧನೆ. ಇಲ್ಲಿ ಸಂಗ್ರಹಿಸಿಕೊಂಡಿರುವ ಆಕರಗಳು ಮತ್ತು ವಿಶ್ಲೇಷಣೆಗೊಂಡಿರುವ ಆಕರಗಳನ್ನು ಅಧ್ಯಯನಿಸಿ ಹೊಸ ವ್ಯಾಖ್ಯಾನಗಳನ್ನು ಮತ್ತು ಆದರ್ಶವಾದಿ ಆಲೋಚನೆಗಳನ್ನು ನೀಡುವಂಥಹ ಅಧ್ಯಯನ ಕ್ರಮ ಇದಾಗಿದೆ. ಇದು ತುಂಬ ಕಠಿಣವಾದ ಕೆಲಸ. ಹೆಚ್ಚು ಪರಿಶ್ರಮದ ಅಗತ್ಯ ಇದಕ್ಕಿರುತ್ತದೆ. ವೃತ್ತಿ ಸಂಶೋಧಕರು ಅನೇಕ ವಿಶ್ವವಿದ್ಯಾಲಯಗಳಲ್ಲಿ ಈ ಹಿನ್ನೆಲೆಯ ಅಧ್ಯಯನಕ್ಕೆ ತೊಡಗಿಕೊಂಡಿದ್ದಾರೆ. ಅಂಥಹವರಲ್ಲಿ ಡಾ. ಎಸ್. ಎಸ್.ಶೆಟ್ಟರ್, ಡಾ. ಸೂರ್ಯನಾಥ ಕಾಮತ್, ಡಾ. ಶೇಕ್ ಆಲಿ ಮುಂತಾದವರನ್ನು ಹೆಸರಿಸಬಹುದು. ಇವು ಅಕಾಡೆಮಿಕ್ ಶಿಸ್ತುಗಳ ಮೂಲಕ ರೂಪಿತವಾಗುತ್ತವೆ.

ಪ್ರಕೃತದ ಅಧ್ಯಯನವು ಎರಡನೆಯ ನೆಲೆಯ ಸಂಶೋಧನೆಯಾಗಿದ್ದು, ಈಗಾಗಲೇ ಸಂಗ್ರಹಿಸಿರುವ ಆಕರ ಸಾಮುಗ್ರಿಗಳನ್ನು ಒಂದೆಡೆ ಕ್ರೋಢೀಕರಿಸಿ ಅವುಗಳನ್ನು ಹಲವು ನೆಲೆಗಳಲ್ಲಿ ವಿಶ್ಲೇಷಣೆಗೊಳಪಡಿಸಿಕೊಳ್ಳಲಾಗಿದೆ. ಕನ್ನಡ ವಿಶ್ವವಿದ್ಯಾನಿಲಯವು ಸಂಪಾದಿಸಿಕೊಟ್ಟ ಕೊಪ್ಪಳ ಜಿಲ್ಲೆಯ ಸಮಗ್ರ ಶಾಸನಗಳು, ಹಂಪಾ ನಾಗರಾಜಯ್ಯನವರು ಸಂಪಾದಿಸಿದ ಕೊಪ್ಪಳದ ಶಾಸನಗಳು -ಪ್ರಕಟಣೆಗಳು ಈ ಸಂಸ್ಕೃತಿ ಅಧ್ಯಯನದ ಪ್ರಮುಖ ಆಕರ ಸಾಮಗ್ರಿಗಳಾಗಿದ್ದು ಅವುಗಳ ಹಿನ್ನೆಲೆಯಲ್ಲಿ ಅಖಂಡ ಕರ್ನಾಟಕದ ಮತ್ತು ಕೊಪ್ಪಳದ ಚರಿತ್ರೆಯನ್ನು ಪುನಾರಚಿಸುವ ಪ್ರಕ್ರಿಯೆಯನ್ನು ಇಲ್ಲಿ ಮಾಡಲಾಗಿದೆ.

೪. ಅಧ್ಯಯನವು ಒಟ್ಟು ೯ ಅಧ್ಯಾಯಗಳನ್ನೊಳಗೊಂಡಿದ್ದು ಪ್ರತಿಯೊಂದು ಅಧ್ಯಾಯವು ಸ್ವತಂತ್ರ ನಿರೂಪಣೆಯನ್ನು ಹೊಂದಿದೆ. ಆದರೆ ವಿಷಯಗಳನ್ನು ಪ್ರತಿಪಾದಿಸುವಲ್ಲಿ ಒಂದಕ್ಕೊಂದು ಪೂರಕವಾದ ಮಾಹಿತಿಯನ್ನು ಒಳಗೊಂಡಿದೆ. ಮೊದಲನೆಯ ಅಧ್ಯಾಯನವನ್ನು ಸಂಪೂರ್ಣವಾಗಿ

ಅಧ್ಯಯನದ ತಾಂತ್ರಿಕ ಸ್ವರೂಪಗಳಿಗೆ ಮೀಸಲಿಡಲಾಗಿದೆ. ಎರಡನೆಯ ಅಧ್ಯಾಯವು ನಮ್ಮ ಸಂದರ್ಭದ ಕೊಪ್ಪಳದ ಬಗೆಗೆ ವಿವರಗಳನ್ನು ನೀಡುತ್ತದೆ. ಅದನ್ನು ಈ ಅಧ್ಯಯನದ ಹಿನ್ನೆಲೆಯಲ್ಲಿ ಪೂರಕ ಮಾಹಿತಿಗಾಗಿ ಆಯೋಜಿಸಿಕೊಳ್ಳಲಾಗಿದೆ. ಅಲ್ಲಿ ಭೌಗೋಳಿಕ ಸ್ಥಳನಿರ್ದೇಶನ ಮತ್ತು ಕೊಪ್ಪಳ ನಗರ ಮತ್ತು ಅದರ ಸುತ್ತಮುತ್ತಣ ಪ್ರದೇಶ ಹೊಂದಿಕೊಂಡಿರುವ ಎಲ್ಲ ಆಯಾಮಗಳನ್ನು ಕುರಿತು ಹೇಳಲಾಗಿದೆ. ಮೂರನೇ ಅಧ್ಯಾಯವು ಪ್ರಾಗೈತಿಹಾಸಿಕ ಕಾಲಘಟ್ಟದಲ್ಲಿ ಕೊಪ್ಪಳದ ಭೌಗೋಳಿಕ ಪ್ರದೇಶದಲ್ಲಿ ಜನವಸತಿಯಿತ್ತೆ ಎಂಬುದರ ಬಗೆಗೆ ಒಂದು ವಿಶದವಾದ ಚರ್ಚೆಯನ್ನು ಏರ್ಪಡಿಸಿಕೊಳ್ಳಲಾಗಿದೆ. ಈ ಅಧ್ಯಾಯದಲ್ಲಿ ಹಳೆಯ ಶಿಲಾಯುಗ, ಮಧ್ಯ ಶಿಲಾಯುಗ, ನವಶಿಲಾಯುಗ ಮತ್ತು ಬೃಹತ್ ಶಿಲಾಯುಗವೆಂದು ಸಾಂಪ್ರದಾಯಿಕ ಅಧ್ಯಯನಗಳ ಮೂಲಕ ಕೊಪ್ಪಳ ಪ್ರದೇಶವನ್ನಿಟ್ಟು ಚರ್ಚಿಸಿಕೊಳ್ಳಲಾಗಿದೆ. ನಾಲ್ಕನೆಯ ಅಧ್ಯಾಯವು ಅಧ್ಯಯನದ ಕೇಂದ್ರ ಪರಿಸರವನ್ನು ಹೊಂದುತ್ತದೆ. ಏಕೆಂದರೆ ಈವರೆಗೆ ಕೊಪ್ಪಳ ಪ್ರದೇಶವನ್ನಾಳಿದ ರಾಜಮನೆತನಗಳ ಬಗೆಗೆ ಅವುಗಳ ಆಡಳಿತದ ನೀತಿ-ನಿರ್ಧಾರಗಳ ಬಗೆಗೆ ಚರ್ಚಿಸಿಕೊಳ್ಳಲಾಗಿದೆ. ಕೊಪ್ಪಳ ಭೂಭಾಗವು ಯಾವ ಯಾವ ಅರಸರುಗಳಿಂದ ಆಳಿಸಿಕೊಳ್ಳಲ್ಪಟ್ಟಿದೆ ಎಂಬುದರ ಸ್ಥೂಲ ಚರ್ಚೆ ಇಲ್ಲಿದೆ. ಅಧ್ಯಾಯ ಐದರಲ್ಲಿ ಕೊಪ್ಪಳದ ಕಲೆ ಮತ್ತು ವಾಸ್ತುಶಿಲ್ಪವನ್ನು ಚರ್ಚಿಸಲಾಗಿದೆ. ಇದರಲ್ಲಿ ಕೊಪ್ಪಳದ ಕೋಟೆಯ ವಾಸ್ತುರಚನೆಯನ್ನು ಕುರಿತು ವಿವರವಾಗಿ ಚರ್ಚಿಸಲಾಗಿದೆ. ಹಲವು ಅರಸರುಗಳಿಂದ ಕಟ್ಟಿಸಲ್ಪಟ್ಟ ಕೋಟೆಯನ್ನು ಕುರಿತು ಸಮಗ್ರ ಮಾಹಿತಿಯನ್ನು ಕೊಡಲಾಗಿದೆ. ಕೋಟೆಯನ್ನು ಕಟ್ಟಲು ಆರಂಭಿಸಿದ ರಾಜರು ಯಾರೆಂಬುದು ಈವರೆಗೂ ದೊರೆಯ ಸಂಗತಿಯ ವಿವರಗಳನ್ನು ಚರ್ಚಿಸಿಕೊಳ್ಳಲಾಗಿದೆ. ಹಾಗೆಯೇ ಆ ಪ್ರದೇಶದ ದೇವಾಲಯಗಳ ವಾಸ್ತುಶಿಲ್ಪವನ್ನು ಅಧ್ಯಯನದ ಸೀಮಿತ ಅವಕಾಶದಲ್ಲಿ ಚರ್ಚಿಸಿಕೊಳ್ಳಲಾಗಿದೆ. ದೇವಾಲಯಗಳ ವಾಸ್ತುರಚನೆಯು ಕರ್ನಾಟಕ ಸಂಸ್ಕೃತಿಯ ವಾಸ್ತು ರಚನೆಗೆ ಹೇಗೆ ಪೂರಕವಾಗಿದೆ ಎಂಬ ವಿವರಗಳನ್ನು ಇಲ್ಲಿ ಚರ್ಚಿಸಲಾಗಿದೆ. ಆದರೆ ಕಲೆ-ಲಲಿತಕಲೆಗಳ ಬೆಳವಣಿಗೆಗಳನ್ನು ತಿಳಿಸಲು

ಆಕರಗಳು ನಿರ್ದಿಷ್ಟವಾಗಿ ದೊರೆಯದ ಹಿನ್ನೆಲೆಯಲ್ಲಿ ಅದನ್ನು ಅಧ್ಯಯನದಿಂದ ಕೈಬಿಡಲಾಗಿದೆ. ಅಧ್ಯಾಯ ಆರು ಕೊಪ್ಪಳದಲ್ಲಿ ಪರಿಸರದಲ್ಲಿ ನೆಲೆನಿಂತು ಚರಿತ್ರೆಯುದ್ದಕ್ಕೂ ಸಂವಾದಿಗೊಂಡ ಧರ್ಮಗಳ ಬಗೆಗೆ ವಿವೇಚನೆಯನ್ನು ಮಾಡಲಾಗಿದೆ. ಅಲ್ಲಿಗೆ ಧರ್ಮಗಳು ಬಂದ ಬಗೆ ಮತ್ತು ಅವು ಬೆಳವಣಿಗೆಗೊಂಡ ರೀತಿ ನೀತಿಗಳನ್ನು ಚರ್ಚಿಸಿಕೊಳ್ಳಲಾಗಿದೆ. ಈ ಹಿನ್ನೆಲೆಯಲ್ಲಿ ಬೌದ್ಧ, ಜೈನ, ಶೈವ-ವೀರಶೈವ, ವೈಷ್ಣವ, ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳನ್ನು ವಿವೇಚನೆ ಗೊಳಪಡಿಸಿ ಕೊಳ್ಳಲಾಗಿದೆ. ಅಧ್ಯಾಯ ಏಳು ಮತ್ತೊಂದು ಮಹತ್ವದ ವಿಷಯಗಳನ್ನು ಚರ್ಚಿಸುತ್ತದೆ. ಅಲ್ಲಿ ಕೊಪ್ಪಳದ ಶಿಲಾಶಾಸನಗಳನ್ನು ಅವು ಚರಿತ್ರೆಗೆ ಆಕರವಾದ ಬಗೆಗಳನ್ನು, ಧರ್ಮವನ್ನು ದಾನ-ದತ್ತಿಗಳನ್ನು ನೀಡಿದ ವಿವರಗಳನ್ನು ಕ್ರೋಢೀಕರಿಸಿ ಚರ್ಚಿಸಲಾಗಿದೆ. ಇಲ್ಲಿಯ ಸುಮಾರು ಎರಡು ನೂರು ಶಾಸನಗಳ ಆಶಯವನ್ನು ಗ್ರಹಿಸಲಾಗಿದೆ. ಜೊತೆಗೆ ಕೊಪ್ಪಳ ಜಿಲ್ಲೆಯಲ್ಲಿ ಕೊಪ್ಪಳದ ಚರಿತ್ರೆಗೆ ಪೂರಕವಾಗಿ ಬರುವಂಥ ಶಾಸನಗಳನ್ನು ಉಲ್ಲೇಖಿಸಿಕೊಂಡು ಚರಿತ್ರೆಯನ್ನು ಕಟ್ಟಿಕೊಡಬೇಕೆಂಬ ಉದ್ದೇಶದಿಂದ ಅಧ್ಯಯನ ಮಾಡಲಾಗಿದೆ. ಅಧ್ಯಾಯ ಎಂಟು ಸಮಾರೋಪ ಭಾಗವಾಗಿದ್ದು ಅಧ್ಯಯನದ ತಾತ್ವಿಕನೆಲೆಗಳನ್ನು ಅಧ್ಯಯನದ ಉದ್ದೇಶಗಳು ಹೇಗೆ ಅಧ್ಯಯನದಲ್ಲಿ ಸಫಲಗೊಂಡಿವೆ ಎಂಬುದರ ಮೌಲ್ಯಮಾಪನವನ್ನು ಮಾಡಿಕೊಳ್ಳಲಾಗಿದೆ. ಅಧ್ಯಯನದ ಉದ್ದೇಶಗಳಲ್ಲಿ ಯಾವ ಯಾವ ಅಂಶಗಳಲಿ ಕೊರತೆಯುಂಟಾಗಿದೆ ಅದಕ್ಕೆ ಕಾರಣವೇನೆಂಬುದನ್ನು ಅಲ್ಲಿ ಚರ್ಚಿಸಿಕೊಳ್ಳಲಾಗಿದೆ. ಅನುಬಂಧವು ಅಧ್ಯಯನಕ್ಕೆ ಪೂರಕವಾದ ನಕ್ಷೆಗಳನ್ನು, ಛಾಯಾಚಿತ್ರಗಳನ್ನು ಮತ್ತು ಪ್ರಮುಖ ಪರಾಮರ್ಶನ ಗ್ರಂಥಗಳನ್ನು, ಅಧ್ಯಯನಕ್ಕೆ ಪೂರಕ ಗ್ರಂಥಗಳ ಪಟ್ಟಿಯನ್ನು ಕೊಡಲಾಗಿದೆ. ಇದಿಷ್ಟು ಅಧ್ಯಯನದ ಭೌತಿಕ ಸ್ವರೂಪ.

೫. ಅಧ್ಯಯನದ ತಾಂತ್ರಿಕ ಸ್ವರೂಪಗಳೆಂದರೆ ಅಧ್ಯಯನ ಗ್ರಂಥವು ನಿರಂತರವಾಗಿ ಓದಿಸಿಕೊಂಡು ಹೋಗುವಂತೆ ವ್ಯವಸ್ಥೆಯನ್ನು ಮಾಡಲಾಗಿದೆ. ಈ ಹಿನ್ನೆಲೆಯಲ್ಲಿ ಅಡಿಟಿಪ್ಪಣಿಗಳನ್ನು ನೀಡಲಾಗಿಲ್ಲ. ಅಗತ್ಯವಿದ್ದಲ್ಲಿ ಅಲ್ಲಿಯೇ ಅದರ ವಿವರಗಳನ್ನು ಕೊಡಲಾಗಿದೆ.

## ೧. ೪ ಅಧ್ಯಯನದ ವ್ಯಾಪ್ತಿ

ಅಧ್ಯಯನವು ಹಲವಾರು ಘಟ್ಟಗಳನ್ನು ಹೊಂದಿದ್ದು ಚೌಕಟ್ಟನ್ನು ರೂಪಿಸಿಕೊಂಡಿದೆ. ಅಧ್ಯಯನದಲ್ಲಿ ಎಂಟು ಅಧ್ಯಾಯಗಳಿದ್ದು ಪ್ರತಿ ಅಧ್ಯಾಯದಲ್ಲಿಯೂ ಕೊಪ್ಪಳ ಪ್ರದೇಶದ ಮತ್ತು ಅದಕ್ಕೆ ಸಂಬಂಧಪಟ್ಟ ಚರಿತ್ರೆಯನ್ನು ಹೇಳುವಂಥ ಆಕರಗಳನ್ನು ಬಳಸಿಕೊಂಡಿದೆ ಆ ಆಕರಗಳು ಕೊಪ್ಪಳದ ಹೊರಗೂ ಸಿಕ್ಕಿರಬಹುದು. ಆವುಗಳನ್ನೆಲ್ಲಾ ಬಳಸಿಕೊಳ್ಳಲಾಗಿದೆ. ಅಧ್ಯಯನದ ಕಾಲದ ವ್ಯಾಪ್ತಿಯು ಪ್ರಾಗೈತಿಹಾಸಿಕ ಕಾಲಘಟ್ಟದಿಂದ ಹಿಡಿದು ಸ್ವಾತಂತ್ರ್ಯ ಚಳುವಳಿಯವರೆಗಿನ ಕೊಪ್ಪಳ ಪ್ರದೇಶದಲ್ಲಿ ಸಂಭವಿಸಿದ ಸಾಂಸ್ಕೃತಿಕ ಘಟನೆಗಳನ್ನು ಮಾತ್ರ ಚರ್ಚಿಸುವುದಾಗಿರುತ್ತದೆ. ಇದರಲ್ಲಿ ಗೌಣವೆನ್ನಿಸಿದ ವಿಷಯಗಳನ್ನು ಕೈಬಿಟ್ಟು ಸಾಂಸ್ಕೃತಿಕ ಮಹತ್ವವೆನ್ನಿಸಿದ ಮತ್ತು ಆ ಪ್ರದೇಶದಲ್ಲಿ ವಿಶೇಷವಾಗಿ ಕಂಡುಬರುವ ಸಂಸ್ಕೃತಿಯ ವಿವಿಧಮುಖಿ ಆಯಾಮಗಳನ್ನು ಮಾತ್ರ ಅಧ್ಯಯನವು ಒಳಗೊಂಡಿದೆ. ಈ ಹಿನ್ನೆಲೆಯಲ್ಲಿ ಕೆಲವು ವಿಷಯಗಳನ್ನು ಕೈಬಿಡಲಾಗಿದೆ. ಆವು ಸಂದರ್ಭಕ್ಕೆ ಅನಗತ್ಯವೆಂದು ಮತ್ತು ಸರಿಯಾದ ಆಕರಗಳಿಲ್ಲದ್ದರಿಂದ ಅವುಗಳಲ್ಲಿ ಅಧ್ಯಯನಕಾರ ಕೈಹಾಕದಿರುವುದು ಒಳಿತೆಂದು ಒಂದು ಸೀಮಿತ ಅವಕಾಶದವರೆಗೆ ಅಧ್ಯಯನದ ವ್ಯಾಪ್ತಿಯನ್ನು ರೂಪಿಸಿಕೊಳ್ಳಲಾಗಿದೆ. ಅಧ್ಯಯನವು ಆಕರ ಸಂಗ್ರಹಣೆ ಮತ್ತು ಸಂಗ್ರಹಿಸಿದ ಆಕರಗಳ ವಿಶ್ಲೇಷಣೆಯ ಸ್ಥರದಲ್ಲಿ ಮಾತ್ರ ನಡೆದಿದೆ. ಮೂರನೆಯ ಸ್ಥರವಾದ ವ್ಯಾಖ್ಯಾನ ನೆಲೆಗೆ ಅಧ್ಯಯನವು ಪ್ರವೇಶಿಸಿದೆಯಾದರೂ ಅದು ಅಧಿಕೃತವಲ್ಲವೆಂದು ನಿವೇದಿಸಲಾಗಿದೆ. ಕೊಪ್ಪಳದ ಕೋಟೆ ದೇವಾಲಯಗಳು, ಶಿಲಾಶಾಸನಗಳು ಮತ್ತು ಇನ್ನಿತರ ಅವಶೇಷಗಳನ್ನು ತುಂಬ ಲಕ್ಷ್ಯ ಕೊಟ್ಟು ಚರ್ಚಿಸಿಕೊಳ್ಳಲಾಗಿದೆ. ಆನುಷಂಗಿಕ ನೆಲೆಯಲ್ಲಿ ಕೊಪ್ಪಳದ ಸುತ್ತಮುತ್ತಲ ಕೋಟೆ-ಕೊತ್ತಲ ದೇವಾಲಯ, ಶಾಸನಗಳನ್ನು ಮತ್ತು ಇನ್ನಿತರ ಅವಶೇಷಗಳನ್ನು ಪೂರಕ ಅಧ್ಯಯನಕ್ಕಾಗಿ ಪಡೆದುಕೊಳ್ಳಲಾಗಿದೆ. ಆದರೆ ಅವುಗಳ ಬಗೆಗೆ ಅಧ್ಯಯನದಲ್ಲಿ ವಿಪುಲವಾದ ಮಾಹಿತಿ ಅನಗತ್ಯವೆಂದು ಸಂದರ್ಭಕ್ಕೆ ಅಗತ್ಯವಿದ್ದಷ್ಟನ್ನು ಮಾತ್ರ ಕೊಡಲಾಗಿದೆ. ಪ್ರಕೃತ ಅಧ್ಯಯನವು ಪೊಸಿಟಿವಿಸ್ಟ್ ಆಲೋಚನೆಗಳಿಂದ ವಿಷಯವನ್ನು ಗ್ರಹಿಸಿಕೊಂಡು ಐಡಿಯಲಿಸ್ಟ್ ಆಲೋಚನೆಗಳಲ್ಲಿ ವಿವರಿಸಿಕೊಳ್ಳುವ ವ್ಯಾಪ್ತಿಯನ್ನು ಹೊಂದಿದೆ.

# ಅಧ್ಯಾಯ -೨

# ಕೊಪ್ಪಳ : ಸಾಂಸ್ಕೃತಿಕ ಅಧ್ಯಯನದ ಪೂರ್ವ ಪೀಠಿಕೆ

೨.೧ ಭೌಗೋಳಿಕ ಸ್ಥಳ ನಿರ್ದೇಶನ ಮತ್ತು ಸಧ್ಯದ ಸ್ಥಿತಿಗತಿಗಳು

೨.೨ ಕೊಪ್ಪಳ : ಉಲ್ಲೇಖಗಳ ಚಾರಿತ್ರಿಕ ಅವಲೋಕನ

ಅಧ್ಯಾಯ -೨

# ಕೊಪ್ಪಳ : ಸಾಂಸ್ಕೃತಿಕ ಅಧ್ಯಯನದ ಪೂರ್ವ ಪೀಠಿಕೆ

ಕ್ರಿ. ಪೂ. ಸುಮಾರು ೪೫೦೦ ವರ್ಷಗಳಾಚೆಯಿಂದ ಕೊಪ್ಪಳದ ಸಾಂಸ್ಕೃತಿಕ ಪರಂಪರೆಯನ್ನು ಗುರುತಿಸಬಹುದು. ಅದಕ್ಕೆ ಪೂರಕವಾದ ಮಾಹಿತಿಗಳನ್ನು ದಾಖಲೀಕರಿಸುವ ಪ್ರಕ್ರಿಯೆ ಪ್ರಸ್ತುತದ್ದು. ಈ ನಿಟ್ಟಿನಲ್ಲಿ ಅನೇಕ ವಿದ್ವಾಂಸರು ಕೊಪ್ಪಳದ ಸಾಂಸ್ಕೃತಿಕ ವಿವರಗಳನ್ನು ತಮ್ಮ ಕೃತಿಗಳಲ್ಲಿ ಅಲ್ಲಲ್ಲಿ ವಿರಳವಾಗಿ ದಾಖಲಿಸಿದ್ದಾರೆ. ಈ ದಾಖಲೆಗಳನ್ನು ಪರಿಶೀಲಿಸಿ ಇಡೀ ಕೊಪ್ಪಳದ ಸಾಂಸ್ಕೃತಿಕ ಪರಂಪರೆಯನ್ನು ಕ್ರೋಢೀಕರಿಸುವ, ಚರ್ಚಿಸುವ ಅಗತ್ಯ ನಮ್ಮ ಮುಂದಿದೆ. ಜಾಗತೀಕರಣದ ಹಿನ್ನೆಲೆಯಲ್ಲಿ ಒಂದು ಪ್ರದೇಶದ ಸಾಂಸ್ಕೃತಿಕ ವಿವರಗಳು ಅನಗತ್ಯವೆನಿಸಿದರೂ ಅವುಗಳ ದಾಖಲೀಕರಣ ಈ ಸಂದರ್ಭದಲ್ಲಿ ಮಹತ್ವದ್ದು. ಏಕೆಂದರೆ ಒಂದು ಪ್ರದೇಶದ ಜನರ ಬಗೆಗಿನ ಸಾಂಸ್ಕೃತಿಕ ಅಂಶಗಳನ್ನು

ಬಹುಮುಖಿ ಆಯಾಮಗಳನ್ನು ಅರ್ಥಮಾಡಿಕೊಂಡಲ್ಲಿ ಭವಿಷ್ಯದ ಆ ಪ್ರದೇಶದ ಜನರ ಜೀವನ ಕ್ರಮಗಳನ್ನು ರೂಪಿಸಬಹುದು. ಈ ನಿಟ್ಟಿನಲ್ಲಿ ಕೊಪ್ಪಳದ ಸಾಂಸ್ಕೃತಿಕ ಅಧ್ಯಯನ ಹೆಚ್ಚು ಅರ್ಥಪೂರ್ಣವೆನ್ನಿಸುತ್ತದೆ. ಕೊಪ್ಪಳವು ಒಂದು ಸಾಂಸ್ಕೃತಿಕ ಪ್ರದೇಶವಾಗಿ ಪ್ರಾಗೈತಿಹಾಸಿಕ ಕಾಲದಿಂದ ನಮ್ಮ ಸಂದರ್ಭದವರೆಗೂ ಗುರುತಿಸಿಕೊಂಡಿದೆ. ಆಧುನೀಕರಣದ ನೆಪದಲ್ಲಿ ಈ ದಾಖಲೆಗಳು ನಾಶವಾಗುವ ಸಂಭವವುಂಟು. ಆದರೆ ಈ ಸಂದರ್ಭದಲ್ಲಿಯೂ ಕೊಪ್ಪಳ ಇತಿಹಾಸದುದ್ದಕ್ಕೂ ಎಷ್ಟರಮಟ್ಟಿಗೆ ಸಾಂಸ್ಕೃತಿಕವಾಗಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿತ್ತು ಎಂಬುದನ್ನು ಸಮೀಕ್ಷೆಯ ರೂಪದಲ್ಲಿ ಕ್ರೋಢೀಕರಿಸುವುದು ಈ ಸಂದರ್ಭದಲ್ಲಿ ಹೆಚ್ಚು ಉಚಿತವೆನ್ನಿಸುತ್ತದೆ.

## ೨. ೧ ಭೌಗೋಳಿಕ ಸ್ಥಳ ನಿರ್ದೇಶನ ಮತ್ತು ಸದ್ಯದ ಸ್ಥಿತಿಗತಿಗಳು

ಒಂದು ಪ್ರದೇಶದ ಸಂಸ್ಕೃತಿಯು ಮೈದಾಳುವಲ್ಲಿ ಭೌಗೋಳಿಕ ಹಿನ್ನೆಲೆಯು ನೇರವಾಗಿ ಕಾರಣವಾಗುತ್ತದೆ. ಕೊಪ್ಪಳ ಪ್ರದೇಶದ ಸಂಸ್ಕೃತಿಯ ಅಧ್ಯಯನಕ್ಕೆ ತೊಡಗುವ ಮೊದಲು ಆ ಪ್ರದೇಶದ ಭೌಗೋಳಿಕವಾರು ವಿವರಗಳನ್ನು ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ. ಒಂದು ಪ್ರದೇಶದ ಸಂಸ್ಕೃತಿಯ ಉಗಮ, ವಿಕಾಸವು ಅಲ್ಲಿನ ಭೂ ಪ್ರದೇಶದ ಹಳ್ಳ ತಿಟ್ಟುಗಳು, ನದಿ ಬೆಟ್ಟಗಳು ಊರು ಕಾನನಗಳು ಅಲ್ಲಿನ ಭಾಷೆ ಧರ್ಮ, ಸಾಮಾಜಿಕ, ಶೈಕ್ಷಣಿಕ ಅಂಶಗಳನ್ನು ಅವಲಂಬಿಸಿಕೊಂಡಿರುತ್ತದೆ. ಈ ದೃಷ್ಟಿಯಿಂದ ಭೌಗೋಳಿಕ ಅಂಶಗಳನ್ನು ಹಿಡಿದು ಅಧ್ಯಯನದ ಹಾದಿಯನ್ನು ರೂಪಿಸಿಕೊಳ್ಳ ಬೇಕಾಗುತ್ತದೆ.

ಪ್ರಕೃತ ಸಂಸ್ಕೃತಿ ಅಧ್ಯಯನವು ಕೊಪ್ಪಳ ನಗರ ಮತ್ತು ಅದರ ಸುತ್ತಮುತ್ತಲ ಪ್ರದೇಶವನ್ನು ಒಳಗೊಂಡಿದೆ. ಪ್ರಾಗೈತಿಹಾಸಿಕ ಕಾಲಘಟ್ಟದಿಂದ ಸಾಂಸ್ಕೃತಿಕ ಮಹತ್ವ (cultural significence) ವನ್ನು ಹೊಂದಿರುವ ಈ ಪ್ರದೇಶದ ಚರಿತ್ರೆ ತುಂಬಾ ಕುತೂಹಲಕಾರಿಯಾಗಿದೆ. ಕೊಪ್ಪಳ ಪಟ್ಟಣವು ಇಂದು ನಗರ ಪ್ರದೇಶವಾಗಿ ಪರಿಣಮಿಸಿದೆ. ನಗರೀಕರಣದ ಜಾಡು ಹಿಡಿದು ಸಂಸ್ಕೃತಿಯ ಎಲ್ಲಾ ತೆವಲುಗಳಲ್ಲಿ

ಆಧುನಿಕತೆ ಮೈಗೂಡಿಸಿಕೊಂಡಿದೆ. ಜಾಗತೀಕರಣದ ಹಿನ್ನೆಲೆಯಲ್ಲಿ ಈ ನಗರ ಎಲ್ಲ ಆಧುನಿಕ ಬದುಕಿನ ಕ್ರಮಗಳನ್ನು ಕಂಡುಕೊಂಡಿದೆ. ಇಂಥ ಪ್ರದೇಶ ಚರಿತ್ರೆಯುದ್ದಕ್ಕೂ ಕರ್ನಾಟಕದ ಸಂಸ್ಕೃತಿಕಗೆ ಮತ್ತು ಅದರ ಪರಂಪರೆಗೆ ತನ್ನದೇ ಆದ ಕಾಣಿಕೆಯನ್ನು ಸಲ್ಲಿಸುತ್ತಾ ಬಂದಿದೆ. ಆ ಪ್ರದೇಶದಲ್ಲಿ ಪರಂಪರೆಯೊಡನೆ ಕೈಗಾರಿಕೆ, ಕೃಷಿ, ಮತ್ತು ಗಣಿಗಾರಿಕೆಗಳು ಆರ್ಥಿಕ ಕ್ರಿಯಾಶೀಲತೆಯನ್ನು ಉಳಿಸಿ ಕೊಂಡಿವೆ. ನಿಯತಬದ್ದ ಜೀವನ ಕ್ರಮ ಸಾಂಸ್ಕೃತಿಕ ಘಟನಾವಳಿಗಳಿಂದ ತುಸು ಹೆಚ್ಚು ಕಡಿಮೆಯಾಗಿದ್ದರೂ ತನ್ನ ಅನನ್ಯತೆಯನ್ನು ಚರಿತ್ರೆಯಾದ್ಯಂತ ಉಳಿಸಿಕೊಂಡು ಬಂದಿದೆ. ಈ ಕಾರಣದಿಂದ ಆ ಪ್ರದೇಶವನ್ನು ಒಂದು ಸಾಂಸ್ಕೃತಿಕ ಘಟಕವೆಂದು ನೋಡುವ ಪರಿಪಾಠ ಬೆಳೆದು ಬಂದಿದೆ. ಕರ್ನಾಟಕದ ಸಂಸ್ಕೃತಿಗೆ ಕೊಪ್ಪಳದ ಸಂಸ್ಕೃತಿಯೂ ಸಾವಯವ ಸಂಬಂಧಗಳನ್ನು ಹೊಂದಿದೆಯಾದರೂ ಅನೇಕ ವಿಚಾರಗಳಲ್ಲಿ ತನ್ನತನದಿಂದ ಮೆರೆದು ಬೇರೆಯಾಗಿ ನಿಲ್ಲುತ್ತದೆ. ಜೊತೆಗೆ ಚಾರಿತ್ರಿಕ ಮನ್ನಣೆಯನ್ನು ಪಡೆದುಕೊಂಡಿದೆ ಹಾಗೂ ಪಡೆದುಕೊಳ್ಳುತ್ತಿದೆ. ಆದುದರಿಂದ ಆ ಪ್ರದೇಶದ ಪ್ರಾಗೈತಿಹಾಸಿಕ ಕಾಲಘಟ್ಟದಿಂದ ಈ ದಿನದವರೆಗಿನ ಸಾಂಸ್ಕೃತಿಕ ಘಟನಾವಳಿಗಳನ್ನು ಕ್ರೋಢೀಕರಿಸಿ ಒಟ್ಟಿಗಿಡುವ ಆಶಯವನ್ನು ಹೊಂದಿ ಈ ಅಧ್ಯಯನವನ್ನು ಎತ್ತಿಕೊಳ್ಳಲಾಗಿದೆ.

೧. ನಮ್ಮ ಸಂದರ್ಭದಲ್ಲಿ ಕೊಪ್ಪಳ ಪ್ರದೇಶದ ಭೌಗೋಳಿಕ ವ್ಯವಸ್ಥೆಯನ್ನು ಮೊದಲು ಚರ್ಚಿಸುವುದು ಒಳಿತು. ಕರ್ನಾಟಕದ ಉತ್ತರ ಭಾಗಕ್ಕಿರುವ ಈ ಪ್ರದೇಶ ೧೯೯೮ರ ಜಿಲ್ಲಾ ಮರುವಿಂಗಡಣೆಯಾಗುವವರೆಗೂ ರಾಯಚೂರು ಜಿಲ್ಲೆಯಲ್ಲಿತ್ತು. ಆಗ ಇದು ತಾಲ್ಲೂಕು/ ತಹಶೀಲ್ ಕೇಂದ್ರವಾಗಿತ್ತು. ೧೯೯೮ರಲ್ಲಿ ಕರ್ನಾಟಕ ರಾಜ್ಯದಲ್ಲಿ ಆದ ಜಿಲ್ಲಾ ಮರುವಿಂಗಡಣೆಯ ಸಂದರ್ಭದಲ್ಲಿ ಕೊಪ್ಪಳವು ಸ್ವತಂತ್ರ ಜಿಲ್ಲಾ ಕೇಂದ್ರವಾಗಿ ಪರಿಣಮಿಸಿತು. ಪ್ರಕೃತ ಅಧ್ಯಯನಕ್ಕೆ ಆಯ್ದುಕೊಳ್ಳಲಾದ ಪ್ರದೇಶವು ಕೊಪ್ಪಳ ಜಿಲ್ಲೆಯ ಕೊಪ್ಪಳ ತಾಲ್ಲೂಕಿನ ಕಸಬಾ ಹೋಬಳಿ ಪ್ರದೇಶವಾಗಿರುತ್ತದೆ. ಈ ಪ್ರದೇಶವು ಸಂಪೂರ್ಣವಾಗಿ ಮೂರು ಕಡೆಗಳಲ್ಲಿ ಗುಡ್ಡಗಳಿಂದ ಸುತ್ತುವರಿಯಲ್ಪಟ್ಟಿದೆ. ಮಾನವ ವಾಸಯೋಗ್ಯ ಪ್ರದೇಶವಾಗಿ ಅತ್ಯಂತ ಪ್ರಾಚೀನ

ಕಾಲಘಟ್ಟದಿಂದ ಈ ಸಂದರ್ಭದವರೆಗೂ ಗುರುತಿಸಿಕೊಂಡಿದೆ. ಕೊಪ್ಪಳವನ್ನು ಸುತ್ತುವರಿದಿರುವ ಗುಡ್ಡಬೆಟ್ಟಗಳಲ್ಲಿ ಶಿಲಾಯುಗದ ಮಾನವನು ವಾಸಿಸಲು ಯೋಗ್ಯವಾದ ಗವಿಗಳನ್ನು ಕಾಣಬಹುದು. ಈ ಅಂಶ ಶಿಲಾಯುಗದ ಸಂಸ್ಕೃತಿಯಿಂದ ನಮ್ಮ ಸಂದರ್ಭದ ಆಧುನಿಕ ಸಂಸ್ಕೃತಿಯವರೆಗೂ ಈ ಪ್ರದೇಶ ಮಾನವ ವಾಸಯೋಗ್ಯ ಎಂದು ವಿದ್ವಾಂಸರು ಗುರುತಿಸುತ್ತಾರೆ. ಕೊಪ್ಪಳದ ಗುಡ್ಡಬೆಟ್ಟಗಳಲ್ಲಿ ಸಿಗುವ ಗಡಸಾದ ಗ್ರ್ಯಾನೈಟ್ ಕಲ್ಲುಗಳು ಕಲ್ಲುಗಣಿ ಕೈಗಾರಿಕೆ ಮತ್ತು ಆ ಕಲ್ಲುಗಳಿಂದ ಕಟ್ಟಡಗಳ ನಿರ್ಮಾಣಕ್ಕೆ ಯೋಗ್ಯವಾದವು ಎಂದು ಗುರುತಿಸಿದ್ದಾರೆ. ಕೊಪ್ಪಳ ನಗರದ ದಕ್ಷಿಣ ಭಾಗದಲ್ಲಿರುವ ಗುಡ್ಡಗಳಲ್ಲಿ ಕೆಂಪು ಛಾಯೆಯ ನುಣುಪಾದ ಹೊಳಪುಳ್ಳ ಕಲ್ಲುಗಳ ಗಣಿಗಳು ಸಿಗುತ್ತವೆ. ಶಿಲಾಯುಗದ ಮಾನವನು ಆಯುಧಗಳಿಗೆ ಗಡುಸಾದ ಗ್ರ್ಯಾನೈಟ್ ಕಲ್ಲುಗಳನ್ನೆ ಬಳಸುತ್ತಿದ್ದ ಎಂಬುದಕ್ಕೆ ಸಾಕ್ಷ್ಯಾಧಾರಗಳು ಸಿಗುತ್ತವೆ.

೨. ನಗರಪ್ರದೇಶದ ಮೇಲೆ ರಾಷ್ಟ್ರೀಯ ಹೆದ್ದಾರಿಯನ್ನು (ನಂ. ೧೩) ಕೂಡಿಕೊಳ್ಳುವ ರಾಜ್ಯಹೆದ್ದಾರಿ ಹಾಯ್ದುಹೋಗಿದೆ. ವ್ಯಾಪಾರ ವಾಣಿಜ್ಯ ಇತ್ಯಾದಿಗಳಿಗೆ ಇದರಿಂದ ತುಂಬಾ ಅನುಕೂಲವಾಗಿದೆ. ಹಾಗೆಯೇ ಹುಬ್ಬಳ್ಳಿ ಗುಂಟಕಲ್ ಬ್ರಾಡ್‌ಗೇಜ್ ರೈಲು ವ್ಯವಸ್ಥೆ ಈ ಪ್ರದೇಶದ ಮೇಲೆ ಹಾಯ್ದು ಹೋಗಿರುವುದರಿಂದ ವ್ಯಾಪಾರ ವಾಣಿಜ್ಯ ಸಂಪರ್ಕಗಳಿಗೆ ಅನುಕೂಲಕರವಾದ ಸ್ಥಳವಾಗಿದೆ. ಜನಜೀವನ ದಕ್ಷಿಣ ಮಧ್ಯ ರೈಲ್ವೆ ಮತ್ತು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ ಒದಗಿಸಿರುವ ಎಲ್ಲಾ ಸೌಕರ್ಯಗಳನ್ನು ಪಡೆದುಕೊಳ್ಳುತ್ತಿದೆ.

೩. ಈ ಪ್ರದೇಶದ ರೇಖಾಂಶವು ೭೫-೭೬ ಆಗಿದೆ. ಅಕ್ಷಾಂಶವು ೧೫-೧೫ ಆಗಿದೆ. ಸಮುದ್ರ ಮಟ್ಟದಿಂದ ಈ ಪ್ರದೇಶವು ಸುಮಾರು ೫೨೩.೦೪ ಮೀಟರ್ ಎತ್ತರದಲ್ಲಿದೆ. ನಗರವನ್ನು ಸುತ್ತುವರೆದ ಕಲ್ಲುಗುಡ್ಡಗಳಿಂದಾಗಿ ಬಿಸಿಲು ಪ್ರಖರವಾಗಿರುತ್ತದೆ. ಬೇಸಿಗೆಯ ಇದರ ಗರಿಷ್ಠ ಸರಾಸರಿ ಉಷ್ಣತೆ ೩೯ ಡಿಗ್ರಿ ಸೆಲ್ಸಿಯಸ್‌ನಷ್ಟು ಇರುತ್ತದೆ. ಗರಿಷ್ಠ ೪೩ ಡಿಗ್ರಿ ಸೆಂಟಿಗ್ರೇಡ್‌ವರೆಗೆ ಮೇ ತಿಂಗಳಲ್ಲಿ

ದಾಖಲಾಗಿದೆ. ಕನಿಷ್ಟ ತಾಪಮಾನ ಡಿಸೆಂಬರ್ ಜನವರಿ ತಿಂಗಳಲ್ಲಿ ೯ ಡಿಗ್ರಿ ಸೆಂಟಿಗ್ರೇಡ್‌ಗೆ ಇಳಿದ ದಾಖಲೆಗಳಿವೆ. ಕನಿಷ್ಟ ಸರಾಸರಿ ತಾಪಮಾನವು ೧೭.೫೦ ಆಗಿರುತ್ತದೆ. ಈ ಉಷ್ಣತಾ ಪ್ರದೇಶವು ಜನವಾಸಯೋಗ್ಯವಾದ ತಾಪಮಾನವನ್ನು ಹೊಂದಿದೆ ಎಂದು ಹವಾಮಾನ ತಜ್ಞರು ಅಭಿಪ್ರಾಯ ಪಡುತ್ತಾರೆ.

೪. ಮಳೆಯ ಪ್ರಮಾಣವು ಸರಾಸರಿಗಿಂತ ಕಡಿಮೆ ಇದೆ. ಇಲ್ಲಿ ನೈರುತ್ಯ ಮಾರುತಗಳು ಮಳೆ ಸುರಿಸುತ್ತವೆ. ಮಾನ್‌ಸೂನ್ ಮೇ ಕೊನೆಯ ವಾರದಿಂದ ಜೂನ್ ಎರಡನೆ ವಾರದವರೆಗೆ ಈ ಪ್ರದೇಶವನ್ನು ತಲುಪುತ್ತವೆ. ತುಂಗಭದ್ರಾ ನದಿ ಅನತಿದೂರದಲ್ಲಿ ಹರಿಯುತ್ತಿರುವುದರಿಂದ ಅದೇ ನೀರಿನ ಬಹುಮುಖ್ಯ ಸಂಪನ್ಮೂಲವಾಗಿದೆ. ಮುಂಗಾರು ಹಂಗಾಮು ಸಾಧಾರಣದಿಂದ ಕೂಡಿರುತ್ತದೆ. ಹಿಂಗಾರು ಸಾಧಾರಣವಾಗಿರುತ್ತದೆ. ಮಳೆಯ ಆಶ್ರಿತವಾದ ಈ ಪ್ರದೇಶ ಅಲ್ಪ ಮಳೆ ಬಯಸುವ ಬೆಳೆಗಳನ್ನು ಬೆಳೆಯಲಾಗುತ್ತದೆ. ಇದರ ಜೊತೆಗೆ ತುಂಗಭದ್ರಾ ಅಚ್ಚುಕಟ್ಟು ಭೂಮಿ ಅಲ್ಪ ಪ್ರಮಾಣದಲ್ಲಿ ಇದ್ದು ಅಲ್ಲಿ ಕಬ್ಬು ಮತ್ತು ಭತ್ತದ ಬೆಳೆಗಳನ್ನು ಬೆಳೆಯುವ ವಾತಾವರಣವಿದೆ.

೫. ಬೇಳೆಕಾಳು ಮತ್ತು ವಾಣಿಜ್ಯ ಬೆಳೆಗಳಾದ ಹತ್ತಿ, ತಂಬಾಕು ಅಲ್ಲದೆ ಎಣ್ಣೆಕಾಳು ಬೆಳೆಗಳನ್ನು ಇಲ್ಲಿ ಬೆಳೆಯಲಾಗುತ್ತದೆ. ಜೀವನಾವಶ್ಯಕವಾದ ಜೋಳ, ಸಜ್ಜೆ, ನವಣೆ ಮುಂತಾದವುಗಳನ್ನು ಈ ಭಾಗದ ರೈತರು ಹುರುಪಿನಿಂದ ಬೆಳೆಯುತ್ತಾರೆ. ಭೂಮಿಯ ಫಲವತ್ತತೆ ಅಷ್ಟಾಗಿ ಇರದ ಈ ಪ್ರದೇಶ ಆಹಾರ ಬೆಳೆಗಳಿಗೆ ಆಮದನ್ನು ಅವಲಂಬಿಸಿದೆ.

೬. ಪ್ರಸ್ತುತ ಕೊಪ್ಪಳ ಸಾಂಸ್ಕೃತಿಕ ಪರಿಸರದಲ್ಲಿ ಆಡುವ ಮಾತೃಭಾಷೆ ಕನ್ನಡ ಭಾಷೆಯಾಗಿದೆ. ಹೈದರಾಬಾದ್ ನಿಜಾಮರ ಆಳ್ವಿಕೆಯ ಕಾಲದಿಂದ ಈಚೆಗೆ ಅಲ್ಲಿ ಮಾತನಾಡುವ ಕನ್ನಡ ಭಾಷೆಗೆ ಉರ್ದುವಿನ ಛಾಪು ಪ್ರಾಪ್ತವಾಗಿದೆ. ತೆಲುಗು ಭಾಷೆಯು ತನ್ನ ಪ್ರಭಾವವನ್ನು ಹೊಂದಿದೆಯಾದರೂ ಕನ್ನಡವೇ ಅಲ್ಲಿಯ ಹೆಚ್ಚು ಜನರಾಡುವ ಅಧಿಕೃತ ಮಾತೃಭಾಷೆಯಾಗಿದೆ.

೭. ಕೊಪ್ಪಳ ಕಸಬಾ ಹೋಬಳಿಯಲ್ಲಿ ೭೧,೨೮೫ ಜನರಿದ್ದು ಅದರಲ್ಲಿ ೩೬,೧೪೭ ಗಂಡಸರು ಮತ್ತು ೩೫,೧೩೮ ಹೆಂಗಸರಿರುವರು. ಜನರು ಸಾಮಾನ್ಯವಾಗಿ ಎಣ್ಣೆಗೆಂಪು ಬಣ್ಣದವರು ಮತ್ತು ಕಪ್ಪು ಬಣ್ಣದವರಾಗಿದ್ದಾರೆ. ಆದರೆ ಇತ್ತೀಚೆಗೆ ವಲಸೆ ಹೋಗಿ ಅಲ್ಲಿ ನೆಲೆಸಿರುವವರು ಇದಕ್ಕೆ ಅಪವಾದ. ಸಾಮಾನ್ಯವಾಗಿ ಗಂಡಸರು ಐದೂವರೆ ಅಡಿಗಳಿಂದ ಆರೂವರೆ ಅಡಿಗಳವರೆಗೆ ಎತ್ತರವನ್ನು ಹೊಂದಿದವರಾಗಿದ್ದಾರೆ. ಹೆಂಗಸರು ಸಾಮಾನ್ಯವಾಗಿ ಐದರಿಂದ ಆರೂವರೆ ಅಡಿಗಳಷ್ಟು ಎತ್ತರವನ್ನು ಉಳ್ಳವರಾಗಿದ್ದಾರೆ. ಹೆಚ್ಚು ಜನರು ಕೋಲು ಮುಖವನ್ನು ಹೊಂದಿದ್ದಾರೆ. ಹೆಂಗಸರು ಇಳಿಗೂದಲನ್ನು, ಗಂಡಸರು ಕ್ರಾಪ್‌ಗೆ ಸಮಾನವಾದ ಕೇಶವಿನ್ಯಾಸವನ್ನು ಹೊಂದಿದ್ದಾರೆ ಜೊತೆಗೆ ಆಧುನಿಕತೆಯ ಮೋಡಿಯಿಂದ ಪ್ರಭಾವಿತರಾದ ಹಲವು ಜನರು ಇದಕ್ಕೆ ಅಪವಾದವಾಗಿ ನಿಲ್ಲುತ್ತಾರೆ.

೮. ಆಹಾರಧಾನ್ಯಗಳಲ್ಲಿ ಜೋಳ ಪ್ರಧಾನವಾದದ್ದು. ಬೇಳೆ ಮತ್ತು ಇತರ ಪೂರಕ ಆಹಾರ ಧಾನ್ಯಗಳು ಬಳಕೆಯಲ್ಲಿವೆ. ಗೋಧಿಯ ಬಳಕೆ ಕಡಿಮೆ. ಹಾಗೆಯೇ ಭತ್ತವನ್ನು ಯಥೇಚ್ಛವಾಗಿ ಬಳಸುತ್ತಾರೆ. ಎಣ್ಣೆಕಾಳುಗಳಾದ ಶೇಂಗಾ ಮತ್ತು ಸೂರ್ಯ ಕಾಂತಿಗಳನ್ನು ಆಹಾರಕ್ಕಾಗಿ ಬಳಸುತ್ತಾರೆ. ತುಸು ಹೆಚ್ಚು ಖಾರದ ಅಗತ್ಯವಿದ್ದು ಅದಕ್ಕಾಗಿ ಮೆಣಸಿನಕಾಯಿಯನ್ನು ಇಲ್ಲಿ ಬೆಳೆಯುತ್ತಾರೆ. ಅಲ್ಲಿಯ ಹವಾಮಾನಕ್ಕೆ ಅನುಗುಣವಾಗಿ ಸೊಪ್ಪು ತರಕಾರಿ ಧಾನ್ಯಗಳನ್ನು ಬೆಳೆದು ಅಡಿಗೆಗೆ ಬಳಸುತ್ತಾರೆ. ಮಾಂಸಾಹಾರ ಭಾಗಶಃ ಇದ್ದು ಕೋಳಿ, ಕುರಿ, ಮೀನು, ಹಂದಿ ಮತ್ತು ದನದ ಮಾಂಸಗಳನ್ನು ಬಳಸುತ್ತಾರೆ. ತಂಬಾಕು ಸೇವನೆ ಇದೆ. ಮಾದಕ ಪದಾರ್ಥಗಳ ನಿಯಮಿತ ಬಳಕೆಯು ಕಂಡುಬರುತ್ತದೆ. ಮನೋರಂಜನೆಗೆ ಆಧುನಿಕ ಮಾಧ್ಯಮಗಳನ್ನು ಅವಲಂಬಿಸಿದ್ದಾರೆ.

೯. ಗ್ರಾನೈಟ್ ಕಲ್ಲು ಗಣಿಗಳು ಯಥೇಚ್ಛವಾಗಿ ಸಿಗುವುದರಿಂದ ಮನೆಗಳು ಕಲ್ಲಿನಿಂದ ನಿರ್ಮಿತವಾಗಿವೆ. ಅವರವರ ಆರ್ಥಿಕ ಸ್ಥಿತಿಗತಿಯನ್ನನುಸರಿಸಿ ಮನೆಗಳು ನಿರ್ಮಾಣವಾಗುತ್ತಿವೆ. ಕೋಟೆಯ

ಮುಂಭಾಗದಲ್ಲಿ ಸಿಗುವ ಮಣ್ಣಿನಿಂದ ಮಾಳಿಗೆಗಳನ್ನು ನಿರ್ಮಿಸುತ್ತಾರೆ. ತೊಲೆ, ಜಂತಿಗಳ ಮೇಲ ಮೇಲ್ಹಾವಣಿಗಳಿಗೆ ಕೋಟೆಯ ಅಂಗಳದಲ್ಲಿ ಸಿಗುವ ಮಣ್ಣನ್ನು ಬಳಸುತ್ತಾರೆ.

೧೦. ಮಣ್ಣು ನಗರ ಪ್ರದೇಶ ವಲಯದಲ್ಲಿ ಬೂದಿಬಣ್ಣದ್ದಾಗಿದೆ. ನಗರ ಅತ್ಯಂತ ಪ್ರಾಚೀನವಾಗಿರುವುದರಿಂದ ಅಲ್ಲಿನ ಮಣ್ಣು ಕಟ್ಟಡಗಳನ್ನು ಕಟ್ಟುವಲ್ಲಿ ಅನೇಕಬಾರಿ ಮರುಬಳಕೆಯಾಗಿದೆ. ಬೆಳವಲ ಪ್ರದೇಶದಲ್ಲಿ ಕೆಂಪುಮಿಶ್ರಿತ ಕಂದುಬಣ್ಣದ ಮಣ್ಣು ಇದೆ. ಬೇಳೆಕಾಳು ಮತ್ತು ಎಣ್ಣೆಕಾಳು ಬೆಳೆಗಳಿಗೆ ಅದು ಯೋಗ್ಯವೆಂದು ಕೃಷಿ ತಂತ್ರಜ್ಞರು ಅಭಿಪ್ರಾಯಪಡುತ್ತಾರೆ.

೧೧. ಸಾಮಾಜಿಕ ಜಾತಿಗಳ ಕಟ್ಟುಪಾಡು ಮಾಡಿದ ನಿಯಮಗಳಿಗನುಸಾರ ಭೂಮಿಯಲ್ಲಿ ಶವವನ್ನು ಹೂಳುವ ಪದ್ಧತಿ ಇದೆ. ಕೆಲವು ಜಾತಿಗಳಲ್ಲಿ ಮಾತ್ರ ಶವಗಳನ್ನು ಕಡ್ಡಾಯವಾಗಿ ಸುಡುತ್ತಾರೆ.

೧೨. ವೀರಶೈವ, ಮುಸಲ್ಮಾನ, ಹಿಂದು ಮತ್ತು ಜೈನ ಧರ್ಮಗಳು ಅಲ್ಲಿ ಈಗ ಪ್ರಚಲಿತದಲ್ಲಿವೆ. ಅಲ್ಲೊಂದು ಇಲ್ಲೊಂದು ಕ್ರೈಸ್ತ ಕುಟುಂಬಗಳು ವಲಸೆ ಬಂದಿವೆ. ಬಹುಜನಗಳ ಮಟ್ಟಿಗೆ ಶಿವನೇ ಆರಾಧ್ಯದೈವ.

೧೩. ಕೈಗಾರಿಕೀಕರಣವು ನವ ವಸಾಹತುಶಾಹಿ ಧೋರಣೆಯನ್ನು ಅನುಸರಿಸಿ ಈ ಪ್ರದೇಶದಲ್ಲಿ ಇತ್ತೀಚೆಗೆ ಆರಂಭವಾಗಿದೆ. ಕೊಪ್ಪಳದ ಪೂರ್ವಭಾಗದಲ್ಲಿ ಕಲ್ಯಾಣಿ, ಕಿರ್ಲೋಸ್ಕರ್ ಉಕ್ಕು ಮತ್ತು ಫೆರಸ್ ಕಾರ್ಖಾನೆಗಳಿವೆ. ಮತ್ತು ಅದಕ್ಕೆ ಸಂಬಂಧಿಸಿದ ಹಲವು ಕೈಗಾರಿಕೆಗಳು ಮತ್ತೊಂದೆಡೆ ಗಣಿಗಾರಿಕೆ ನಡೆಯುತ್ತಿದೆ. ಆಕ್ಸಿಜನ್ ಯೂನಿಟ್ ಕೈಗಾರಿಕೆಗಳೂ ಅಲ್ಲಿ ಬೆಳೆದಿವೆ. ಕೋಳಿಸಾಕಣೆಯಂಥ ಜೈವಿಕ ಕೈಗಾರಿಕಾ ಘಟಕಗಳು ಹೆಚ್ಚು ಪ್ರಮಾಣದಲ್ಲಿ ಕಾಣುತ್ತವೆ.

೧೪. ಸ್ತ್ರೀಯರು ಸೀರೆ ಮತ್ತು ರವಿಕೆಗಳನ್ನು ಉಡುತ್ತಾರೆ. ಗಂಡಸರು ಪಂಚೆ ಮತ್ತು ಮೇಲಂಗಿಯನ್ನು ತೊಡುತ್ತಾರೆ. ಆಧುನಿಕತೆಯ ನಿಟ್ಟಿನಲ್ಲಿ ಗಂಡಸರು ಪ್ಯಾಂಟ್ ಶರ್ಟ್ ಹಾಗೂ ಸ್ತ್ರೀಯರು

ಚೂಡಿದಾರದಂಥ ಉಡುಪುಗಳನ್ನು ತೊಡುವುದು ಪ್ರಚಲಿತದಲ್ಲಿದೆ. ಸ್ತ್ರೀಯರು ಬಂಗಾರದ ಮತ್ತು ಬೆಳ್ಳಿಯ ಆಭರಣಗಳನ್ನು ತೊಡುತ್ತಾರೆ. ಆರ್ಥಿಕವಾಗಿ ಸ್ಥಿತಿವಂತರಲ್ಲದವರು ಬಂಗಾರದಂತೆ ಕಾಣುವ ಹೊಳಪುಳ್ಳ ಇತರ ಲೋಹಗಳ ಆಭರಣಗಳನ್ನು ಧರಿಸುತ್ತಾರೆ.

೧೫. ಹಲವು ಜಾನಪದ ಕೈಗಾರಿಕೆ, ಕಲೆಗಳನ್ನು ಈ ಪ್ರದೇಶದಲ್ಲಿ ಗುರುತಿಸಬಹುದು. ಇಲ್ಲಿ ಕೋಲಾಟ, ದಟ್ಟಿಕುಣಿತ, ನಂದಿಧ್ವಜಕುಣಿತ, ಸಂಬಾಳಮೇಳ, ಭಜನೆ ಇತ್ಯಾದಿ ಜನಪದ ಪ್ರದರ್ಶನ ಕಲೆಗಳು ಚಾಲ್ತಿಯಲ್ಲಿವೆ. ಆಲಂಕಾರಿಕ ಜಾನಪದ ಗುಡಿಗಾರಿಕೆ ಈ ಪ್ರದೇಶದ ವಿಶೇಷ. ಜನಪದದ ಎಲ್ಲಾ ಪ್ರಕಾರಗಳ ಸಾಹಿತ್ಯ ವಿರಳ ವಿರಳವಾಗಿ ಕಂಡುಬರುತ್ತದೆ.

೧೬. ಈ ಪ್ರದೇಶದ ಜನರು ಪಕ್ಕದ ಬಳ್ಳಾರಿ ಜಿಲ್ಲೆಯ ಹೊಸಪೇಟೆ, ಗದಗ (ಜಿಲ್ಲಾ ಕೇಂದ್ರ), ಹುಬ್ಬಳ್ಳಿ ಮುಂತಾದ ವಾಣಿಜ್ಯ ಕೇಂದ್ರಗಳೊಡನೆ ಹೆಚ್ಚು ಸಂಪರ್ಕವನ್ನಿಟ್ಟುಕೊಂಡಿದ್ದಾರೆ. ರಾಷ್ಟ್ರೀಕೃತ ಬ್ಯಾಂಕು ಮತ್ತು ಸಹಕಾರಿ ಬ್ಯಾಂಕುಗಳು ವಾಣಿಜ್ಯ ಚಟುವಟಿಕೆಯಲ್ಲಿ ಮತ್ತು ಕೃಷಿ ಉದ್ಯಮ ಚಟುವಟಿಕೆಯಲ್ಲಿ ಪ್ರಧಾನ ಪಾತ್ರವನ್ನು ವಹಿಸಿವೆ.

ಇತಿಹಾಸದುದ್ದಕ್ಕೂ ಅನೇಕ ಸಂಗತಿಗಳಲ್ಲಿ ಪ್ರಮುಖ ಪಾತ್ರವಹಿಸಿದ್ದ ಕೊಪ್ಪಳ ಪ್ರದೇಶವು ಸದ್ಯ ಈ ಮೇಲೆ ಹೇಳಿದ ಸ್ಥಿತಿಗತಿಗಳನ್ನು ಹೊಂದಿದೆ. ಜಾಗತೀಕರಣದ ಹಿನ್ನೆಲೆಯಲ್ಲಿ ಪ್ರಾದೇಶಿಕ ಸಂಸ್ಕೃತಿಗಳು ವಿನಾಶದ ಅಂಚಿನಲ್ಲಿರುವುದರಿಂದ ಈ ಎಲ್ಲ ವಿವರಣೆಗಳ ಅಗತ್ಯವಿದೆ. ಒಂದು ಪ್ರದೇಶದ ಸಾಂಸ್ಕೃತಿಕ ಸಂಗತಿಗಳ ನಿರ್ಮಿತಿಗೆ ಅಗತ್ಯವೆನ್ನಿಸಿದ ವಿಷಯಗಳನ್ನು ದಾಖಲಿಕರಿಸುವ ಪ್ರಕ್ರಿಯೆ ನಮ್ಮ ಜವಾಬ್ದಾರಿಯಾಗಿದೆ. ಏಕೆಂದರೆ ಈ ಎಲ್ಲಾ ಸಂಗತಿಗಳು ಹಿಂದೆ ಇರುವ ಸ್ಥಿತಿಯಲ್ಲಿ ನಾಳೆ ಸಿಗುವುದಿಲ್ಲ. ಕಾಲಬದ್ಧವಾಗಿ ಅವು ಚಲನಾತ್ಮಕ ಗುಣಗಳೊಡನೆ ಸ್ಪಂದಿಸುತ್ತವೆ.

## ೨. ೨ ಕೊಪ್ಪಳ : ಉಲ್ಲೇಖಗಳ ಚಾರಿತ್ರಿಕ ಅವಲೋಕನ

ಒಂದು ಪ್ರದೇಶಕ್ಕೆ ಆ ಹೆಸರು ಬರಲು ಅಲ್ಲಿನ ಭೌಗೋಳಿಕ ಮತ್ತು ಭಾಷಿಕ ನೆಲೆಗಳು ಕಾರಣವಾಗುತ್ತವೆ. ಪ್ರಕೃತ ಕೊಪ್ಪಳವು ಇದರಿಂದ ಹೊರತಲ್ಲ. **ಕೊಪ್ಪ** ಎಂದರೆ ಗುಡಿಸಲು, ಕೊಪ್ಪ, ಸಣ್ಣ ಹಳ್ಳಿ ಎಂದು ಅರ್ಥವಾಗುತ್ತದೆ. ಪ್ರಕೃತ ಕೊಪ್ಪಳ ಪ್ರದೇಶವು ಬೆಟ್ಟದ ಇಳಿಜಾರುಗಳಿಂದ ಕೂಡಿರುವುದರಿಂದ ಅದನ್ನು ತೊಪ್ಪಲು ಎಂದು ವಿದ್ವಾಂಸರು ಹೇಳುತ್ತಾರೆ. ತೊಪ್ಪಲು ಎಂದರೆ ಕಿಬ್ಬೆ, ಬೆಟ್ಟದ ಇಳಿಜಾರು, ಸೊಪ್ಪು, ನಿಷ್ಪ್ರಯೋಜಕ ವಸ್ತು ಎಂದಾಗುತ್ತದೆ. ಆದುದರಿಂದ ಇದನ್ನು ತೊಪ್ಪಲು ಎನ್ನುವುದಕ್ಕಿಂತ ಕೊಪ್ಪ ಅಥವಾ ಕೊಪ್ಪಲು ಎನ್ನುವುದು ಹೆಚ್ಚು ಉಚಿತ ಎಂದೆನಿಸುತ್ತದೆ. ಆದರೆ ವಿದ್ವಾಂಸರು ಬೆಟ್ಟದ ಇಳಿಜಾರು ಪ್ರದೇಶದಲ್ಲಿ ಈ ಊರು ನೆಲೆಗೊಂಡಿರುವುದರಿಂದ ಇದಕ್ಕೆ ತೊಪ್ಪಲು, ತೊಪ್ಪಲು ಪ್ರದೇಶ ಎಂದು ಕರೆಯುವುದು ಉಚಿತ ಎಂದಿದ್ದಾರೆ. ಆದರೆ ಕೊಪ್ಪ ಎಂದರೆ ಗುಡಿಸಲು, ತೊಪ್ಪ ಮತ್ತು ಸಣ್ಣ ಹಳ್ಳಿ ಎಂದು ಅರ್ಥ ಇರುವುದರಿಂದ ಇದಕ್ಕೆ ಇದೇ ಹೆಚ್ಚು ಸೂಕ್ತ ಎಂದು ಇನ್ನೂ ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಪ್ರಕೃತ ಈ ಅಧ್ಯಯನವು ಇದನ್ನೇ ಸ್ಪಷ್ಟಪಡಿಸುತ್ತದೆ.

ಕೊಪ್ಪಳ ಪ್ರದೇಶದ ಉಲ್ಲೇಖಗಳು ಕನ್ನಡ ಮತ್ತು ಸಂಸ್ಕೃತ ಶಾಸನಗಳಲ್ಲಿ ದೊರೆಯುತ್ತವೆ.

೧. ಕದಂಬ ಅರಸರ ಕಾಲದಲ್ಲಿ ರಚಿತವಾದ ನಾಲ್ಕನೆಯ ಶತಮಾನದ ಚಂದ್ರವಳ್ಳಿಯ ಶಾಸನದಲ್ಲಿ '**ಕುಪಣ**' ನಗರದ ಉಲ್ಲೇಖವಿದೆ. ಈ ಕುಪಣವೇ ಇಂದಿನ ಕೊಪ್ಪಳ. ಈ ಶಾಸನವನ್ನು ಕೆತ್ತಿದ **ಚಾಮ**ನು ಕೊಪ್ಪಳದವನು. ಆದಕಾರಣ ಈ ಕುಪಣದ ಉಲ್ಲೇಖ ಆ ಶಾಸನದಲ್ಲಿ ಬಂದಿದೆ ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಇದರಿಂದ ತಿಳಿದುಬರುವುದೇನೆಂದರೆ ಕೊಪ್ಪಳ ಪ್ರದೇಶವು ೪ನೆಯ ಶತಮಾನದ ಪೂರ್ವದಿಂದಲೇ ಪ್ರಸಿದ್ಧ ಗ್ರಾಮವಾಗಿದ್ದಿತು.

೨. ಬಾದಾಮಿ ಚಾಲುಕ್ಯರ ಕಾಲದ ಒಂದು ಶಾಸನದಲ್ಲಿ ಈ ಊರನ್ನು **'ಕುಪಣ'**, **'ಕುಪಣ'** ಎಂದು ಕರೆದಿದ್ದಾರೆ. ಅದರ ಕಾಲ ಕ್ರಿ.ಶ.೬೭೬.

೩. ಮತ್ತೊಂದು ಶಾಸನದಲ್ಲಿ ೮೬೩ರಲ್ಲಿ ಕೆತ್ತಲಾಗಿದೆ ಎಂದು ತಿಳಿದು ಬಂದಿರುವ ಬಾದಾಮಿ ಚಾಲುಕ್ಯರ ಶಾಸನದಲ್ಲಿ ಕೊಪ್ಪಳಕ್ಕೆ '**ತೀರ್ಥ**'ವೆಂದು ಕರೆಯಲಾಗಿದೆ.

೪. ರಾಷ್ಟ್ರಕೂಟರ ಕಾಲದಲ್ಲಿ ಕೊಪ್ಪಳ ನಗರವು ಪ್ರಸಿದ್ಧ ಧಾರ್ಮಿಕ ಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ. ಮೌರ್ಯರ ಕಾಲದಲ್ಲಿಯೇ ಈ ಪ್ರದೇಶ ಹೆಚ್ಚು ಸಾಂಸ್ಕೃತಿಕವಾಗಿ ಪ್ರಸಿದ್ಧಿಯನ್ನು ಪಡೆದಿದ್ದು ಆಶೋಕನ ಶಿಲಾಶಾಸನಗಳು ಅಲ್ಲಿ ಲಭ್ಯವಾಗಿವೆ. ರಾಷ್ಟ್ರಕೂಟರ ಕಾಲಕ್ಕೆ ಈ ಊರು ಮಹತ್ವದ ಸಾಂಸ್ಕೃತಿಕ ಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ. ಸುಮಾರು ೮೭೦ರಲ್ಲಿ ಕೆತ್ತಿಸಲಾದ ರಾಷ್ಟ್ರಕೂಟರ ಶಾಸನದಲ್ಲಿ '**ಕೊಪಣ ನಗರ** ' ಎಂದು ಕರೆದಿದ್ದಾರೆ.

೫. ಕರ್ನಾಟಕವನ್ನು ಆಳಿದ ಜೈನ ಅರಸು ಮನೆತನಗಳಲ್ಲಿ ಗಂಗರ ವಂಶವು ಮಹತ್ವವನ್ನು ಪಡೆದು ಕೊಂಡಿದೆ. ಅವರು ಕೊಪ್ಪಳವನ್ನು ಕ್ರಿ.ಶ. ೯೪೫ ರಲ್ಲಿ ಕೆತ್ತಿಸಲಾದ ಶಾಸನವೊಂದರಲ್ಲಿ 'ಕೊಪಣಪುರ' ಎಂದು ಕರೆದಿದ್ದಾರೆ. ಅವರದೇ ಮತ್ತೊಂದು ಶಾಸನದಲ್ಲಿ '**ಕೊಪಣಾದ್ರಿ**' (ಕ್ರಿ.ಶ. ೯೯೩). ಮತ್ತು ಕ್ರಿ.ಶ. ೧೦೦೦ದ ಶಾಸನದಲ್ಲಿ '**ಕೊಪಣತೀರ್ಥ**' ಎಂಬ ಉಲ್ಲೇಖಗಳಿವೆ.

೬. ಚೋಳರ ಶಾಸನವು ಕೊಪ್ಪಳವನ್ನು ಕ್ರಿ.ಶ. ೧೦೫೩ರಲ್ಲಿ '**ಕೊಪ್ಪಂ**' ಎಂದು ಉಲ್ಲೇಖಿಸಿದೆ.

೭. ಶಿಲಾಹಾರರ ಸಂದರ್ಭದಲ್ಲಿ (ಕ್ರಿ.ಶ. ೧೧೧೫) '**ಕೊಪಣಪುರಂ**' ಎಂದು ಕೊಪ್ಪಳವನ್ನು ಕರೆಯಲಾಗಿದೆ.

೮. ಬಿಜಾಪುರದ ಆದಿಲ್‌ಷಾಹಿ ಕ್ರಿ.ಶ. ೧೫೨೧ ರಲ್ಲಿ ಕೆತ್ತಿಸಲಾದ ಶಾಸನವೊಂದರಲ್ಲಿ '**ಮುಜಾಫರ್ ನಗರ**' ಎಂಬುದಾಗಿ ಕರೆಯಲ್ಪಟ್ಟಿದೆ.

೯. ಟಿಪ್ಪು ಸುಲ್ತಾನನು ಇದನ್ನು '**ಸುಲ್ತಾನಗಡ**' ಎಂಬುದಾಗಿ ಕರೆದಿರುವನು.

೧೦. ಕ್ರಿ.ಶ. ೧೭೨೪ರಲ್ಲಿ ನಿಜಾಮ ದೊರೆಯು ಕೊಪ್ಪಳವನ್ನು '**ನಿಜಾಮಗಡ**' ಎಂದು ಗುರುತಿಸಿರುವನು.

೧೧. ಆಂಗ್ಲರು ಇದನ್ನು ಕ್ರಿ.ಶ. ೧೮೫೮ ರಲ್ಲಿ **ಕೊಪ್‌ಬಾಲ್** ಎಂದು ಕರೆದಿದ್ದಾರೆ.

೧೨. ಸಾಲರ್‌ಜಂಗ್ ವಸ್ತುಸಂಗ್ರಹಾಲಯದಲ್ಲಿರುವ ಒಂದು ತಾಮ್ರ ಪತ್ರ(ಕ್ರಿ.ಶ. ೧೮೬೧)ದಲ್ಲಿ '**ಕುಪ್ಪಲ್**' ಎಂದು ಕರೆಸಿಕೊಂಡಿದೆ.

೧೩. ಮೈಸೂರು ಸರ್ಕಾರ (ಕ್ರಿ.ಶ. ೧೯೫೬) ಇದನ್ನು '**ಕೊಪ್ಪಳ**' ಎಂದು ಕರೆಯತೊಡಗಿತು. ಅದೇ ಹೆಸರನ್ನು ಕರ್ನಾಟಕ ಸರ್ಕಾರವು ಮುಂದುವರಿಸಿತು.

ಸಾಹಿತ್ಯದಲ್ಲಿ ತಿಳಿಗನ್ನಡ ಪ್ರದೇಶವೆಂದು ಗುರುತಿಸಲ್ಪಟ್ಟ ಕೊಪ್ಪಳವು ವಿಭಿನ್ನ ಹೆಸರುಗಳಿಂದ ಕರೆಯಿಸಿಕೊಂಡಿದೆ. ಒಂದು ಕಾಲದಲ್ಲಿ ಪುಲಿಗೆರೆಯ ತಿರುಳ್ಗನ್ನಡದ ನಾಡೆಂದು ಈ ಪ್ರದೇಶವನ್ನು ಗುರುತಿಸಿದ್ದರು. ಕ್ರಿ.ಶ. ೯ನೇ ಶತಮಾನದ ಕವಿರಾಜಮಾರ್ಗ ಕಾವ್ಯದಲ್ಲಿ

ಅದರೊಳಗಂ ಕಿಸುವೊಳಲಾ
ವಿದಿತಮಹಾ ಕೊಪಣನಗರದಾ ಪುಲಿಗೆರೆಯಾ
ಸದಭಿಸ್ತುತಮಪ್ಪಂ ಕುಂದದಂ
ದದ ನಡುವಣವಾಡೇ ಕನ್ನಡದ ತಿರುಳ್

ಕೊಪ್ಪಳ ನಗರವು ಪುಲಿಗೆರೆಯ ತಿರುಳ್ಗನ್ನಡ ನಾಡಲ್ಲಿ ಸೇರಿಕೊಂಡಿತ್ತು ಎಂಬುದಕ್ಕೆ ಸ್ಪಷ್ಟವಾದ ಉಲ್ಲೇಖವಿದೆ. ಇಲ್ಲಿ ಬರುವ ಪುಲಿಗೆರೆ ಗದಗ ಜಿಲ್ಲೆಯ ಲಕ್ಷ್ಮೇಶ್ವರ, ಕಿಸುವೊಳಲು ಬಾಗಲಕೋಟೆ ಜಿಲ್ಲೆಯ ಪಟ್ಟದಕಲ್ಲು, ಒಕ್ಕುಂದವು ಧಾರವಾಡ ಜಿಲ್ಲೆಯ ಒಕ್ಕುಂದವಾಗಿದೆ. ದಕ್ಷಿಣದ ಕಾವೇರಿ ನದಿಯಿಂದ ಗೋದಾವರಿ ನದಿಯವರೆಗೆ ಹರಡಿದ್ದ ಈ ಕನ್ನಡ ನಾಡನ್ನು ಕವಿರಾಜಮಾರ್ಗ ಕಾರನು ಗುರುತಿಸಿ ಅಂದಿನ ಪ್ರಮುಖ ಸ್ಥಳಗಳನ್ನು ಹೆಸರಿಸಿರಬಹುದು ಎಂಬುದನ್ನು ಡಾ. ಎಂ. ಎಂ. ಕಲಬುರ್ಗಿಯವರು ಅಭಿಪ್ರಾಯಪಡುತ್ತಾರೆ.

ರತ್ನತ್ರಯರಲ್ಲಿ ಕವಿರನ್ನನಿಗೆ ಆದ್ಯಸ್ಥಾನವಿದೆ. ಅವನು ತನ್ನ ಅಜಿತನಾಥ ಪುರಾಣದಲ್ಲಿ ಕೊಪ್ಪಳವನ್ನು ಉಲ್ಲೇಖಿಸುತ್ತಾನೆ. ಜೊತೆಗೆ ತನ್ನ ಸಾಹಿತ್ಯಕ ಜೀವನಕ್ಕೆ ಆಶ್ರಯದಾತಳಾಗಿ ನಿಂತ ದಾನಚಿಂತಾಮಣಿ ಅತ್ತಿಮಬ್ಬೆಯ ಚರಿತೆಯಲ್ಲಿ

ಬಿಳಿಯರಳೆಯಂತೆ ಗಂಗಾ<br>
ಜಳದಂತೆಸೆವಜಿತಸೇನ ಮುನಿಪತಿಯ ಗುಣಾ<br>
ವಳಿಯಂತೆ ನೆಗಳ್ದ ಕೊಪಣಾ<br>
ಚಳದಂತೆ ಪವಿತ್ರಮತ್ತಿಮಬ್ಬೆಯ ಚರಿತಂ

ಪವಿತ್ರವಾದ ಕೊಪಣಾಚಳದಂತೆ ಅತ್ತಿಮಬ್ಬೆಯ ಜೀವನವು ಪವಿತ್ರವಾದದ್ದೆಂದು ಕವಿಯ ಹೃದಯ ತುಂಬಿದ ಭಾವನೆಗಳಲ್ಲಿ ಹೊರಹೊಮ್ಮಿಸಿದ್ದಾನೆ. ಹೀಗೆ ಧ್ವನಿತವಾದ ಈ ಕಾವ್ಯದಲ್ಲಿ ಕೊಪ್ಪಳ ನಾಡವರ ಜೀವನವು ನಿರ್ಮಲವಾದದ್ದಾಗಿರಬೇಕು. ಇಲ್ಲಿಯ ಜಲವು ಗಂಗಾಜಲದಂತೆ ಪವಿತ್ರವಾದದ್ದಾಗಿರಬೇಕು. ಮುನಿಗಳು ಅಜಿತಸೇನಮುನಿಗಳಂತೆ ಗುಣಶ್ರೇಷ್ಠರು; ಅವರು ಸ್ಥಿರಚಿತ್ತರೆಂದು ಕವಿ ರನ್ನ ಪರೋಕ್ಷವಾಗಿ ಕಾವ್ಯದ ಮೂಲಕ ತನ್ನ ಆಶಯವನ್ನು ವ್ಯಕ್ತಪಡಿಸಿರುವನು.

ಗಂಗರ ಅರಸ ರಾಚಮಲ್ಲನ ಮಂತ್ರಿಯಾದ ಚಾವುಂಡರಾಯನು ತಾನು ರಚಿಸಿದ ಚಾವುಂಡರಾಯ ಪುರಾಣದಲ್ಲಿ ಕೊಪ್ಪಳವನ್ನು ಉಲ್ಲೇಖಿಸಿದ್ದಾನೆ.

ಅಸಿಧಾರಾ ವ್ರತದಿಂದ ಪೆಂಪೆಸೆವಿನಂ ಮುಳ್ಗುಂದದೊಳ್ ಪೊನ್ನಂ ಸಂ
ನ್ಯಸನಕ್ಕೆಂದೆ ನಿವೃತ್ತಿಗೈದು ಕೊಪಣಾದ್ರಿಂದಕ್ಕೆ ವಂದಾಗಮ ಪೋ
ಕ್ತ ಸಮಾಧಾನ ನಿಧಾನದಿಂ ಮುಡುಪಿ ಮುಕ್ತಿಸ್ಥಾನಮಂ ಮುಂಜೆ
ಧಿಸಿಕೊಂಡೊಳ್ವು ಕುಮಾರಸೇನ ಮುನಿ ಪುಂಗಕ್ಕುಂ ಪೆರ್ಗಕ್ಕುಮ

ಪೆಂಪೆಸೆವ ಮುಳಗುಂದದಲಿ ಸಂನ್ಯಸನ್ ವ್ರತ ಸಾಧಿಸಲು ಮುನಿಪುಂಗವ ಕುಮಾರ ಸೇನನಿಗೆ ಸಾಧ್ಯವಾಗದೆ ಅಲ್ಲಿಂದ ನಿವೃತ್ತವಾಗಿ ಅದ್ರಿಗಳಲ್ಲಿ ಇಂದ್ರನಂತಿರುವ ಕೊಪಣಾದ್ರಿಗೆ ಆಗಮಿಸಿ ಆಗಮೋಕ್ತ ಸಮಾಧಾನ ವಿಧಾನದಿಂದ ಸನ್ಯಸನ ಸಲ್ಲೇಖನ ವ್ರತವನ್ನು ಸಾಧಿಸಿದನೆಂದು ತಿಳಿದು ಬರುತ್ತದೆ.

ಹರಿಹರ ಕವಿಯು ತನ್ನ ಆದಯ್ಯನ ರಗಳೆಯಲ್ಲಿ ಪುಲಿಗೆರೆಯಿಂದ ಕೊಪ್ಪಳಕ್ಕೆ ಆಗಮಿಸಿದ ಸರವಣರ ಕುರಿತು ಹೀಗೆ ತನ್ನ ಕಾವ್ಯದಲ್ಲಿ ವ್ಯಕ್ತಪಡಿಸಿರುವನು.

ಪದ್ಮಾವತಿಯ ಪಿತನಪ್ಪ ಪಾರಿಕ್ಷ ಪಂಡಿತಂ ಮೇರಗೆಟ್ಟ ಮತಿಹೀನಂ
ಕೂಪಣದಿಂ ಬಂದ ಹೊಸ ರುಷಿಯದೆನಿಪ ನೀಚರಿಗೆ ಚರಿಗೆಯಂ ಪೇಳೆ.....

ಹಾಗೆಯೇ ಕವಿ ರಾಘವಾಂಕನು ತನ್ನ ಸೋಮನಾಥ ಚಾರಿತ್ರ್ಯದಲ್ಲಿ ಕೊಪ್ಪಳ ನಗರವನ್ನು ಈ ರೀತಿ ಉಲ್ಲೇಖಿಸಿದ್ದಾನೆ:

ನಂದನದೊಳಿಪ್ಪ ಹರಭಕ್ತರಂ ಕರೆತಪ್ಪೆ
ನೆಂದಾದಿಮಯ್ಯನತ್ಯಾನಂದದಿಂ ಪೋದ
ಹಿಂದೆ, ಕೊಪಣದ ಕಡೆಯ ಘೋರ ಮಲಧಾರಿಗಳೆನಿಪ್ಪ ಹಲಬರು ಸವಣರು

ಬಂದು ಸುರಹೊನ್ನೆಯ ಮಹಾ ಬಸದಿಯರು ಹಂಗೆ
ವಂದನಂಗೈದು ಚಾವಡಿಗೆಂದು ಬರೆ ಕಾಣು
ತಂದು ಪಾರಿಶೆಟ್ಟಿ ತಡೆದವನೆಲ್ಲರಂ ತನ್ನ ನಿಳಯದ ಚರಿಗೆಗೆ
(ಸೋಮನಾಥ ಚಾರಿತ್ರ್ಯ ಸಂಧಿ-೨ ಪದ್ಯ -೬೨)

ಪಾರಿಶೆಟ್ಟಿ ಮತ್ತು ಈತನ ಮಗಳು ಪದ್ಮಾವತಿ ಜೈನರು. ಆದರೆ ಪದ್ಮಾವತಿ ಶರಣಧರ್ಮ ಸ್ವೀಕರಿಸಿ ಶರಣ ಆದಯ್ಯನನ್ನು ಮದುವೆಯಾಗುತ್ತಾಳೆ. ಆದರೆ ಪಾರಿಶೆಟ್ಟಿ ಜೈನನಾಗಿಯೇ ಮುಂದುವರೆದನು. ಪದ್ಮಾವತಿಯ ಪತಿಯು ಶರಣ ಆದಯ್ಯ. ಅವನು ನಂದನದೊಳಗಿದ್ದ ಹರಭಕ್ತರನ್ನು ತನ್ನ ಮನೆಯ ಪ್ರಸಾದ ಸ್ವೀಕರಿಸಲು ಕರೆಯಲು ಅವರಲ್ಲಿಗೆ ಹೋದನು. ಇತ್ತ ಪದ್ಮಾವತಿಯ ತಂದೆಯಾದ ಪಾರಿಶೆಟ್ಟಿ ಕೊಪ್ಪಣದಿಂದ ಆಗಮಿಸಿದ ಸರವಣರನ್ನು ತನ್ನ ಮನೆಯ ಚರಿಗೆಗೆ ಕರೆತಂದನು. ಪದ್ಮಾವತಿ ಹರಭಕ್ತರಿಗೆಂದು, ಶಿವಶರಣರಿಗೆಂದು ಸಿದ್ಧಪಡಿಸಿದ ಪ್ರಸಾದವನ್ನು ಸರವಣರಿಗೆ ನೀಡಿದಳು....... ಹರಿಹರನು ತನ್ನ ಆದಯ್ಯನ ರಗಳೆಯಲ್ಲಿ ಹಾಗೆಯೇ ರಾಘವಾಂಕನು ತನ್ನ ಸೋಮನಾಥಚಾರಿತ್ರ್ಯದಲ್ಲಿ ಈ ವಿಷಯದ ಉಲ್ಲೇಖವನ್ನು ಒಂದೇ ರೀತಿಯಿಂದ ವ್ಯಕ್ತಪಡಿಸಿದ್ದಾರೆ.

ಕೊಪ್ಪಳವು ಅನೇಕ ಜಿನಮಂದಿರಗಳಲ್ಲಿ ಉಲ್ಲೇಖಗೊಂಡಿದೆ. ನಂಜಾದಾಯ ಪಟ್ಟಣದ ಅರಸು ನಂಜದೇವನ ಆಸ್ಥಾನದಲ್ಲಿದ್ದ ಮಲ್ಲಭಟ್ಟ ಪಂಡಿತನನ್ನು ಕೊಪ್ಪಣದ ವಿದ್ಯಾನಂದನು ತರ್ಕದಲ್ಲಿ ಸೋಲಿಸಿದನು. ಆ ವಿಷಯಕ್ಕಾಗಿ ಅಪರಿಮಿತ ದ್ರವ್ಯವನ್ನು, ಕೀರ್ತಿಯನ್ನು ವಿದ್ಯಾನಂದನು ಪಡೆದನು - ಎಂದು ಕುಂಜದ ಶಾಸನದಲ್ಲಿ ಉಕ್ತವಾಗಿದೆ.

ಕೊಪಣ ಮೊದಲಾದ ತೀರ್ಥದೊಳ
ಪರಿಮಿತ ದ್ರವ್ಯದಿಂದೆ ಹುಜ್ಞಾ ವಿಧಿಯಿಂ
ಸ್ವಪವರ್ಗದ ಫಲಕಾಗಿಯೇ
ವಿಪುಲೋದಯ ಮಾಡಿ ಮೆರೆದ ವಿದ್ಯಾನಂದ

ಓರಂಗಲ್‌ನ ರಾಜನಿಂದ ಶೂಲಕ್ಕೇರಿಸಲ್ಪಟ್ಟ ಬ್ರಹ್ಮ ಮತ್ತು ಗುಂಡಯ್ಯ ಶಿವಶರಣರ ಸ್ಮರಣಾರ್ಥವಾಗಿ ಕಂಪಲಿಯ ಕಂಪಿಲರಾಯನು ಏರ್ಪಡಿಸಿದ ಶೂಲಿ ಹಬ್ಬದಲ್ಲಿ ಭಾಗವಹಿಸಲು ಎಲ್ಲಾ ಸಾಮಂತರನ್ನು ಕರೆಸಿದ್ದನು. ಕಂಪಿಲರಾಯನ ಅರಸಿ ರತ್ನಾಜಿಗೆ ಅವಳ ಸಖಿ ಸಂಗಾಯಿ ಎಲ್ಲರನ್ನೂ ಪರಿಚಯಿಸುವಾಗ ಕುಪಿತ ಕುಮಾರರ ಗಂಡ ಕೊಪಣದ ತಿಮ್ಮರಾಜನ ಕುವರನೆಂದು ಹೇಳಿದಳು.

ಹೀಗೆ ಚರಿತ್ರೆಯುದ್ದಕ್ಕೂ ಕೊಪ್ಪಳವು ಕೊಪ್ಪಣವಾಗಿದೆ, ಕೊಪಣಾದ್ರಿಯಾಗಿದೆ, ಕೊಪಣತೀರ್ಥವಾಗಿದೆ, ಕೊಪ್ಪಂ ಅಗಿದೆ, ಕೊಪಣಪುರಂ ಆಗಿದೆ, ಮುಜಾಪುರ ನಗರವಾಗಿದೆ, ಸುಲ್ತಾನಗಡವಾಗಿದೆ, ನಿಜಾಮುಗಡವಾಗಿದೆ, ಬ್ರಿಟಿಷರ ಬಾಯಲ್ಲಿ ಕುಪ್‌ಬಾಲ್ ಆಗಿದೆ.

ಅಧ್ಯಾಯ -೩

# ಪ್ರಾಗೈತಿಹಾಸಿಕ ಕಾಲಘಟ್ಟಗಳಲ್ಲಿ ಕೊಪ್ಪಳ

೩.೧ ಹಳೆಯ ಶಿಲಾಯುಗ

೩.೨. ಮಧ್ಯ ಶಿಲಾಯುಗ

೩.೩. ನೂತನ ಶಿಲಾಯುಗ

೩.೪. ಬೃಹತ್ ಶಿಲಾಯುಗ

ಅಧ್ಯಾಯ -೩

# ಪ್ರಾಗೈತಿಹಾಸಿಕ ಕಾಲಘಟ್ಟಗಳಲ್ಲಿ ಕೊಪ್ಪಳ

ಸಂಸ್ಕೃತಿ ವಿವಕ್ಷೆ ಪ್ರಾರಂಭವಾಗುವುದು ಒಂದು ಪ್ರದೇಶದ ಅನಾದಿ ಕಾಲದ ಭೂವಿನ್ಯಾಸ ಮತ್ತು ಜೀವ ವಿನ್ಯಾಸದ ಆರಂಭಕಾಲದಿಂದಲೇ ಎನ್ನುವ ಸಂಗತಿ ಮಹತ್ವದ್ದು. ಪ್ರಕೃತ ಜೀವ ವಿನ್ಯಾಸದ ಆರಂಭದಿಂದ ಕೊಪ್ಪಳ ಪ್ರದೇಶದ ಸಾಂಸ್ಕೃತಿಕ ಅಧ್ಯಯನಕ್ಕೆ ಆರಂಭದ ಮುನ್ನುಡಿ ಬರೆಯಬಹುದು. ಡಾರ್ವಿನ್ ತನ್ನ ವಿಕಾಸ ಸಿದ್ಧಾಂತವನ್ನು ಹೇಳಿದಂದಿನಿಂದ ಸಂಸ್ಕೃತಿ ಅಧ್ಯಯನಗಳಿಗೆ ಮತ್ತಷ್ಟು ಜವಾಬ್ದಾರಿ ಹೆಚ್ಚಾಯಿತು. ಏಕೆಂದರೆ ಡಾರ್ವಿನ್ನನ ಜೀವ ವಿಕಾಸ ಸೂತ್ರಗಳು ಸಂಸ್ಕೃತಿ ಮೈಗೂಡುವಲ್ಲಿ ಯಥಾವತ್ತಾದ ಪಾತ್ರವನ್ನು ನಿರ್ವಹಿಸುತ್ತವೆ. ಆ ಕಾರಣದಿಂದ ಸಂಸ್ಕೃತಿ ಅಧ್ಯಯನಗಳಲ್ಲಿ ಡಾರ್ವಿನ್ನನ ವಿಕಾಸ ಸಿದ್ಧಾಂತವು ಅತ್ಯಂತ ಹೆಚ್ಚು ಪ್ರಸ್ತುತವೆನ್ನಿಸುತ್ತದೆ. ನಿಸರ್ಗದ ನಿಯಮಗಳ ಜೊತೆಗೆ

ಜೀವವಿನ್ಯಾಸದ ಒಪ್ಪಂದ (contract)ಗಳನ್ನು ಕಂಡುಕೊಳ್ಳಬಹುದು. ಅದನ್ನು ಡಾರ್ವಿನ್ ಹೆಚ್ಚು ಪರಿಣಾಮಕಾರಿಯಾಗಿ ತನ್ನ ಸಿದ್ಧಾಂತದಲ್ಲಿ ಮಂಡಿಸಿರುವನು. ಡಾರ್ವಿನ್ ಹೇಳಿದ ಜೀವ ವಿಕಾಸದ ನಾಲ್ಕು ಹಂತಗಳನ್ನು ಸ್ಥೂಲವಾಗಿ ಚರ್ಚಿಸುವುದು ಪ್ರಸ್ತುತ ಉಚಿತವೆನಿಸುವುದು. ಅವುಗಳೆಂದರೆ

೧. ಸ್ಪೀಸಿಗಳ ಹುಟ್ಟು (ಜೀವ ಜಂತುಗಳ ಹುಟ್ಟು)

೨. ಬದುಕಿ ಉಳಿಯಲು ಹೋರಾಟ

೩. ನೈಸರ್ಗಿಕ ಆಯ್ಕೆ

೪. ಪ್ರಬಲರ ಉಳಿಕೆ

ಈ ನಾಲ್ಕೂ ಹಂತದ ಜೈವಿಕ ವಿಕಾಸದ ಪ್ರಕ್ರಿಯೆ ಸಂಸ್ಕೃತಿ ಅಧ್ಯಯನಗಳಲ್ಲಿ ಅನ್ವಯ ಮಾಡಿಕೊಳ್ಳುವುದು ಹೆಚ್ಚು ಸೂಕ್ತ. ಏಕೆಂದರೆ ಸಂಸ್ಕೃತಿಯ ಉಗಮ ವಿಕಾಸವು ಈ ಜೈವಿಕ ವಿಕಾಸದ ಪ್ರಕ್ರಿಯೆಯನ್ನೇ ಅನುಸರಿಸಿ ನಡೆದಿದೆ. ಸಂಸ್ಕೃತಿಯೊಂದರಲ್ಲಿ ಬದುಕಿ ಉಳಿಯಲು ಮಾನವ ಹೋರಾಟ ನಡೆಸಬೇಕಾಗುತ್ತದೆ. ನೈಸರ್ಗಿಕ ಆಯ್ಕೆಯನ್ನು ಅನುಸರಿಸಬೇಕಾಗುತ್ತದೆ. ಕೊನೆಗೆ ಉಳಿಯುವುದು ಪ್ರಬಲರ ಉಳಿಕೆ ಮಾತ್ರ. ಮಾನವನ ವಿಕಾಸದ ಹಂತಗಳನ್ನು ಮಾನವಶಾಸ್ತ್ರಜ್ಞರು ಬಹಳ ಸೂಕ್ಷ್ಮ ನೆಲೆಗಳಲ್ಲಿ ಪತ್ತೆಹಚ್ಚಿದ್ದಾರೆ. ಆದರೆ ಸಂಸ್ಕೃತಿ ಅಧ್ಯಯನಗಳು ಈ ವಿಕಾಸದ ನಾಲ್ಕು ಹಂತಗಳ ಕೊನೆಯದರೊಂದಿಗೆ ಪ್ರಾರಂಭವಾಗುತ್ತದೆ. ಏಕೆಂದರೆ ಈ ನಾಲ್ಕು ಹಂತಗಳ ತರುವಾಯ ಮಾನವ ಕಂಡುಬಂದಿರುವನೆಂಬ ಸಂಗತಿ ನಿರ್ವಿವಾದ. ಈ ಹಿನ್ನೆಲೆಯಲ್ಲಿ ಶಿಲಾಯುಗದಲ್ಲಿ ಗುಂಪುಕಟ್ಟಿಕೊಂಡು ಪ್ರಬಲವಾಗಿದ್ದ ಮಾನವ ಶಕ್ತಿಯನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಏಕೆಂದರೆ ಚರಿತ್ರೆ ಎಂದಮೇಲೆ ಅದರಲ್ಲೂ ಸಾಂಸ್ಕೃತಿಕ ಚರಿತ್ರೆಯೆಂದಮೇಲೆ ಅದನ್ನೆಲ್ಲಾ ಗುರುತಿಸಲೇಬೇಕು. ನಿಜವಾಗಿಯೂ ಮಾನವನ ಚರಿತ್ರೆ ಮತ್ತು ಸಂಸ್ಕೃತಿಯ ಚರಿತ್ರೆ ರೂಪಿತವಾದದ್ದು ಅಲ್ಲಿಂದಲೇ ಎನ್ನುವುದು ಮಾನವಶಾಸ್ತ್ರಜ್ಞರ ಅಭಿಪ್ರಾಯ. ಮಾನವಶಾಸ್ತ್ರದ ಉತ್ಕ್ರಾಂತವಾದಿಗಳು (Evolutionalists) ರಚನಾವಾದಿಗಳು (Structuralist) ಕ್ರಿಯಾವಾದಿಗಳು (Functionalists)

ವಿಸರಣಾವಾದಿಗಳು (Diffusionalists) ಇವರೆಲ್ಲಾ ಬೇರೆ ಬೇರೆ ವಿಚಾರ ಪಂಥಗಳಿಗೆ (School of Thoughts) ಸೇರಿದವರಾಗಿದ್ದರೂ ಅವರೆಲ್ಲರ ಅಭಿಮತವು ಚರಿತ್ರೆಯ ನಿಟ್ಟಿನಲ್ಲಿ ಒಂದಕ್ಕೊಂದು ಅವಲಂಬಿತ ನೆಲೆಯಲ್ಲಿ ನಿಲ್ಲುತ್ತವೆ. ಅವರಂತೆ ವಾಸ್ತವವಾಗಿ ಮಾನವ ಚರಿತ್ರೆ ತನಗೊಂದು ಚರಿತ್ರೆ ಇದೆ ಎನ್ನುವ ತಿಳುವಳಿಕೆ ಬಂದಾಗಿನಿಂದ ಹುಟ್ಟಿಕೊಂಡಿದೆ. ಇದನ್ನು ಚರಿತ್ರೆಯ ಸಂಭಾವ್ಯ ಸ್ಥಿತಿ ಎಂದು ಕರೆಯಬಹುದು. ಸಂಸ್ಕೃತಿ ವಿರಚನೆ ಇಲ್ಲಿಂದಲೇ ಎಂದು ಮಾನವಶಾಸ್ತ್ರದ ಎಲ್ಲ ಹಂತದವರೂ ಗುರುತಿಸುತ್ತಾರೆ. ಮಾನವ ಶಾಸ್ತ್ರದಲ್ಲಿ ಬಹುಕಾಲ ಉಳಿಯುವಂಥ ಕೆಲಸ ಮಾಡಿದ ಲೆವಿಸ್ಟ್ರಾಸ್ ಟೈಲರ್, ಕ್ರೋಬರ್, ಮಲಿನೋವಾಸ್ಕಿ ಮುಂತಾದವರು ಪ್ರಾಣಿಶಾಸ್ತ್ರವನ್ನು ಆಧಾರವಾಗಿಟ್ಟುಕೊಂಡು ಮಾನವನ ಸಂಸ್ಕೃತಿಯ ಉಗಮದ ಬಗ್ಗೆ ಬರೆದರು. ಅವರ ಅಭಿಪ್ರಾಯದಂತೆ ಚರಿತ್ರೆಯ ಮೂಲದಲ್ಲಿ ಪ್ರಬಲರ ಉಳಿಕೆಯ ಪ್ರಕ್ರಿಯೆ ನಡೆದಿರುವ ಸಂಗತಿ ವೇದ್ಯವಾಗುತ್ತದೆ. ಇಡೀ ಪ್ರಾಣಿ ಸಂಕುಲದಲ್ಲಿ ಇರದ ಕೆಲವು ಉತ್ಕೃಷ್ಟ ಅವಯವಗಳು ಮತ್ತು ಮಿದುಳಿನ ಬೆಳವಣಿಗೆಗೆ ಮಾನವನಲ್ಲಿ ಮಾತ್ರ ವಿಶೇಷವಾಗಿ ಕಂಡು ಬಂದಿತು. ಮತ್ತು ಈ ಮಿದುಳಿನ ವಿಶೇಷ ಕಾರ್ಯ ಚಟುವಟಿಕೆಗಳಿಂದಲೇ ಮಾನವ ಸಂಸ್ಕೃತಿ ರೂಪಗೊಳ್ಳಲು ಕಾರಣವಾಯಿತೆಂದು ಮಾನವ ಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ.

ಡಾ. ಶಂಬಾ ಜೋಶಿಯವರು ತಮ್ಮ ಕನ್ನಡ ಸಂಸ್ಕೃತಿಯ ಪೂರ್ವ ಪೀಠಿಕೆಯಲ್ಲಿ ಸಂಸ್ಕೃತಿಯ ಉಗಮ ವಿಕಾಸವನ್ನು ಈ ರೀತಿ ಹೇಳುತ್ತಾರೆ. ಚರಿತ್ರೆಯು ಮಾನವನ ಪ್ರಜ್ಞೆಯಿಂದ ಉದಯಿಸಿದ್ದು. ನರನಿಗೆ ಪ್ರಜ್ಞೆಯ ಆವಿರ್ಭಾವವಾದಾಗ ಮಾನವನಲ್ಲಿ ಮಾನವೀಯತೆ ಬೆಳೆಯಿತು. ಈ ಮಾನವೀಯತೆಯೆ ಸಂಸ್ಕೃತಿ ರಚನೆಯ ಸಂಭಾವ್ಯ ಹಂತ. ಇಲ್ಲಿ ಜೋಶಿಯವರು ನರ ಮತ್ತು ಮಾನವರಲ್ಲಿ ಬೇಧವನ್ನು ಕಲ್ಪಿಸುತ್ತಾರೆ. ನರನು ಬುದ್ಧಿ ಪಾತಳಿಯವನಾಗಿರುತ್ತಾನೆ. ಮಾನವನು ಪ್ರಜ್ಞಾ ಪಾತಳಿಯವನಾಗಿದ್ದಾನೆ. ಪಶು ಪಕ್ಷಿಗಳಿಗಿರುವಂತೆ ನರನಿಗೂ ಬುದ್ಧಿ ಇರುತ್ತದೆ. ಆದರೆ ಪಶುಪಕ್ಷಿಗಳಿಗೆ ಪ್ರಜ್ಞೆ ಇರುವುದಿಲ್ಲ. ಅವು ಬುದ್ಧಿಯ ನೆಲೆಯಿಂದಲೇ ಬದುಕುತ್ತವೆ. ಆದರೆ ಪ್ರಜ್ಞೆಯು ಮಾನವನಲ್ಲಿ ನೆಲೆಯೊಡೆದಿದೆ. ಇತಿಹಾಸವನ್ನು ರಚಿಸಬೇಕು ಎಂಬ ಪ್ರಜ್ಞೆ ಮತ್ತು ನಮಗೊಂದು ಇತಿಹಾಸ ಇದೆ

ಎನ್ನುವ ಪ್ರಜ್ಞೆ ಬಂದಾಗ ಸಂಸ್ಕೃತಿ ಉಗಮವಾಯಿತು ಎನ್ನುವುದು ಅವರ ವಾದ. ಏಕೆಂದರೆ ಚರಿತ್ರೆ ಪರಂಪರೆಗಳು ಕೇವಲ ಮಾನವನಿರ್ಮಿತವಾದವುಗಳು. ಅವು ಪ್ರಜ್ಞೆಯ ನೆಲೆಯಲ್ಲಿ ರೂಪಿತಗೊಳ್ಳುತ್ತವೆ. ವಾನರನಿಂದ ಮಾನವ ಎನ್ನುವ ಡಾರ್ವಿನ್ನನ ವಿಕಾಸ ಸಿದ್ಧಾಂತವನ್ನು ಶಂಬಾ ಜೋಶಿಯವರು ಅಲ್ಲಗಳೆಯುತ್ತಾರೆ. ಏಕೆಂದರೆ ವಾನರನಿಂದ ನರನಾಗುತ್ತಾನೆಯೇ ಹೊರತು ಮಾನವನಾಗಲಾರ. ನರನಿಗೆ ಪ್ರಜ್ಞೆ ಆವಿರ್ಭವಿಸಿದಾಗ ಮಾನವನಾದ ಈ ಹಂತ ಸುಮಾರು ಸಹಸ್ರ ವರ್ಷಗಳ ಪ್ರಕ್ರಿಯೆಯೇ ಸರಿ. ವಾನರನಿಂದ ಮಾನವ ಎನ್ನುವಲ್ಲಿ ಡಾರ್ವಿನ್ ತಪ್ಪಿದ ರೀತಿಯನ್ನು ವೆಲ್ಲಾಸ್‌ನು ಸ್ಪಷ್ಟವಾಗಿ ಹೇಳಿದ್ದಾನೆ. ವಾನರನಿಂದ ನೇರವಾಗಿ ಮಾನವನಾಗುವಿಕೆ ಅಸಾಧ್ಯವೆಂದು ಅವನು ಹೇಳಿರುವನು. ಅವನ ಪ್ರಕಾರ ಈ ಸರಪಳಿಯಲ್ಲಿ ಒಂದು ಕಳಚಿದ ಕೊಂಡಿ ಇದೆ. ಅದನ್ನು missing link ಎಂದು ಗುರುತಿಸುತ್ತಾರೆ. ನರ ಮತ್ತು ಮಾನವರ ನಡುವೆ ಇದ್ದಿತೆನ್ನಲಾದ missing link ನರ (contract)ನಾಗಿರಲೇಬೇಕು ಎಂದು ಶಂಬಾ ಅವರು ಅಭಿಪ್ರಾಯಪಡುತ್ತಾರೆ. ವೆಲ್ಲಾಸನಿಗೆ ಪ್ರಚಲಿತದಲ್ಲಿರುವ ನರ ಶಬ್ದದ ಪರಿಚಯ ಇರದೇ ಹೋಗಿರಬಹುದು ಎಂದು ಶಂಬಾ ಅವರು ಅಭಿಪ್ರಾಯಪಡುತ್ತಾರೆ. ಏಕೆಂದರೆ ನರ ಶಬ್ದದ ಆಶಯ ಪಶುಪಕ್ಷಿಗಳ ಜೊತೆಗೆ ಗುರುತಿಸಿಕೊಂಡಿದೆ. ಸಂಸ್ಕೃತದಲ್ಲಿ ಒಂದು ಸುಭಾಷಿತವು ಆಹಾರ, ನಿದ್ರೆ, ಭಯ, ಮೈಥುನ ಮುಂತಾದವುಗಳು ಪಶುಪಕ್ಷಿಗಳಿಗೂ ಮತ್ತು ನರರಿಗೂ ಸಮವೆಂದು ಹೇಳಿದ್ದಾರೆ. ಈ ಹಿನ್ನೆಲೆಯಲ್ಲಿ ನರನು ಪಶುಗಳಿಗೆ ಸಮಾನ. ಆದರೆ ಅವನಿಗೆ ಪ್ರಜ್ಞೆಯೊಡೆದಾಗ ಸಂಸ್ಕೃತಿ ಜನ್ಯವಾಗುತ್ತದೆ. ಅದನ್ನು ಮಾನವಸಂಸ್ಕೃತಿ ಎಂದು ಕರೆಯಬಹುದು. ಈ ಮಾನವ ಸಂಸ್ಕೃತಿಯ ಘಟ್ಟಗಳನ್ನು ಶಿಲಾಯುಗ ಸಂಸ್ಕೃತಿ ಯಿಂದ ಮಾತ್ರ ಗುರುತಿಸಲು ಸಾಧ್ಯ.

ಅದೇನೇ ಇದ್ದರೂ ಮಾನವನ ಇತಿಹಾಸದ ನಿರ್ಮಿತಿಯನ್ನು ಶಿಲಾಯುಗದ ಸಂಸ್ಕೃತಿಗೆ ಸೀಮೀಕರಿಸಬಹುದು. ಕಾಡುಪ್ರಾಣಿಗಳಂತೆ ಮನುಷ್ಯ ಅಲೆಯದೆ ಬೇರೊಂದು ಸ್ವರೂಪದಲ್ಲಿ ಗುಂಪುಗೂಡಿ ವಾಸಿಸುವುದನ್ನು ಕಲಿತ. ಈ ಸಂದರ್ಭದಿಂದ ಸಂಸ್ಕೃತಿ ಮೈದಾಳುವಿಕೆ ಆರಂಭವಾಯಿತು

ಎಂಬುದು ಸ್ಪಷ್ಟ. ಈ ಹಿನ್ನೆಲೆಯಲ್ಲಿ ಮಾನವನ ಚರಿತ್ರೆಯನ್ನು ಶಿಲಾಯುಗದಿಂದ ಮಾತ್ರ ಕಟ್ಟಿಕೊಡಲಾಗಿದೆ. ಒಡಗೂಡಿ ಜೀವಿಸುವ ಹಂತದಿಂದ ಮಾನವನಿಗೊಂದು ಚರಿತ್ರೆಯನ್ನು ಬರೆಯಬಹುದಾದ ಸಂಗತಿ ವೇದ್ಯವಾಗುವವರೆಗಿನ ಹಂತವನ್ನು ಸಂಸ್ಕೃತಿಯ ಪೂರ್ವಾರಂಭದ ಸ್ಥಿತಿ ಎನ್ನಬಹುದು. ರಾಜಕೀಯ ಸಂಘಟನೆಗಳು ತಲೆಯೆತ್ತಿದ ನಂತರ ಸಂಸ್ಕೃತಿಗೆ ಹೊಸ ತಿರುವು ಪ್ರಾರಂಭವಾಗುತ್ತದೆ. ಏಕೆಂದರೆ ಕಾಡಿನಲ್ಲಿ ಅಲೆಮಾರಿಯಾಗಿ ಬೇಟೆಯಾಡುತ್ತಾ ಜೀವಿಸುತ್ತಿದ್ದ ಮಾನವ ಅಲ್ಲಲ್ಲಿ ನೆಲೆನಿಂತು ತನ್ನ ಬೀಡು ಬಿಟ್ಟನು. ಈ ಗುಂಪುಗೂಡಿ ಜೀವಿಸುವ ಪ್ರಕ್ರಿಯೆ ಆರಂಭವಾದಂದಿನಿಂದ ರಾಜಕೀಯ ಸಂಘಟನೆಗಳು ಸಂಭವಿಸುವವರೆಗಿನ ಒಂದು ಹಂತದ ಚರಿತ್ರೆ ತುಂಬಾ ಕುತೂಹಲಕಾರಿಯಾಗಿದೆ. ರಕ್ಷಣೆ, ಆಹಾರ, ನೀರು, ಪಶುಪಾಲನೆ, ಬೇಟೆಗಾರಿಕೆ, ಕೃಷಿ ಮುಂತಾದ ಚಟುವಟಿಕೆಗಳಿಗೆ ತಾಣಗಳನ್ನು ಹುಡುಕಿಕೊಂಡು ತನ್ನ ನೆಲೆಗಳನ್ನು ಕಟ್ಟಿಕೊಂಡನು. ಈ ಇಡೀ ಹಂತವನ್ನು ನಾವು ಪ್ರಾಗೈತಿಹಾಸಿಕ ಕಾಲಘಟ್ಟದ ಸಂಸ್ಕೃತಿ ಎಂದು ಗುರುತಿಸಿಕೊಳ್ಳುತ್ತೇವೆ. ಕರ್ನಾಟಕದಲ್ಲಿ ಪ್ರಾಗೈತಿಹಾಸಿಕ ಕಾಲಘಟ್ಟದ ಅನೇಕ ನೆಲೆಗಳನ್ನು ವಿದ್ವಾಂಸರು ಶೋಧಿಸಿದ್ದಾರೆ. ಈ ಶೋಧನೆಯಲ್ಲಿ ಕೊಪ್ಪಳ ಪ್ರದೇಶವೂ ಹೊರತಾಗಿಲ್ಲ.

ಕೊಪ್ಪಳ ಪ್ರದೇಶದಲ್ಲಿ ಶಿಲಾಯುಗದ ಜನ ವಾಸವಾಗಿದ್ದರು ಎಂಬುದಕ್ಕೆ ನಿಖರವಾಗಿ ಹೇಳಲು ಯಾವ ಆಧಾರಗಳೂ ಇಲ್ಲ. ಆದರೆ ಆ ನಿಟ್ಟಿನಲ್ಲಿ ಶಂಕಿಸಬಹುದಾದ ಹತ್ತು ಹಲವು ಸಂಗತಿಗಳು ನಮಗೆ ಸಿಗುತ್ತವೆ. ಕಲ್ಗೋರಿಗಳು, ಒರಟುಕಲ್ಲಿನ ಆಯುಧಗಳು ಮತ್ತು ಮಡಕೆ ಚೂರುಗಳು ಶಿಲಾಯುಗದ ಸಂಸ್ಕೃತಿಯು ಅಲ್ಲಿ ನೆಲೆಗೊಂಡಿತ್ತು ಎಂಬುದನ್ನು ತಿಳಿಯಪಡಿಸುತ್ತವೆ. ಕೊಪ್ಪಳ ಪ್ರದೇಶವು ಗುಡ್ಡಗಾಡು ಪ್ರದೇಶವಾಗಿದ್ದು ಆ ಕಾಲಘಟ್ಟದಲ್ಲಿ ದಟ್ಟವಾದ ಕಾಡನ್ನು ಹೊಂದಿರಲೂಬಹುದು. ವಾಸಯೋಗ್ಯವಾದ ಭೂಮಿಯನ್ನು ಗವಿಗಳನ್ನು ಮರದ ಪೊಟರೆಗಳನ್ನು ಭೌಗೋಳಿಕವಾಗಿ ಈ ಪ್ರದೇಶ ಹೊಂದಿಕೊಂಡಿರುವುದು ಸಮೀಕ್ಷೆಯಿಂದ ತಿಳಿಯುತ್ತದೆ. ಪ್ರಾಗೈತಿಹಾಸಿಕ ಕಾಲಘಟ್ಟದ ಮಾನವರು ಹುಡುಕುತ್ತಿದ್ದುದು ಇಂಥ ಆಯಕಟ್ಟಿನ ಸ್ಥಳಗಳನ್ನು.

ನೀರು, ಮರದ ಪೊಟರು, ಕೃಷಿಯೋಗ್ಯ ಭೂಮಿ, ಬೇಟೆಗಾರಿಕೆಗೆ ಅನುಕೂಲವಾಗುವ ಕಾಡು, ಮತ್ತು ಪಶುಪಾಲನೆಗೆ ನೆರವಾಗುವ ಸ್ಥಳ ಇದಾದುದರಿಂದ ಸಹಜವಾಗಿ ಇಲ್ಲಿ ಶಿಲಾಯುಗದ ಮಾನವರು ವಾಸವಾಗಿರಬಹುದೆಂದು ಊಹಿಸಬಹುದು. ಕೊಪ್ಪಳ ಪ್ರದೇಶಕ್ಕೆ ಹತ್ತಿರವಿರುವ ಕರ್ನೂಲು ಜಿಲ್ಲೆಯ ಕೆಲವು ಗುಹೆಗಳು ಹಳೆಯ ಶಿಲಾಯುಗದ ಗುಹೆಗಳೆಂದು ಚರಿತ್ರೆಕಾರರು ತೀರ್ಮಾನಿಸಿರುವ ಹಿನ್ನೆಲೆಯಲ್ಲಿ ಅದೇ ಸಾಮ್ಯತೆ ಇರುವ ಕೊಪ್ಪಳದ ಗುಹೆಗಳಲ್ಲಿ ವಾಸವಾಗಿದ್ದಿರಬಹುದೆಂದು ಶಂಕಿಸಬಹುದು.

## ೩. ೧. ಹಳೆಯ ಶಿಲಾಯುಗ (Palaeolithic Age)

ಹಳೆಯ ಶಿಲಾಯುಗದ ಜನತೆ ಈ ಪ್ರದೇಶದಲ್ಲಿ ವಾಸವಾಗಿದ್ದಾರೆ ಎಂಬುದಕ್ಕೆ ಯಾವ ಸಾಕ್ಷ್ಯಾಧಾರಗಳೂ ನಮಗೆ ದೊರೆತಿಲ್ಲ. ಏಕೆಂದರೆ ಕೊಪ್ಪಳ ಪ್ರದೇಶವು ಅತೀ ಪ್ರಾಚೀನವಾದಂತಹ ನಗರವಾಗಿ ಕಂಡುಬರುತ್ತದೆ. ಜನನಿಬಿಡವಾದ ಸ್ಥಳಗಳಲ್ಲಿ ಚಾರಿತ್ರಿಕ ಅವಶೇಷಗಳು ನಶಿಸಿ ಹೋಗುವುದು ಸಹಜ. ಹೀಗಿರುವುದರಿಂದ ಅಲ್ಲಿಯ ಹಳೆಯ ಶಿಲಾಯುಗದ ಅವಶೇಷಗಳು ನಾಶವಾಗಿ ಹೋಗಿರಲೂಬಹುದು. ಆದರೆ ಗವಿಗಳಲ್ಲಿ ಕಂಡುಬರುವ ಚಿತ್ರಗಳು ಹಳೆ ಶಿಲಾಯುಗದ ಜನರವೆಂದು ಕೆಲವು ವಿದ್ವಾಂಸರು ಗುರುತಿಸುತ್ತಾರೆ. ಮಳೆಮಲ್ಲಪ್ಪನ ಗುಡ್ಡದಲ್ಲಿ ಸಿಕ್ಕಿರುವ ಕಲ್ಗೋರಿಗಳು ಬೃಹತ್‌ಶಿಲಾಯುಗದವೆಂದು ಗುರುತಿಸಿದ್ದರೂ ಅಲ್ಲಿ ಶಿಲಾಯುಗದ ಕೆಲವು ಅವಶೇಷಗಳು ಉತ್ಖನನದಲ್ಲಿ ದೊರೆಯಬಹುದೆಂಬ ಶಂಕೆ ಇದೆ. ಏಕೆಂದರೆ ಹಳೆಯ ಶಿಲಾಯುಗದ ಮಾನವರಾದ ನೆಗ್ರಿಟೋ ಜನಾಂಗದ ಮೂಳೆಗಳು ಅಲ್ಲಿ ದೊರೆತಿವೆ. ಹೀಗಿರುವುದರಿಂದ ಹಳೆಯ ಶಿಲಾಯುಗದ ಜನರು ಅಲ್ಲಿ ವಾಸವಾಗಿದ್ದಿರಲೂಬಹುದು ಎಂದು ವಿದ್ವಾಂಸರು ಊಹಿಸುತ್ತಾರೆ. ಈ ಜನಗಳು ಕುಳ್ಳಗೆ ಕಪ್ಪು ಚರ್ಮವನ್ನು ಹೊಂದಿದ್ದಾರೆ, ಚಪ್ಪಟೆ ಮೂಗನ್ನು ಹೊಂದಿದ್ದು ದೇಹದ ಮೇಲೆ ಹೆಚ್ಚು ರೋಮವನ್ನು ಹೊಂದಿರುವರೆಂದು ಗುರುತಿಸುತ್ತಾರೆ. ತಲೆಬುರುಡೆ ಇಂದಿನ ಜನಗಳಿಗಿಂತ ಹೆಚ್ಚು ವಿಸ್ತಾರವನ್ನು ಹೊಂದಿದೆ. ಬಾಯಿಕೆಳಗಿನ ಮುಖದ ಪ್ರದೇಶ ಹೆಚ್ಚು ಉದ್ದವಿರುವುದು ಕಂಡುಬರುತ್ತದೆ. ಕೊಪ್ಪಳ

ಪ್ರದೇಶವು ಹಳೆಯ ಶಿಲಾಯುಗದ ಜನರ ನೆಲೆಯಾಗಿತ್ತು ಎಂದು ಖಚಿತವಾಗಿ ಹೇಳಲಾಗದಿದ್ದರೂ ಆ ನಿಟ್ಟಿನಲ್ಲಿ ಊಹೆ (hyphothesis) ಇಟ್ಟುಕೊಳ್ಳಲು ಅಡ್ಡಿಯಿಲ್ಲ. ಭೂ ಉತ್ಖನನ ಸಂಶೋಧನೆಗಳಿಂದ ಇಲ್ಲಿ ಶಿಲಾಯುಗದ ಅವಶೇಷಗಳು ದೊರೆತರೂ ದೊರೆಯಬಹುದು. ಈ ಕುರಿತು ಮುಂದಿನ ಸಂಶೋಧನೆಗಳ ಅಗತ್ಯವಿದೆ.

## ೩. ೨. ಮಧ್ಯ ಶಿಲಾಯುಗ (Mesolithic Age)

ಹಳೆಯ ಮತ್ತು ನವಶಿಲಾಯುಗಕ್ಕೆ ನಡುವೆ ಮತ್ತೊಂದು ಸಾಂಸ್ಕೃತಿಕ ಯುಗವನ್ನು ವಿದ್ವಾಂಸರು ಗುರುತಿಸುತ್ತಾರೆ. ಈ ಹಂತವನ್ನು ಮಾನವ ಶಾಸ್ತ್ರಜ್ಞರು ಮಧ್ಯಶಿಲಾಯುಗ ಸಂಸ್ಕೃತಿ ಹಂತವೆಂದು ಹೇಳುತ್ತಾರೆ. ಇದು ಹಳೆಯ ಮತ್ತು ನವಶಿಲಾಯುಗದ ನಡುವಿನ ಕೊಂಡಿಯಂತೆ ಕೆಲಸ ಮಾಡಿದೆ. ಈ ಯುಗವು ಎರಡು ವಿಶೇಷ ಲಕ್ಷಣಗಳನ್ನು ಒಳಗೊಂಡಿದೆ. ಮೊದಲ ಶಿಲಾಯುಗದಲ್ಲಿ ಉಪಯೋಗಿಸುತ್ತಿದ್ದ ಕಲ್ಲಿನ ಉಪಕರಣಗಳು ಗಾತ್ರದಲ್ಲಿ ಚಿಕ್ಕವಾಗಿರುತ್ತಿದ್ದವು. ಈ ಆಯುಧಗಳನ್ನು ಮೈಕ್ರೋಲಿತ್ ಎಂದು ಗುರುತಿಸುತ್ತಾರೆ. ಎರಡನೆಯದಾಗಿ ಬೆಣಚುಕಲ್ಲಿನ ಆಯುಧ ಕ್ಯಾಲಿಡೆನಿ ಎಂಬ ಪ್ರಶಸ್ತ ಶಿಲೆಯನ್ನು ಆಯುಧ ತಯಾರಿಕೆಗೆ ಬಳಸುತ್ತಿದ್ದರೆಂದು ತಿಳಿದುಬರುತ್ತದೆ. ಈ ಯುಗದಲ್ಲಿ ಆಯುಧ ತಯಾರಿಕೆಯ ತಾಂತ್ರಿಕ ವಿಧಾನ ಬೇರೆಯಾಯಿತು. ಆಕಾರದಲ್ಲಿ ಚಿಕ್ಕದಾದ ಕಲ್ಲಿನ ಕೊಡಲಿ ಬಾಚಿ, ಮೊದಲಾದ ಆಯುಧಗಳನ್ನು ತಯಾರಿಸಿ ಆ ಆಯುಧಗಳಿಗೆ ರಂಧ್ರ ಕೊರೆದು ಮರದ ಹಿಡಿಕೆಗಳನ್ನು ಅಳವಡಿಸಿ ಉಪಯೋಗಿಸುತ್ತಿದ್ದುದು ಕಂಡುಬರುತ್ತದೆ. ಬೆಂಕಿಯ ಆವಿಷ್ಕಾರದಿಂದಾಗಿ ಈ ಯುಗ ಹೊಸದೊಂದು ಸಾಂಸ್ಕೃತಿಕ ಆಯಾಮವನ್ನು ಪಡೆದುಕೊಂಡಿತು. ಬೇಟೆ ಮೀನುಗಾರಿಕೆ, ಪಶುಪಾಲನೆಗಳು ಈ ಯುಗದ ಪ್ರಮುಖ ಆರ್ಥಿಕ ಚಟುವಟಿಕೆಗಳು. ಈ ಯುಗದ ಕೊನೆಯ ಹೊತ್ತಿಗೆ ಮಡಿಕೆ ತಯಾರಿಕೆ ಮತ್ತು ಅವುಗಳ ಬಳಕೆಯಾಗಿರುವುದು ತಿಳಿದುಬರುತ್ತದೆ. ಈ ಯುಗದ ಕಾಲ ಅತ್ಯಂತ ಕಡಿಮೆಯಾಗಿದ್ದರೂ ಮನುಷ್ಯನ ಸಾಂಸ್ಕೃತಿಕ ಬೆಳವಣಿಗೆಗೆ ತುಂಬಾ ಪ್ರೇರಣೆಯಿತ್ತ ಯುಗವೆಂದು

ಗುರುತಿಸುತ್ತಾರೆ. ಭಾರತದಲ್ಲಿ ಈ ಯುಗದ ಅವಶೇಷಗಳು ಅನೇಕ ಸ್ಥಳಗಳಲ್ಲಿ ದೊರೆತಿವೆ. ಚೋಟಾ ನಾಗಪುರ ಅರಣ್ಯ ಪ್ರದೇಶ, ದಕ್ಷಿಣ ಭಾರತದ ಕೃಷ್ಣಾನದಿ ಕಣಿವೆ, ಕರ್ನಾಟಕದ ಸಂಗನಕಲ್ಲು, ಬ್ರಹ್ಮಗಿರಿ ಮತ್ತು ಗುಜರಾತಿನ ಲಂಗ್‌ನಜ್ ಮುಂತಾದವುಗಳಲ್ಲಿ ಸಿಕ್ಕಿರುವುದು ವಾಸ್ತವವಾದ ಸಂಗತಿ. ಕೊಪ್ಪಳ ಪ್ರದೇಶದಲ್ಲಿ ಮಧ್ಯ ಶಿಲಾಯುಗದ ಜನರು ವಾಸವಾಗಿದ್ದರೇ ಎನ್ನುವುದು ಇನ್ನೂ ಪ್ರಶ್ನಾರ್ಥಕವಾಗಿದೆ. ಆದರೆ ಹಳೆಯ ಶಿಲಾಯುಗದ ಜನತೆ ಅಲ್ಲಿ ನೆಲೆಸಿದ್ದರು ಎನ್ನುವ ಶಂಕೆಯು ಈ ಯುಗದಲ್ಲೂ ಮುಂದುವರೆಯುವುದು. ಪ್ರಾಚೀನ ನಗರವಾದ ಕೊಪ್ಪಳವು ಈ ಯುಗದ ಅಳಿದುಳಿದ ಅವಶೇಷಗಳ ಮಧ್ಯೆ ಬೆಳೆದುದರಿಂದ ಬೇರೆಡೆಗೆ ಸಿಗುವಂತೆ ಇಲ್ಲಿ ಅವಶೇಷಗಳು ದೊರಕುವುದಿಲ್ಲ. ಆದಾಗ್ಯೂ ಆಯುಧಗಳಿಗಾಗಿ ಬಳಸಿದ ಕಲ್ಲು ತುಂಡುಗಳು ಮತ್ತು ಗವಿಮಠದ ಬೆಟ್ಟದ ಮೇಲೆ ಸಿಗುವ ರೇಖಾ ಚಿತ್ರಗಳು ಮತ್ತು ಮಳೆಮಲ್ಲಪ್ಪನ ಗುಡ್ಡದ ಇಳಿಜಾರು ಪ್ರದೇಶದಲ್ಲಿ ದೊರಕಿರುವ ಕಲ್ಗೋರಿಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಮಧ್ಯ ಶಿಲಾಯುಗದ ಸಂಸ್ಕೃತಿ ಅಲ್ಲಿ ನೆಲೆಗೊಂಡಿದ್ದಿರಲೂಬಹುದು. ಕೋಟೆಯ ಕೆಲ ಆಯ್ದ ಸ್ಥಳಗಳಲ್ಲಿ ಹಾಗೆಯೇ ಗವಿಮಠದ ಹಿಂದಿರುವ ಪ್ರಾಂಗಣದ ಸುತ್ತಮುತ್ತ ಹಾಗೆಯೇ ಮಳೆಮಲ್ಲಪ್ಪನ ಗುಡ್ಡದ ಆಜುಬಾಜು ಪ್ರದೇಶವನ್ನು ಉತ್ಖನನ ನಡೆಸಿದರೆ ಇಲ್ಲಿ ಮಧ್ಯ ಶಿಲಾಯುಗದ ಸಂಸ್ಕೃತಿಯು ನೆಲೆಗೊಂಡಿತ್ತು ಎಂಬುದನ್ನು ಕಂಡುಕೊಳ್ಳಬಹುದು. ಈ ನಿಟ್ಟಿನಲ್ಲಿ ಕೆಲಸ ನಡೆದಿದ್ದರೂ ಉತ್ಖನನ ಮತ್ತು ಸಂಶೋಧನೆಗಳು ತೃಪ್ತಿಕರವಾಗಿ ನಡೆದಿಲ್ಲದಿರುವುದು ವಾಸ್ತವದ ಸಂಗತಿ.

## ೩. ೩. ನೂತನ ಶಿಲಾಯುಗ (Neolithic Age)

ನೂತನ ಶಿಲಾಯುಗವು ಮಾನವನ ಜೀವನ ಕ್ರಮದ ವಿಕಾಸದಲ್ಲಿ ಕ್ರಾಂತಿಕಾರಕ ಬದಲಾವಣೆಯನ್ನು ತಂದಿತು. ಈ ಯುಗದಲ್ಲಿ ಮನುಷ್ಯ ಕೃಷಿಯನ್ನು ಮೈಗೂಡಿಸಿಕೊಂಡು ಒಂದೆಡೆ ನೆಲೆನಿಂತನು. ಆಹಾರಕ್ಕಾಗಿ ಅಲೆಯುವುದರ ಬದಲು ಆಹಾರವನ್ನು ಉತ್ಪಾದಿಸಲು ಭೂಮಿಯನ್ನು

ಉಳುವುದು, ಧಾನ್ಯಗಳನ್ನು ಬೆಳೆಯುವುದು, ಪಶುಸಂಗೋಪನೆಯನ್ನು ಮಾಡುವುದನ್ನು ರೂಡಿಸಿಕೊಂಡನು. ಈ ಯುಗವು ನಿಜವಾಗಿಯೂ ಮನುಷ್ಯನ ಪ್ರಜ್ಞೆಯ ಬೆಳವಣಿಗೆಯ ಸಂಕೇತವಾಗಿದೆ. ಬೆಣಚುಕಲ್ಲುಗಳ ಬದಲಾಗಿ ಗಟ್ಟಿಯಾದ ಕಪ್ಪು ಶಿಲೆಯ ಆಯುಧಗಳನ್ನು ಮಾಡುವ ತಂತ್ರಜ್ಞಾನ ರೂಢಿಗೆ ಬಂದಿತು. ಕೊಡಲಿ, ಕಲ್ಲಿನ ಸುತ್ತಿಗೆ, ಒಣಕೆ, ಅರೆಯುವ ಸಾಧನ ಮುಂತಾದ ವಿವಿಧಾಕೃತಿಯ ಆಯುಧಗಳು ಚಾಲ್ತಿಗೆ ಬಂದವು. ವಿದ್ವಾಂಸವು ೭೮ ವಿವಿಧ ಆಯುಧಗಳನ್ನು ನೂತನ ಶಿಲಾಯುಗದ ಆಯುಧಗಳೆಂದು ಗುರುತಿಸುತ್ತಾರೆ. ಬೇಸಾಯವನ್ನು ಪ್ರವೃತ್ತಿಯನ್ನಾಗಿ ರೂಢಿಸಿಕೊಳ್ಳದೆ ವೃತ್ತಿಯಾಗಿಸಿಕೊಂಡನು. ವಾಸಕ್ಕಾಗಿ ಬೃಹತ್ ಗುಹೆಗಳನ್ನು ಕಲ್ಲು ಬಂಡೆಗಳ ನಡುವಿನ ಆಶ್ರಯ ತಾಣಗಳನ್ನು ಶಾಶ್ವತವಾಗಿ ಹಿಡಿದುಕೊಂಡನು. ಈ ಯುಗದ ಕೊನೆಯ ಕಾಲಘಟ್ಟದಲ್ಲಿ ಮರದ ಮುಟ್ಟು ಮತ್ತು ಮಣ್ಣಿನಿಂದ ಮನೆಗಳನ್ನು ಕಟ್ಟಲಾರಂಭಿಸಿದನು. ಸಾಮೂಹಿಕ ನೆಲೆ ನಿಲ್ಲುವಿಕೆಯೊಂದಿಗೆ ಹಳ್ಳಿಗಳ ಬೆಳವಣಿಗೆಗಳನ್ನು ಈ ಯುಗದಲ್ಲಿ ಗುರುತಿಸಬಹುದು. ನೂತನ ಶಿಲಾಯುಗದ ನಿವೇಶನಗಳನ್ನು ಬ್ರಹ್ಮಗಿರಿ, ಸಂಗನಕಲ್ಲು, ತೆಕ್ಕಲಕೋಟೆ, ಟಿ.ನರಸಿಪುರ, ತಮಿಳುನಾಡಿನ ಪಯ್ಯಾಂಪಲ್ಲಿ, ಆಂಧ್ರದ ಪಿಕಳಿಹಾಳ ಮತ್ತು ಉತ್ನೂರ್ ಈ ಊರುಗಳಲ್ಲಿ ಕಾಣಬಹುದು. ಈ ಪ್ರದೇಶಗಳು ಕೊಪ್ಪಳ ಪ್ರದೇಶಕ್ಕೆ ಅನತಿ ದೂರದಲ್ಲಿರುವುದರಿಂದ ನೂತನ ಶಿಲಾಯುಗದ ನೆಲೆಗಳಲ್ಲಿ ಕೊಪ್ಪಳ ಪ್ರದೇಶವೂ ಒಂದಾಗಿತ್ತು ಎಂಬುದನ್ನು ಅಲ್ಲಗಳೆಯುವಂತಿಲ್ಲ.

## ೩. ೪. ಬೃಹತ್ ಶಿಲಾಯುಗ

ಈ ಯುಗವನ್ನು ಎರಡು ವಿಭಾಗಗಳಾಗಿ ವಿಂಗಡಿಸಿ ಒಂದನ್ನು ಲೋಹಯುಗ ಮತ್ತೊಂದನ್ನು ಕಬ್ಬಿಣದ ಯುಗ ಎಂದು ಗುರುತಿಸುತ್ತಾರೆ. ಲೋಹಗಳ ಉಪಯೋಗ ಮತ್ತು ಅವುಗಳ ಬಗೆಗಿನ ತಿಳುವಳಿಕೆ ಮಾನವನಿಗೆ ನೂತನ ಶಿಲಾಯುಗದ ಅಂತ್ಯದಲ್ಲಿ ಲಭ್ಯವಾಗಿರಬೇಕೆಂದು ಸಂದೇಹಿಸಬಹುದು. ಜೀವನ ಕ್ರಮದಲ್ಲಿ ಲೋಹದ ಬಳಕೆಯಾದ ಸಂದರ್ಭವು ಮಾನವನ

ಇತಿಹಾಸದಲ್ಲಿ ಒಂದು ಬೃಹತ್ ಮೈಲಿಗಲ್ಲು. ಮಾನವನು ದಿನನಿತ್ಯ ಉಪಯೋಗಿಸಬಹುದಾದಂಥ ಎಲ್ಲ ವಸ್ತುಗಳನ್ನು ಲೋಹದಿಂದ ತಯಾರಿಸಲು ಈ ಯುಗದಲ್ಲಿ ಆರಂಭಿಸಿದನು. ಆರಂಭದಲ್ಲಿ ಚಿನ್ನದ ಬಳಕೆ ಅತಿ ಹೆಚ್ಚು ಇರಬಹುದು ಎಂದು ವಿದ್ವಾಂಸರು ಹೇಳುತ್ತಾರೆ. ಏಕೆಂದರೆ ಅದಕ್ಕೆ ಹೆಚ್ಚು ಆಕರ್ಷಕ ಗುಣವಿದೆ. ಅದರ ನಂತರ ಅದರ ತದ್ರೂಪವಾದ ಲೋಹವಾದ ತಾಮ್ರವು ಮಾನವನಿಂದ ಲೋಹಯುಗದಲ್ಲಿ ಹುಡುಕಲ್ಪಟ್ಟಿದೆ. ಒಂದು ಹಂತದಲ್ಲಿ ಕಲ್ಲು ಮತ್ತು ತಾಮ್ರಗಳೆರಡೂ ಬಳಕೆಯಲ್ಲಿದ್ದವು. ಆದರೆ ಹೆಚ್ಚು ಬಳಕೆ ಬರುವ ಮತ್ತು ಕಾರ್ಯಕ್ಷಮತೆಗೆ ತಾಮ್ರ ಉಪಯುಕ್ತವೆಂದು ಅರಿತುಕೊಂಡ ತರುವಾಯ ತಾಮ್ರವು ನಿತ್ಯ ಬದುಕಿನಲ್ಲಿ ಪ್ರಮುಖ ಪಾತ್ರವಹಿಸುತ್ತಾ ಬಂತು. ಈ ಕಾರಣದಿಂದ ಈ ಯುಗವನ್ನು ಚಾಲ್ಕೋಲಿತಿಕ್ ಸಂಸ್ಕೃತಿ ಎಂದು ಚರಿತ್ರೆಕಾರರು ಗುರುತಿಸುತ್ತಾರೆ. ಚಾಲ್ಕೋಲಿತಿಕ್ ಎಂದರೆ ತಾಮ್ರ ಮತ್ತು ಕಲ್ಲು ಎಂದು ಅರ್ಥ. ಇದು ತೀರ ಗ್ರಾಮೀಣ ಸಂಸ್ಕೃತಿಯಾಗಿದ್ದು ಭಾರತದ ಹೆಚ್ಚಿನ ಭಾಗದಲ್ಲಿ ಅಸ್ತಿತ್ವದಲ್ಲಿತ್ತು. ಇದರ ಬಗೆಗೆ ಭಾರತೀಯ ವಿಶ್ವವಿದ್ಯಾನಿಲಯಗಳು ನಿರಂತರ ಶೋಧನೆಯಲ್ಲಿ ತೊಡಗಿವೆ. ಚಾಲ್ಕೋಲಿತಿಕ್ ಯುಗದ ಪುರಾವೆಗಳು ಕೊಪ್ಪಳದಲ್ಲಿ ಕಾಣಿಸಿಕೊಳ್ಳುತ್ತವೆ. ಆದರೆ ತಾಮ್ರದ ಒಂದೆರಡು ಉಪಕರಣಗಳನ್ನು ಬಿಟ್ಟರೆ ಬೇರೆ ಅವಶೇಷಗಳು ಕಂಡುಬಂದಿಲ್ಲ.

ಕಬ್ಬಿಣದ ಸಂಶೋಧನೆ ಮಾನವನ ಜೀವನದ ಗತಿಯನ್ನೇ ಬದಲಿಸಿತು. ಮಾನವ ಸಂಸ್ಕೃತಿಯ ವಿಕಾಸ ಪ್ರಕ್ರಿಯೆಯಲ್ಲಿ ಈ ಕಾಲಘಟ್ಟ ಮತ್ತೊಂದು ಮಹತ್ವದ ಮೈಲಿಗಲ್ಲಾಗಿದೆ. ಹೆಚ್ಚು ಭಾರವಾಗಿರುವ ಹಾಗೆಯೇ ಹೆಚ್ಚು ವ್ಯವಸ್ಥಿತವಾದ ಆಯುಧ ಮತ್ತು ಇತರ ಸಲಕರಣೆಗಳ ಬಳಕೆಯನ್ನು ಈ ಯುಗದಲ್ಲಿ ಕಾಣಬಹುದು. ಕ್ರಮಕ್ರಮವಾಗಿ ಜೀವನದ ಪ್ರತಿ ರಂಗದಲ್ಲಿಯೂ ಕಬ್ಬಿಣದ ಬಳಕೆ ಹೆಚ್ಚಾಗತೊಡಗಿತು. ಕಬ್ಬಿಣದ ಆವಿಷ್ಕಾರ ಮತ್ತು ಅದು ಬಳಕೆಯಾದ ಸಂದರ್ಭವನ್ನು ಇತಿಹಾಸಕಾರರು ಕಬ್ಬಿಣಯುಗವೆಂದು ಗುರುತಿಸುತ್ತಾರೆ. ಕೊಪ್ಪಳ ಪ್ರದೇಶದ ಸುತ್ತಮುತ್ತ ಕಬ್ಬಿಣದ ನಿಕ್ಷೇಪಗಳಿಗೆ ಕೊರತೆಯಿಲ್ಲ. ಕ್ರಿ.ಪೂ. ೧೨೦೦ ರಿಂದ ಕ್ರಿ.ಶ. ೨-೩ ನೇ ಶತಮಾನದವರೆಗೂ ಈಯುಗದ ಹರವನ್ನು

ಕಾಣಬಹುದು. ಈ ಕಾಲಘಟ್ಟದಲ್ಲಾಗಲೇ ಕೊಪ್ಪಳ ಪ್ರದೇಶವು ರಾಜಕೀಯ ಸಂಘಟನೆಯತ್ತ ಮುನ್ನಡೆಯುತ್ತಿತ್ತು. ಉತ್ತರ ಭಾರತದಲ್ಲಿ ಮಗಧ ಸಾಮ್ರಾಜ್ಯದಂಥ ಸಣ್ಣ ಪುಟ್ಟ ರಾಜ್ಯಗಳು ತಲೆಯೆತ್ತಿ ರಾಜಕೀಯ ಸಂಸ್ಕೃತಿಯನ್ನು ನೆಲೆಗೊಳಿಸಿಕೊಂಡಿದ್ದವು. ಈ ಸಂಸ್ಕೃತಿಯು ಕ್ರಮಕ್ರಮವಾಗಿ ದಕ್ಷಿಣ ಭಾರತದತ್ತ ಕ್ರಮಿಸಿತು. ಈ ಸಂದರ್ಭದಲ್ಲಿ ಮೌರ್ಯ ಸಾಮ್ರಾಜ್ಯ ಉತ್ತರದಿಂದ ದಕ್ಷಿಣದವರೆಗೆ ಏಕಾಕೃತಿಯಲ್ಲಿ ತಲೆಯೆತ್ತಿತು. ಮೌರ್ಯ ಸಾಮ್ರಾಜ್ಯದ ಸ್ಪಷ್ಟ ಉಲ್ಲೇಖಗಳು ಕೊಪ್ಪಳದಲ್ಲಿದೆ. ಕೊಪ್ಪಳ ಪ್ರದೇಶದಲ್ಲಿ ಕಂಡುಬರುವ ಬೃಹತ್ ಶಿಲಾಯುಗದ ಅವಶೇಷಗಳನ್ನು ಕುರಿತು ಈ ಕೆಳಗಿನಂತೆ ನಿರ್ಣಯ ತೆಗೆದುಕೊಳ್ಳಬಹುದು.



೧. ಕೊಪ್ಪಳ ಪ್ರದೇಶದಲ್ಲಿ ಸುರಕ್ಷಿತ ಗವಿಗಳನ್ನು ಕಾಣಬಹುದು; ಪರ್ವತ ಪ್ರದೇಶಗಳನ್ನು ಕಾಣಬಹುದು ಜೊತೆಗೆ ನೀರು ನೀಡುವ ಜರಿಗಳು, ನೀರಿನ ಹೊಂಡಗಳು ಲಭ್ಯವಿರುವುದರಿಂದ ಅದು ಪ್ರಾಚೀನ ಕಾಲದಲ್ಲಿ ವಾಸಯೋಗ್ಯ ಪ್ರದೇಶವಾಗಿತ್ತು.



೨. ವಿವಿಧಾಕಾರದ ಶಿಲೆಯ ಆಯುಧಗಳು ಕೊಪ್ಪಳದಲ್ಲಿ ದೊರೆತಿವೆ. ಬೃಹತ್ ಶಿಲಾಯುಗದ ಮಾನವನ ವಾಸ್ತವ್ಯದ ನೆಲೆಗಳನ್ನು ಗುರುತಿಸಿ ಭಾರತ ಸರ್ಕಾರದ ಪುರಾತತ್ವ ಸರ್ವೇಕ್ಷಣ ಇಲಾಖೆ ಮತ್ತು ಕರ್ನಾಟಕ ಸರ್ಕಾರದ ಪುರಾತತ್ವ ಇಲಾಖೆ ಉತ್ಖನನವನ್ನು ಕೈಗೆತ್ತಿಕೊಂಡಿವೆ. ಇದರ ಪರಿಣಾಮವಾಗಿ ಅಂದಿನ ಮಾನವನು ಬಳಸಿದ ಉಪಕರಣಗಳ ಅವಶೇಷಗಳು ವಿಫಲವಾಗಿ ಲಭ್ಯವಾಗಿವೆ. ಸಂಶೋಧಕರು ಅನೇಕ ನೆಲೆಗಳಲ್ಲಿ ಸಂಶೋಧನೆಯನ್ನು ಕೈಗೆತ್ತಿಕೊಂಡು ಬೃಹತ್ ಶಿಲಾಯುಗದ ಮಾನವನ ಅವಶೇಷಗಳನ್ನು ಶೋಧಿಸಿರುವರು. ಬೆಣಚುಕಲ್ಲಿನ ಕಪ್ಪು ಶಿಲೆಯ ಕೊಡಲಿಗಳು, ಮೃದುಶಿಲೆಯಿಂದ ತಯಾರಿಸಿದ ಆಭರಣಗಳು, ವಿವಿಧ ಬಣ್ಣದ ಮಡಿಕೆಯ ತುಂಡುಗಳು ಲಭ್ಯವಾಗಿವೆ. ಈ ಅವಶೇಷಗಳ ಆಧಾರದ ಮೇಲೆ ಬೃಹತ್ ಶಿಲಾಯುಗದ ಮಾನವನ ಬದುಕು ಮತ್ತು ಸಂಸ್ಕೃತಿಯನ್ನು ನಿರೂಪಿಸಬಹುದಾಗಿದೆ.

೩. ಇದುವರೆಗೆ ಶೋಧಿಸಿದ ಬೃಹತ್ ಶಿಲಾಯುಗದ ಮಾನವನ ಅವಶೇಷಗಳಲ್ಲಿ ಕಲ್ಲಿನ ಕೊಡಲಿಗಳು ಹೆಚ್ಚು ಲಭ್ಯವಾಗಿವೆ. ಇವುಗಳ ಗಾತ್ರದಲ್ಲಿ ಹಿರಿ ಕಿರಿದಾಗಿವೆ. ಆಕಾರದಲ್ಲಿ ಸಾಮ್ಯತೆಯಿದೆ. ಮೇಲ್ಭಾಗ ಚೂಪಾಗಿದ್ದು ಕೆಳಭಾಗ ಪ್ರಮಾಣಕ್ಕನುಸಾರವಾಗಿ ಅಗಲವಾಗಿದೆ. ಪ್ರಾರಂಭದ ಕೊಡಲಿಗಳು ಅಷ್ಟೊಂದು ತೀಕ್ಷ್ಣ ಸ್ವರೂಪದವುಗಳಾಗಿರಲಿಲ್ಲ. ಅನಂತರದ ಕೊಡಲಿಗಳಲ್ಲಿ ಹೆಚ್ಚು ಹರಿತವಾದ ಹೊಳಪಿನಿಂದ ಕೂಡಿದ ನುಣುಪಾದ ಕೊಡಲಿಗಳು ಲಭ್ಯವಾಗಿವೆ. ಕೊಪ್ಪಳದ ಮಳೆಮಲ್ಲಪ್ಪನ ಗುಡ್ಡದ ಉತ್ತರದ ಮುಂದಿನ ಇಳಿಜಾರು ಪ್ರದೇಶದಲ್ಲಿ ಈ ಕೊಡಲಿಗಳು ದೊರೆತಿವೆ.

೪. ಈವರೆಗೆ ಸಿಕ್ಕ ಅವಶೇಷಗಳಲ್ಲಿ ಮಡಕೆಯ ಗಡಿಗೆಗಳು ಮತ್ತು ಅವುಗಳ ತುಂಡುಗಳು ಲಭ್ಯವಾಗಿವೆ. ಉತ್ಖನನದಲ್ಲಿ ಬೂದುಬಣ್ಣದ ಕೆಂಪುಬಣ್ಣದ, ಮತ್ತು ಇತರ ಬಣ್ಣಗಳ ಗಡಿಗೆಗಳ ತುಂಡುಗಳು ದೊರಕಿವೆ. ಕೆಲವು ಮಡಕೆಯ ತುಂಡುಗಳ ಮೇಲೆ ರೇಖೆಗಳನ್ನು ಎಳೆದಿದ್ದಾರೆ. ಕೆಲವು ತುಂಡುಗಳ ಮೇಲೆ ಬಣ್ಣದ ಚುಕ್ಕೆಗಳನ್ನು ಮೂಡಿಸಿರುವರು. ಮತ್ತೆ ಕೆಲವು ಮಡಕೆಯ ತುಂಡುಗಳು ಹೊರಮೈ ಹೊಳಪಿನಿಂದ ಕೂಡಿದೆ. ದೊಡ್ಡ ದೊಡ್ಡ ಗಡಿಗೆಗಳಲ್ಲಿ ಶವವನ್ನಿಟ್ಟು ಹೂಳುತ್ತಿದ್ದ ಕುರುಹುಗಳನ್ನು ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯವರು ಶೋಧಿಸಿರುವರು. ಈ ವಿವಿಧಾಕಾರದ ಗಡಿಗೆಗಳನ್ನು ಶವಸಂಸ್ಕಾರಕ್ಕೂ ಮತ್ತು ಧಾನ್ಯಗಳ ದಾಸ್ತಾನಿಗೂ ಬಳಸುತ್ತಿದ್ದರು. ಶವದ ಪಕ್ಕದಲ್ಲಿ ಅವನಿಗೆ ಇಷ್ಟವಾದ ಪದಾರ್ಥಗಳನ್ನು ಮಡಿಕೆಗಳಲ್ಲಿಟ್ಟು ಹೂಳುತ್ತಿದ್ದರು. ಬೃಹತ್ ಶಿಲಾಯುಗದಲ್ಲಿ ಬರೆದಿರುವ ಲಿಪಿಗಳು ಚಿತ್ರಲಿಪಿಯಿಂದ ಕೂಡಿವೆ. ಹರಪ-ಮಹೇಂಜೋದಾರೋ ಉತ್ಖನನದಲ್ಲಿ ದೊರೆತ ಅವಶೇಷಗಳಲ್ಲಿ ಈ ತೆರನಾದ ಚಿತ್ರಲಿಪಿ ಕಂಡುಬಂದಿರುವುದನ್ನು ಶೋಧಿಸಿದ್ದಾರೆ.

೫. ಕೊಪ್ಪಳದ ಗವಿಮಠದ ಪ್ರದೇಶದಲ್ಲಿ ಉದ್ಧಸೆಯ ಗವಿಯಲ್ಲಿ ದೊರೆತಿರುವ ಆಕಳು ಮತ್ತು ಟಗರಿನ ರೇಖಾಚಿತ್ರಗಳ ಕೆತ್ತನೆ ಕಬ್ಬಿಣದ ಉಪಯೋಗದಿಂದಲೇ ನಡೆದಿರುವುದು ಸ್ಪಷ್ಟವಾಗುತ್ತದೆ.

ಏಕೆಂದರೆ ಗಟ್ಟಿ ಬಂಡೆಕಲ್ಲುಗಳಲ್ಲಿ ರೇಖೆ ಮೂಡಿಸುವುದು ಕಷ್ಟಕರ ಸಂಗತಿ . ಆದುದರಿಂದ ರೇಖೆ ಮೂಡಿಸಲು ಬಳಸಿದ ಸಲಕರಣೆ ಕಬ್ಬಿಣದಿಂದಲೇ ತಯಾರಾಗಿದೆ. ಬೃಹತ್ ಶಿಲಾಯುಗದಲ್ಲಿ ಕಬ್ಬಿಣದ ಉಪಯೋಗವನ್ನು ಇದು ಸ್ಪಷ್ಟಪಡಿಸುತ್ತದೆ.

೬. ಅದೇ ಗವಿಯಲ್ಲಿ ದೊರೆತಿರುವ ಚಿತ್ರವನ್ನು ಕಂಡಾಗ ಪಶುಸಂಗೋಪನೆಯ ಕಲೆ ತಿಳಿದಿರುವ ಸಂಗತಿ ತಿಳಿಯುತ್ತದೆ. ಏಕೆಂದರೆ ಗವಿಗಳಲ್ಲಿರುವ ರೇಖಾಚಿತ್ರಗಳು ಬೃಹತ್ ಶಿಲಾಯುಗದ ಕಾಲದ್ದವೆಂದು ಈಗಾಗಲೇ ಗುರುತಿಸಿರುವರು.

೭. ಮಳೆಮಲ್ಲಪ್ಪನ ಗುಡ್ಡದ ಎತ್ತರದ ಅಡಿಯ ಮುಂದಣ ಇಳಿಜಾರು ಪ್ರದೇಶದಲ್ಲಿ ಒರಟು ಚಿಕ್ಕ ಕಪ್ಪು ಕಲೆಯ ಕೊಡಲಿಗಳು ದೊರೆತಿರುವುದರಿಂದ ಮತ್ತು ಇದೇ ರೀತಿಯ ಅವಶೇಷಗಳು ಸಂಗನಕಲ್ಲು ಮತ್ತು ಬ್ರಹ್ಮಗಿರಿಯಲ್ಲಿಯೂ ದೊರೆತಿರುವುದರಿಂದ ಬೃಹತ್ ಶಿಲಾಯುಗದಲ್ಲಿ ಮಾನವನು ಕೊಪ್ಪಳದಲ್ಲಿ ನೆಲೆಸಿದ್ದನೆಂಬುದು ಸ್ಪಷ್ಟವಾಗುತ್ತದೆ.

೮. ಮಳೆಮಲ್ಲಪ್ಪನ ಗುಡ್ಡದ ಇಳಿಜಾರು ಪ್ರದೇಶದಲ್ಲಿ ಆ ಕಾಲಘಟ್ಟದ ಜನರು ಕೃಷಿ ಭೂಮಿಯನ್ನಾಗಿ ಪರಿವರ್ತಿಸಿಕೊಂಡಿದ್ದರೆಂದು ಪುರಾವೆಗಳು ಸಿಗುತ್ತವೆ. ರೇಖಾಚಿತ್ರಗಳಲ್ಲಿ ಮೂಡಿಬಂದಿರುವ ಎತ್ತು ಮತ್ತು ಆಕಳಿನ ಚಿತ್ರಗಳು ಇರುವುದರಿಂದ ವ್ಯವಸಾಯಕ್ಕೆ ಎತ್ತುಗಳನ್ನು ಬಳಸುತ್ತಿದ್ದರೆಂದು ಡಾ. ಅ. ಸುಂದರ ಅವರು ಗುರುತಿಸಿದ್ದಾರೆ.

೯. ಈ ಬೃಹತ್ ಶಿಲಾಯುಗದ ಸಂಸ್ಕೃತಿಯಲ್ಲಿ ದೊರೆತಿರುವ ಕಲ್ಗೋರಿಗಳನ್ನು ಕುರಿತು ಚರ್ಚಿಸಬಹುದು. ಕೊಪ್ಪಳದಿಂದ ಸುಮಾರು ಒಂದೂವರೆ ಕಿಲೋಮೀಟರ್ ದೂರದಲ್ಲಿರುವ ಮಳೆಮಲ್ಲಪ್ಪನ ಗುಡಿಯಿಂದ ಅನತಿ ದೂರದಲ್ಲಿ ಒಂದು ಕಲ್ಲುಗುಡ್ಡ ಸಮತಲ ಪ್ರದೇಶದಲ್ಲಿ ಬೃಹತ್ ಶಿಲಾಯುಗದ ಸಂಸ್ಕೃತಿಯನ್ನು ಕಾಣಬಹುದು. ಅಲ್ಲಿ ಹಾಳುಬಿದ್ದ ಸುಮಾರು ೨೦ ಕಲ್ಗೋರಿಗಳಿವೆ. ಈಗ

ಸುಸ್ಥಿತಿಯಲ್ಲಿ ಇಲ್ಲ. ಇದೇ ತರಹದ ಕಲ್ಗೋರಿಗಳು ಅಲ್ಲಿಂದ ಪೂರ್ವಕ್ಕೆ ಸುಮಾರು ೨೦ ಕಿ.ಮೀ. ದೂರದಲ್ಲಿರುವ ಇಂದುರ್ಗಿಯಿಂದ ಹಿರೇಬೆನಕಲ್‌ನವರೆಗೆ ಸಾಲುಗುಡ್ಡಗಳಮೇಲೆ ಅಲ್ಲಲ್ಲಿ ಯಥಾಸ್ಥಿತಿಯಲ್ಲಿ ನೂರಾರು ಕಾಣಸಿಗುತ್ತವೆ. ಇವುಗಳಿಂದ ಕೊಪ್ಪಳದಲ್ಲಿಯೂ ಅವು ಮೊದಲು ಹೇಗಿದ್ದವೆಂದು ಸರಿಯಾಗಿ ತಿಳಿದುಕೊಳ್ಳಲು ಸಾಧ್ಯವಾಗದು. ಇವುಗಳು ಕೇವಲ ಸತ್ತವರ ಅಸ್ತಿಗಳನ್ನಿಡಲು ಕಟ್ಟಲ್ಪಟ್ಟ ಸರಳ ಕಲ್ಮನೆಗಳಾಗಿದ್ದರೂ ಆ ಕಾಲದ ಜನರ ನಿರ್ಮಾಣ ಕುಶಲತೆಗೆ ಇವು ಸಾಕ್ಷಿಯಾಗಿವೆ. ಸಾಮಾನ್ಯವಾಗಿ ಈಗಿನ ಕಲ್ಲು ವಡ್ಡರು ಕಲ್ಲು ಗುಡ್ಡಗಳಲ್ಲಿ ಪದರುಗಳಿರುವ ಆಯಕಟ್ಟಿನ ಭಾಗಗಳಲ್ಲಿ ಸ್ವಲ್ಪ ಹೊತ್ತು ಬೆಂಕಿ ಉರಿಸುತ್ತಾರೆ. ಆ ಶಾಖದಿಂದ ಕ್ರಮೇಣ ಮೇಲಿನ ಕಲ್ಲು ಪದರು ಕೆಳಗಿನ ಪದರಿನಿಂದ ಬೇರ್ಪಡೆಯಾಗುತ್ತದೆ. ನಂತರ ಕಬ್ಬಿಣದ ಸುತ್ತಿಗೆಯಿಂದ ಅದರ ಮೇಲೆ ಹೊಡೆದಾಗ ಕಲ್ಲುಗಳು ಪದರಗಳಿಂದ ಬಿಚ್ಚಿಕೊಳ್ಳುತ್ತವೆ. ಹೀಗೆ ಬಿಚ್ಚಿಕೊಂಡ ಕಲ್ಲು ಚಪ್ಪಡಿಗಳು ಸಾಮಾನ್ಯವಾಗಿ ದೊಡ್ಡವಾಗಿದ್ದು ಅಡ್ಡಾದಿಡ್ಡಿಯಾಗಿರುತ್ತವೆ. ಅವುಗಳಿಂದ ಬೇಕಾದ ಅಳತೆಗಳಿಗೆ ಉಳಿಯಿಂದ ಕತ್ತರಿಸಿ ನಂತರ ಅವುಗಳನ್ನು ಸಾಗಿಸುತ್ತಾರೆ. ಬಹುಮಟ್ಟಿಗೆ ಈ ಪದ್ಧತಿಯು ಬಹಳ ಪ್ರಾಚೀನ ಕಾಲದ್ದಾಗಿದ್ದು ಬೃಹತ್ ಶಿಲಾ ಸಂಸ್ಕೃತಿ ಜನರಲ್ಲೂ ಈ ತಾಂತ್ರಿಕ ಪ್ರಕ್ರಿಯೆ ಇತ್ತೆಂದು ತಿಳಿದುಬರುತ್ತದೆ. ಅವರ ಕಲ್ಗೋರಿಗಳ ಕಲ್ಲು ಚಪ್ಪಡಿಗಳನ್ನು ಸೂಕ್ಷ್ಮವಾಗಿ ನೋಡಿದಾಗ ಹೀಗೆನ್ನಿಸುತ್ತದೆ. ಕಲ್ಗೋರಿಗಳನ್ನು ಕಟ್ಟಲು ಈ ರೀತಿ ಎಬ್ಬಿಸಿದ ದೊಡ್ಡ ದೊಡ್ಡ ಕಲ್ಲು ಚಪ್ಪಡಿಗಳನ್ನು ಬೇಕಾದ ಅಳತೆಗೆ ಆಯತಾಕಾರದಲ್ಲಿ ಮೊದಲು ತುಂಡುಮಾಡಿಕೊಳ್ಳಲಾಗುತ್ತಿತ್ತು. ಆಯ್ದುಕೊಂಡ ಸಮತಲ ಸ್ಥಳದಲ್ಲಿ ಇಂಥ ನಾಲ್ಕು ಕಲ್ಲು ಚಪ್ಪಡಿಗಳನ್ನು ಕ್ರಮವಾಗಿ ಒಂದು ಮತ್ತೊಂದು ಲಂಬವಾಗಿರುವ ಹಾಗೆ ಆನಿಸಿ ನೆಟ್ಟಗೆ ನಿಲ್ಲಿಸಿದಾಗ ಒಂದು ಚೌಕೋನದ ಕೋಣೆ ನಿರ್ಮಾಣವಾಗುತ್ತಿತ್ತು. ಇದರ ಪ್ರತಿಯೊಂದು ಹೊರ ಮೂಲೆಯಲ್ಲೂ ಒಂದು ಕಲ್ಲು ಚಪ್ಪಡಿಯ ಅಂಚು ಅದಕ್ಕೆ ಆನಿಸಿಟ್ಟು ಮತ್ತೊಂದರ ಅಂಚಿನಿಂದ ಪ್ರದಕ್ಷಿಣೆ ಅಥವಾ ಅಪ್ರದಕ್ಷಿಣೆ ಕ್ರಮದಲ್ಲಿ ಹೊರಚಾಚಿರುತ್ತದೆ. ಇದುವರೆಗೂ ಹಲವು ಸ್ಥಳಗಳಲ್ಲಿ ಇಂಥ ನೂರಾರು ಕಲ್ಗೋರಿಗಳಲ್ಲಿ ಕಂಡು ಬಂದಹಾಗೆ ಅಪ್ರದಕ್ಷಿಣೆ ಕ್ರಮದಲ್ಲಿ ಹೀಗೆ

ಕಲ್ಲುಚಪ್ಪಡಿಗಳನ್ನು ನಿರ್ಮಿಸಿರುವುದೇ ಹೆಚ್ಚು. ಹೀಗೆ ಒಂದಕ್ಕೊಂದು ಲಂಬವಾಗಿ ಆನಿಸಿ ನಿಲ್ಲಿಸುವುದರಿಂದ ಚಪ್ಪಡಿಗಳು ಒಳಮುಖವಾಗಿ ಬೀಳಲು ಸಾಮಾನ್ಯವಾಗಿ ಸಾಧ್ಯವಾಗುವುದಿಲ್ಲ. ಅಂದರೆ ಕೋಣೆಯ ನಿರ್ಮಾಣದಲ್ಲಿ ತಕ್ಕಮಟ್ಟಿಗೆ ಭದ್ರತೆ ಉಂಟಾಗುತ್ತದೆ. ಈ ರೀತಿ ನಿಲ್ಲಿಸಿದ ಚಪ್ಪಡಿಗಳ ಮೇಲೆ ಇವೆಲ್ಲಕ್ಕೂ ದೊಡ್ಡದಾದ ದಪ್ಪವಾದ ಚಪ್ಪಡಿಯನ್ನು ಅಡ್ಡವಾಗಿ ಇಡಲಾಗುತ್ತದೆ. ಕೋಣೆಯ ಪೂರ್ವಬದಿಯ ಚಪ್ಪಡಿಯ ಮಧ್ಯದಲ್ಲಿ ಸುಮಾರು ೫೦-೫೫ ಸೆಂಟಿಮೀಟರ್ ವ್ಯಾಸದ ಒಂದು ತೂತು (Port hole) ಹೊರಗಡೆ ಈ ತೂತಿನ ಎರಡು ಬದಿಗಳಲ್ಲಿ ಒಂದೊಂದು ಕಲ್ಲು ಹಲಗೆಯನ್ನಿಟ್ಟು ಕಾಲುವೆ (passage) ಮಾಡಲಾಗಿರುತ್ತದೆ. ಮತ್ತು ಈ ತೂತನ್ನು ಮುಚ್ಚಲು ಪ್ರತ್ಯೇಕವಾಗಿ ತೂತಿಗೂ ಮತ್ತು ಹಾದಿಗೂ ಮಧ್ಯದಲ್ಲಿ ಇಡಲಾಗುತ್ತದೆ. ಕೋಣೆಯ ಹೊರಬದಿಯಲ್ಲಿ ಅದಕ್ಕೆ ಹಚ್ಚಿಕೊಂಡು ಸುತ್ತಲೂ ಕಲ್ಲುಹಲಗೆಗಳ ಸಣ್ಣ ಸಣ್ಣ ತುಂಡುಗಳ ಸಾಲುಗಳನ್ನು ಒಂದರಮೇಲೊಂದರಂತೆ ಮತ್ತು ಒಳಮುಖವಾಗಿ ಬಾಗುವ ಹಾಗೆ ವೃತ್ತಾಕಾರದಲ್ಲಿ ಮೇಲಿನ ಅಡ್ಡ ಹಲಗೆಯವರೆಗೂ ಜೋಡಿಸಲಾಗುತ್ತದೆ. ಅಂದರೆ ಕೋಣೆಯ ಚಪ್ಪಡಿಗಳಿಗೆ ಹೊರಬದಿಯಿಂದ ಓರೆಗೋಡೆಯ ಆನಿಕೆ (buttress) ಆನಿಕೆಯನ್ನು ಕೊಟ್ಟು ಅವುಗಳು ಹೊರಮುಖವಾಗಿ ಬೀಳದ ಹಾಗೆ ಮಾಡುವುದಕ್ಕೋಸ್ಕರ ಅಲ್ಲದೆ ಈ ತುಂಡು ಕಲ್ಲುಗಳ ಹೊರಗೋಡೆಯನ್ನು ಸಂಪೂರ್ಣವಾಗಿ ಕೋಣೆಯ ತಳವಿನ್ಯಾಸಕ್ಕನುಗುಣವಾಗಿ ಚೌಕೋನವಾಗಿ ನೆಟ್ಟಗೆ ಕಟ್ಟಿದೆ. ವೃತ್ತಾಕಾರವಾಗಿ ಒಳಮುಖ ಬಾಗುವ ಹಾಗೆ ಕಟ್ಟಿದ್ದರಲ್ಲಿ ಚತುರತೆ ಇದೆ. ಚೌಕೋನವಾಗಿ ನೆಟ್ಟಗೆ ಕಟ್ಟಿದಲ್ಲಿ ಇದರ ಒಳಮುಖ ಒತ್ತಡ ಕೋಣೆಯ ಗೋಡೆಗಳ ಮೇಲೆ ಬೀಳುತ್ತಿರಲಿಲ್ಲ. ಕಾಲಾಂತರದಲ್ಲಿ ಒಳಗಿನ ಗೋಡೆ ಹೊರಬಾಗಿದಲ್ಲಿ ಹೊರಗಿನ ತುಂಡುಕಲ್ಲಿನ ಗೋಡೆ ಕುಸಿದು ಬೀಳಬಹುದು. ಆದುದರಿಂದ ಈ ಕ್ರಮದಲ್ಲಿ ಹೊರಗೋಡೆಯನ್ನು ಕಟ್ಟಿದರೆ ಕೋಣೆಗೆ ಭದ್ರತೆ ಇರುವುದಿಲ್ಲ ಎನ್ನುವುದನ್ನು ಅರಿತು, ಎಲ್ಲ ಕಡೆಗಳಲ್ಲಿ ಒಂದೇ ಸಮನೆ ಕೋಣೆ ಗೋಡೆಗಳ ಮೇಲೆ ಒತ್ತಡ ಬೀಳುವುದರಿಂದ ಕೋಣೆಗೆ ಹೆಚ್ಚು ಭದ್ರತೆ ಬರುವುದು. ಈ ತಂತ್ರಜ್ಞಾನವನ್ನು ಬೃಹತ್ ಶಿಲಾಯುಗದ ಜನತೆ ಬಳಸಿಕೊಂಡಿರುವುದು ಸೋಜಿಗವೆನಿಸುತ್ತದೆ.

ಮಣ್ಣು ಮತ್ತು ಗಚ್ಚು ಏನನ್ನೂ ಉಪಯೋಗಿಸದೆ ಕೇವಲ ಕಲ್ಲು ಹಲಗೆ ಮತ್ತು ತುಂಡು ಕಲ್ಲುಗಳಿಂದ ಬಲವಾದ ಕೋಣೆಯನ್ನು ನಿರ್ಮಿಸಿರುವುದನ್ನು ನಾವು ಗಮನಿಸಬೇಕಾಗುವುದು. ಇವು ಸಾಮಾನ್ಯ ನೋಟಕ್ಕೆ ಬಹಳ ಸಾದಾ ನಿರ್ಮಿತಿಗಳಾಗಿ ಕಂಡರೂ ಇಂಥ ನಿರ್ಮಾಣದಲ್ಲಿ ಬಳಕೆಯಾಗಿರುವ' ತಂತ್ರಜ್ಞಾನ, ಬುದ್ಧಿವಂತಿಕೆ, ಅನುಭವ ಮೂಲಭೂತ ನಿರ್ಮಾಣ ತತ್ವಗಳು ಮುಖ್ಯವಾಗುತ್ತವೆ. ಅದೇನೇ ಇದ್ದರೂ ಕೊಪ್ಪಳ ಪ್ರದೇಶವು ಪ್ರಾಗೈತಿಹಾಸಿಕ ಕಾಲಘಟ್ಟದಲ್ಲಿ ಅದು ಜನವಾಸಸ್ಥಳವಾಗಿತ್ತು. ನಂದರ ಸಾಮ್ರಾಜ್ಯದ ಅವನತಿ, ಮೌರ್ಯಸಾಮ್ರಾಜ್ಯದ ಉದಯ - ಈ ಸಂಕೀರ್ಣ ಸಂದರ್ಭದಲ್ಲಿ ಕೊಪ್ಪಳವು ದಕ್ಷಿಣ ಭಾರತದ ಬಹುದೊಡ್ಡ ವ್ಯಾಪಾರ ವಾಣಿಜ್ಯ ಮತ್ತು ಧಾರ್ಮಿಕ ಕೇಂದ್ರವಾಗಿತ್ತು. ಜೊತೆಗೆ ಬೌದ್ಧ ಮತ್ತು ಜೈನ ಧರ್ಮಕೇಂದ್ರವಾಗಿ ಪ್ರಸಿದ್ಧಿಯನ್ನು ಪಡೆದುಕೊಳ್ಳುತ್ತಿತ್ತು.

## ಈ ಯುಗದ ಸಾಂಸ್ಕೃತಿಕ ಪ್ರಕ್ರಿಯೆ

ಮಾನವನ ವಿಕಾಸದ ಹಾದಿಯನ್ನು ಹುಡುಕುತ್ತ ಹೋದಾಗ ಹಲವಾರು ವಿಕಾಸದ ಹಂತಗಳನ್ನು ಗುರುತಿಸಬಹುದು. ಬದುಕಿನ ಕ್ರಮ ಹೆಚ್ಚು ವ್ಯವಸ್ಥಿತವಾಗಿ ರೂಢಿಗೊಳ್ಳುತ್ತಲೆ ಸಂಘಟನೆಗಳು ಹುಟ್ಟಿಕೊಂಡ ಸಾಧ್ಯತೆಗಳನ್ನು ಕಂಡುಕೊಳ್ಳಬಹುದು. ಈ ಹಿನ್ನೆಲೆಯಲ್ಲಿ ಸಾಮಾಜಿಕ ಒಪ್ಪಂದಗಳು (social contract) ಸ್ವಯಂಕೃತವಾಗಿ ಜಾರಿಗೆ ಬರುತ್ತವೆ. ಪ್ರಜ್ಞೆ, ಆಲೋಚನೆ ಶಕ್ತಿ ಬೆಳೆಯುತ್ತಲೇ ಮಾನವ ನಾಗರಿಕನಾಗುತ್ತ ಹೋಗುತ್ತಾನೆ. ಇಂಥ ಸಂದರ್ಭದಲ್ಲಿ ಸಂಸ್ಕೃತಿ ತನ್ನಿಂದ ತಾನೇ ಒಡಮೂಡುತ್ತದೆ. ಇದನ್ನು ಸಂಸ್ಕೃತಿ ರೂಪಗೊಳ್ಳುವ ಪರಿಣಾಮಕಾರಿ ಹಂತ ಎಂದು ಗುರುತಿಸಬಹುದು. ಸಂಸ್ಕೃತಿಯು ಒಂದು ವ್ಯಕ್ತಿಯಿಂದ ಸಂಭವಿಸುವುದಿಲ್ಲ; ಅದು ಒಬ್ಬ ವ್ಯಕ್ತಿಯದೂ ಅಲ್ಲ. ಅದು ಸಂಘಟಿತ ಪ್ರಯತ್ನದಿಂದ ಮಾತ್ರ ರೂಪಗೊಳ್ಳುತ್ತದೆ. ಸಂಸ್ಕೃತಿ ಪ್ರಾರಂಭಗೊಳ್ಳುವ ತೀರಾ ಪ್ರಾಥಮಿಕ ಹಂತವೆಂದರೆ ಪ್ರಜ್ಞೆಯ ಉದಯದ ಸಂದರ್ಭ. ಮಾನವನಿಗೆ ಪ್ರಜ್ಞೆಯು

ಉದಯವಾಗುತ್ತಲೆ ಸಂಸ್ಕೃತಿ ಮೂರ್ತಗೊಳ್ಳುತ್ತದೆ. ಶಿಲಾಯುಗದ ಸಂದರ್ಭದಲ್ಲಿ ಮಾನವನ ಬದುಕು ಪ್ರಜ್ಞಾಪ್ರಾದುರ್ಭಾವದ ಒಂದು ಪ್ರಾಥಮಿಕ ಹಂತ. ಈ ಯುಗದಿಂದೀಚೆಗೆ ಜೀವನದಲ್ಲಿ ಎಲ್ಲವನ್ನೂ ರೂಢಿಸಿಕೊಳ್ಳಬಲ್ಲ ಮಾನವಸಂಸ್ಕೃತಿ ಎಂಬ ಅಮೂರ್ತ ಕಟ್ಟುಪಾಡುಗಳಿಗೆ ಸ್ವಯಂಕೃತನಾಗಿ ಒಳಪಡುತ್ತಾ ಹೋಗುತ್ತಾನೆ. ಮನುಷ್ಯನಲ್ಲಿ ಪ್ರಜ್ಞೆ ಮೂಡಿದ ತರುವಾಯದಲ್ಲೇ ಅವನು ಪ್ರಾಣಿಗಳಿಂದ ಬೇರ್ಪಟ್ಟಿರುವುದು ಸತ್ಯ.

ಶಿಲಾಯುಗದ ವಿವಿಧ ಕಾಲಘಟ್ಟಗಳಲ್ಲಿ ಮಾನವನ ಬದುಕು ದಿನದಿಂದ ದಿನಕ್ಕೆ ಸುಧಾರಿಸುತ್ತಾ ಹೋಗಿರುವುದನ್ನು ಕಾಣಬಹುದು. ಹಳೆಯ ಶಿಲಾಯುಗದಲ್ಲಿ ಬೇಟೆಗಾಗಿ ಕಾಡಿನಿಂದ ಕಾಡಿಗೆ ಅಲೆಯುತ್ತಿದ್ದ ಮಾನವ ಮಧ್ಯಶಿಲಾಯುಗದಲ್ಲಿ ನೆಲೆ ನಿಂತು ಜೀವಿಸಲು ಆರಂಭಿಸಿದನು. ನೆಲಸಲು ಆಹಾರ, ನೀರು, ವಸತಿಗೆ ಯೋಗ್ಯವಾದ ಲಭ್ಯವಿರುವ ಸ್ಥಳವನ್ನು ಆಯ್ದುಕೊಂಡನು. ಒಂದೆಡೆ ನೆಲೆನಿಂತು ಸಂಸ್ಕೃತಿ ರೂಪಗೊಳ್ಳಲು ಪೀಠಿಕೆ ಹಾಡಿದನು. ನೂತನ ಶಿಲಾಯುಗದಲ್ಲಿ ಸರಳ ವ್ಯವಸಾಯ ಪದ್ಧತಿಗಳನ್ನು ಅಳವಡಿಸಿಕೊಂಡನು. ಈ ಹಂತದಲ್ಲಿಯೇ ಬೆಂಕಿಯ ಅನ್ವೇಷಣೆ ಮಾನವನ ಜೀವನ ಕ್ರಮದಲ್ಲಿ ಮತ್ತೊಂದು ಪ್ರಮುಖ ಹೆಜ್ಜೆ. ಮಾತ್ರವಲ್ಲ ಬೆಂಕಿಯಿಲ್ಲದೆ ಜೀವಿಸಲು ಅಸಾಧ್ಯ ಎನ್ನುವಷ್ಟರಮಟ್ಟಿಗೆ ಅದರ ಅವಲಂಬನೆ ಉಂಟಾಯಿತು. ರಕ್ಷಣೆಗೆ, ಆಹಾರ ಪದಾರ್ಥಗಳನ್ನು ಬೇಯಿಸಿಕೊಂಡು ತಿನ್ನುವುದಕ್ಕೆ ಬೆಂಕಿಯ ಅಗತ್ಯ ಹೆಚ್ಚು ಉಪಯೋಗವಾಯಿತು.

ತಾಮ್ರಯುಗ ಮಾನವ ವಿಕಾಸದ ಮತ್ತೊಂದು ಸಂದರ್ಭ. ಕಲ್ಲುಗಳಿಗೆ ಬದಲಾಗಿ ಲೋಹಗಳನ್ನು ಬಳಸಿ ಇನ್ನೂ ಹೆಚ್ಚು ವ್ಯವಸ್ಥಿತ ಜೀವನ ಕ್ರಮಕ್ಕೆ ಈ ಯುಗವು ನಾಂದಿ ಹಾಡಿತು. ಈ ಹಂತದಲ್ಲಿ ಸಂಸ್ಕೃತಿಯ ಸಂಘಟನೆ ಒಂದು ಹಂತಕ್ಕೆ ಬಂದಿತು. ಕಬ್ಬಿಣದ ಶೋಧನೆ ಮಾನವನ ಜೀವಿತೇತಿಹಾಸದಲ್ಲೇ ಒಂದು ಮಹತ್ವದ ಮೈಲಿಗಲ್ಲು. ಬದುಕಿನ ಪ್ರತಿ ಹಂತದಲ್ಲೂ ಅದರ ಬಳಕೆ ರೂಢಿಯಾಯಿತು. ಕಬ್ಬಿಣದ ಬಳಕೆಯ ಹಿನ್ನೆಲೆಯಲ್ಲಿಯೇ ರಾಜಕೀಯ ಸಂಘಟನೆಯ ಪ್ರಯತ್ನಗಳು ಆರಂಭವಾದವು. ಆರ್ಥಿಕ ಚಟುವಟಿಕೆಗಳು ಮೂರ್ತ ರೂಪವನ್ನು ಪಡೆದುಕೊಂಡವು. ಸಾಮಾಜಿಕ

ಒಪ್ಪಂದ (social contract) ಗಳು ಏರ್ಪಡತೊಡಗಿದವು. ಇದನ್ನು ಸಂಸ್ಕೃತಿ ರೂಪಗೊಳ್ಳುವ ಒಂದು ಅರ್ಹ ಸನ್ನಿವೇಶವೆಂದು ಗುರುತಿಸಬಹುದು. ಕಬ್ಬಿಣದ ಅನ್ವೇಷಣೆಯಿಂದ ವ್ಯವಸ್ಥಿತ ಜೀವನದ ಹೊಸ ಹೊಸ ಆಯಾಮುಗಳ ಪ್ರಜ್ಞೆ ಬೆಳೆಯತೊಡಗಿತು. ಈ ಹಿನ್ನಲೆಯಲ್ಲಿಯೇ ರಾಜ್ಯ ರಾಷ್ಟ್ರಗಳು ಹುಟ್ಟಿಕೊಳ್ಳಲು ಕಾರಣವಾದವು. ಧರ್ಮಸಂಘಟನೆಯ ಪ್ರಯತ್ನಗಳು ಏರ್ಪಡತೊಡಗಿದವು. ಭಾಷೆಯ ಪ್ರಾದೇಶಿಕತೆಗಳು ಉದಯವಾಗತೊಡಗಿದವು.

ಕೊಪ್ಪಳ ಪ್ರದೇಶದ ಈ ಕಾಲಘಟ್ಟಗಳ ಸಂಸ್ಕೃತಿಯನ್ನು ನಿಖರವಾಗಿಯಲ್ಲದಿದ್ದರೂ ಸರಳರೇಖಾತ್ಮಕ ಪ್ರಯತ್ನದಿಂದ ರೂಪಿಸಿಕೊಳ್ಳಬಹುದು. ಕ್ರಿ.ಪೂ. ದಲ್ಲಿಯೇ ಅಸ್ತಿತ್ವದಲ್ಲಿರುವ ಒಂದು ಪಟ್ಟಣ ಈ ಎಲ್ಲಾ ಕಾಲಘಟ್ಟಗಳಲ್ಲಿಯೂ ಸಾಂಸ್ಕೃತಿಕ ಪ್ರಕ್ರಿಯೆಗಳನ್ನು ಇದು ಹೊಂದಿದೆ ಎಂಬ ಊಹಾತ್ಮಕ ಸತ್ಯವನ್ನು (hypothises) ಕಂಡುಕೊಳ್ಳಬಹುದು.

# ಅಧ್ಯಾಯ ೪

## ಕೊಪ್ಪಳದ ರಾಜಕೀಯ ಚರಿತೆ

ಅಧ್ಯಾಯ ೪

# ಕೊಪ್ಪಳದ ರಾಜಕೀಯ ಚರಿತೆ

ಬೃಹತ್ ಶಿಲಾಯುಗದ ಕೇಂದ್ರವಾಗಿ ಕೊಪ್ಪಳ ಪ್ರದೇಶವು ಕಂಡುಬಂದ ಹಿನ್ನೆಲೆಯಲ್ಲಿ ಸಾಮ್ರಾಜ್ಯಗಳು ನಿರ್ಮಾಣವಾಗುವ ಹಂತವನ್ನು ಕಾಣಬಹುದು. ಪ್ರಾಗೈತಿಹಾಸಿಕ ಕಾಲಘಟ್ಟಕ್ಕೆ ರಾಜಕೀಯ ರೂಪರೇಷೆಗಳು ಇರದಿರುವುದು ಗಮನಿಸುವ ಅಂಶ. ಪ್ರಾಗೈತಿಹಾಸಿಕ ಕಾಲದಿಂದೀಚೆಗಿನ ರಾಜಕೀಯ ಸಂಘಟನೆಗಳನ್ನು ಆಧಾರ ಸಮೇತವಾಗಿ ಹಿಡಿದಿಡಬಹುದು. ಒಂದು ಪ್ರದೇಶದ ಸಂಸ್ಕೃತಿಯ ಅಧ್ಯಯನ ಅಲ್ಲಿ ವಿಭಿನ್ನ ಕಾಲಘಟ್ಟಗಳಲ್ಲಿ ಜಾರಿಗೊಂಡ ರಾಜಕೀಯ ವ್ಯವಸ್ಥೆಗಳನ್ನು ಚರ್ಚಿಸಬೇಕಾಗುತ್ತದೆ. ಭಾರತದ ಚರಿತ್ರೆ ನಿರಾಧಾರವಾಗಿ ರೂಪಗೊಂಡಿದೆ ಎನ್ನುವ ಅಪವಾದವಿದೆ. ಇದರಾಚೆಗೆ ಹಲವು ಸತ್ಯಗಳನ್ನು ನಮ್ಮ ಚರಿತ್ರೆ ಕಟ್ಟಿಕೊಟ್ಟಿದೆ ಎನ್ನುವುದನ್ನು ಸಂಸ್ಕೃತಿಯ ನೆಲೆಗಳಿಂದ

ಹುಡುಕಿಕೊಂಡಾಗ ನಮಗೆ ತಿಳಿದುಬರುತ್ತದೆ. ಒಂದು ಪ್ರದೇಶ ರಾಜಕೀಯವಾಗಿ ಹಲವು ಏರುಪೇರುಗಳನ್ನು ಕಂಡಿರುತ್ತದೆ. ವಿಭಿನ್ನ ಆಳರಸರುಗಳಿಂದ ವಿಭಿನ್ನ ನೀತಿಗಳು ಆ ಪ್ರದೇಶದಲ್ಲಿ ಅನುಸರಿಸಲ್ಪಟ್ಟಿರುತ್ತವೆ. ಈ ವಿಭಿನ್ನ ನೀತಿ ನಿಯಮಾವಳಿಗಳಿಗೆ ಸಾಮಾಜಿಕ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ ಆಯಾಮಗಳು ಕಾರಣವಾಗುತ್ತವೆ. ಒಂದು ಪ್ರದೇಶದ ಸಂಸ್ಕೃತಿಯ ಚರಿತ್ರೆ ರೂಪಗೊಳ್ಳುವುದು ಬಹುತೇಕವಾಗಿ ಮೇಲಿನ ನಾಲ್ಕು ಅಂಶಗಳಿಂದ. ಸಂಸ್ಕೃತಿ ಅಧ್ಯಯನಗಳು ನಮ್ಮ ಕಾಲಘಟ್ಟಕ್ಕೆ ತಕ್ಕಂತೆ ಚರಿತ್ರೆಯನ್ನು ಪುನಾರಚಿಸುತ್ತವೆ. ನಮ್ಮ ಸಂದರ್ಭಕ್ಕೆ ತಕ್ಕಂತೆ ಚರಿತ್ರೆಯು ಸಂಸ್ಕೃತಿಯ ಅಧ್ಯಯನಗಳಲ್ಲಿ ಮರುಹುಟ್ಟು ಪಡೆದುಕೊಳ್ಳುತ್ತದೆ. ಒಂದು ಹಂತದಲ್ಲಿ ಚರಿತ್ರೆಯೆಂದರೆ ಗತಕಾಲದ ರಾಜಕೀಯ (past politics) ಎಂದೇ ವ್ಯಾಖ್ಯಾನಿಸುತ್ತಿದ್ದರು. ಆದರೆ ಈಗ ಆ ಪದ್ಧತಿ ತುಂಬಾ ಹಳತೆನಿಸಿದೆ. ಚರಿತ್ರೆಯೆಂದರೆ ಒಂದು ಕಾಲಘಟ್ಟದ ಸಾಂಸ್ಕೃತಿಕ ಚಲನೆ ಎಂದು ವ್ಯಾಖ್ಯಾನಿಸುವ ಪದ್ಧತಿ ಈಗ ರೂಢವಾಗಿದೆ. ಈ ಸಾಂಸ್ಕೃತಿಕ ಚಲನೆಯು ಮಾನವನ ಬಹುಮುಖೀ ಕಾರ್ಯ ಚಟುವಟಿಕೆಗಳನ್ನು ಒಳಗೊಳ್ಳುತ್ತದೆ. ಇಲ್ಲಿ ಮಾನವ ಸಂಬಂಧಿ ನಿಸರ್ಗದಲ್ಲಿ ನಡೆಯುವ ಎಲ್ಲ ಚಟುವಟಿಕೆಗಳು ಸಾಂಸ್ಕೃತಿಕ ಚಲನೆಯಲ್ಲಿ ಮಿಳಿತವಾಗುತ್ತವೆ. ಸಾಂಸ್ಕೃತಿಕ ಚಲನೆಯು ಚಾರಿತ್ರಿಕ ಆಕೃತಿಗಳನ್ನು ನಿರ್ಮಿಸಿಕೊಳ್ಳುವಲ್ಲಿ ಪೂರ್ಣಪ್ರಮಾಣದ ಪ್ರಭಾವವನ್ನು ಬೀರುತ್ತವೆ. ಕಾಲಗರ್ಭದಲ್ಲಿ ಆಗಿಹೋದ ಮತ್ತು ಉಂಟಾದ ಸಾಂಸ್ಕೃತಿಕ ಬದಲಾವಣೆ ಚರಿತ್ರೆ ಎನಿಸಿಕೊಂಡಿದೆ. ಮಾನವ ಜೀವನದ ವಾಸ್ತವ ಭೂಮಿಕೆಯ ಉದ್ದಕ್ಕೂ ಚಲನೆಯಿಂದ ಕೂಡಿಕೊಂಡಿರುವುದು ಚರಿತ್ರೆಯ ಗ್ರಹಿಕೆಯಿಂದ ಅರ್ಥವಾಗುತ್ತದೆ. ಚಲನೆಯು ನಿಲುಗಡೆಯನ್ನು ಹೊಂದದೆ ಎಂದೆಂದೂ ತನ್ನ ಜೀವಂತಿಕೆಯನ್ನು ತೋರಿಸುತ್ತದೆ. ಈ ಹಿನ್ನೆಲೆಯಲ್ಲಿ ಲೋಯಿಸ್ ಡ್ಯುಮೆಂಟ್ ಅವರು Essay on Social Anthropology ಕೃತಿಯಲ್ಲಿ ಚರಿತ್ರೆಯು ಒಂದು ಸಾಂಸ್ಕೃತಿಕ ಚಲನೆಯೆಂದು ಅಭಿಪ್ರಾಯಪಡುತ್ತಾರೆ.

ಸಂಸ್ಕೃತಿ ಅಧ್ಯಯನವು ಚರಿತ್ರೆಯ ಸಂಬಂಧವಾಗಿ ಸಂಭವಿಸಿರುವುದನ್ನು ನಾವು ಕಾಣುತ್ತೇವೆ. 'ಸಂಸ್ಕೃತಿ ಅಧ್ಯಯನವೆಂದರೆ ಮಾನವ ಜೀವಿತೇತಿಹಾಸಗಳ ಅಧ್ಯಯನ'ವೆಂದೇ

ಬಹುತೇಕ ಗ್ರಹಿಸಬೇಕು. ವರ್ತಮಾನದ ನಮ್ಮ ಸಂಸ್ಕೃತಿ ಮತ್ತು ನಮ್ಮ ಚರಿತ್ರೆಗಳು ಪ್ರಾಚೀನದಿಂದ ಅರ್ವಾಚೀನದವರೆಗೂ ವಿಭಿನ್ನ ರೂಪದಲ್ಲಿ ಮೂರ್ತಗೊಂಡಿದೆ. ಆ ಆಕೃತಿ ಏಕಘನಾಕೃತಿಯಾಗಿ ರೂಪಗೊಂಡಿಲ್ಲ. ಬದಲಾಗಿ ಭಿನ್ನ ನೆಲೆಗಳಲ್ಲಿ ಅಭಿವ್ಯಕ್ತಿಗೊಂಡಿದೆ. ಸಂಸ್ಕೃತಿ ಯ ಸಮಗ್ರ ಆಕೃತಿಗಳ ಒಟ್ಟು ಮೊತ್ತವು ಚರಿತ್ರೆಯಾಗಿ ಸಿದ್ಧವಾಗುತ್ತದೆ. **ಇತಿಹಾಸವೆಂದರೆ ಗತಕಾಲದ ಎಲ್ಲವೂ ಅಲ್ಲ. ಇತಿಹಾಸವೆಂದರೆ ಮಾನವ ಪ್ರಜ್ಞೆಯ ಪರಿಮಿತಿಯಲ್ಲಿ ನಿಲುಕಿದ ಸಮಷ್ಠಿ** ಎಂಬ ವ್ಯಾಖ್ಯಾನ ಸಿದ್ಧವಾಗುತ್ತದೆ. ಮಾನವ ತಾನು ಪ್ರಜ್ಞಾನೇತ್ರದಿಂದ ಕಂಡುಕೊಂಡ ಗತವಸ್ತು ಸತ್ಯಗಳು ಇತಿಹಾಸದ ಪರಿಧಿಯಲ್ಲಿ ಸೇರಿಕೊಳ್ಳುತ್ತವೆ. ಗತವಸ್ತು ಸತ್ಯಗಳನ್ನು ಪ್ರಕೃತ ಅಧ್ಯಯನದಲ್ಲಿ ಆಕರಮುಖಿಯಾಗಿ ಹುಡುಕಲಾಗಿದೆ. ವಸ್ತುಸತ್ಯದ ಹುಡುಕಾಟದ ದಾರಿ ಇಂದಿನ ಜೀವಂತ ಬದುಕಿನಲ್ಲಿ ಆ ಪ್ರದೇಶದಲ್ಲಿ ನೆಲೆ ನಿಂತ ಆಚರಣೆ ಭಾಷೆ ಆಗಿಹೋದ ಸಾಮ್ರಾಜ್ಯಗಳು ಇತ್ಯಾದಿಗಳಲ್ಲಿ ಕೇಂದ್ರೀಕೃತವಾಗಿವೆ. ಈ ವಿಷಯಗಳು ನಮ್ಮ ಇಂದಿನ ಆ ಪ್ರದೇಶದ ಮಾನವನ ಪ್ರತಿ ಚಲನವಲನದಲ್ಲೂ ಕಂಡುಬರುತ್ತದೆ. ಕೊಪ್ಪಳದ ಸಂಸ್ಕೃತಿಯ ಸಧ್ಯತನವನ್ನು ಅರ್ಥೈಸಿಕೊಳ್ಳುವ ಪ್ರಯತ್ನದಲ್ಲಿ ಆ ಪ್ರದೇಶದ ಚರಿತ್ರೆಯನ್ನು ಕಟ್ಟಿಕೊಡಬಹುದು. ಚಾರಿತ್ರಿಕ ಅಂಶಗಳಲ್ಲಿ ಗತಕಾಲದ ರಾಜಕೀಯ ವ್ಯವಸ್ಥೆಗಳು ಪ್ರಧಾನ ಧಾರೆಯಲ್ಲಿ ಚರ್ಚೆಯಾಗುತ್ತವೆ. ಅಧೀನ ಧಾರೆಯಲ್ಲಿ ಭಾಷೆ ಧರ್ಮ, ಸಾಮಾಜಿಕ ವ್ಯವಸ್ಥೆ, ಆರ್ಥಿಕ ಚಟುವಟಿಕೆ, ಶೈಕ್ಷಣಿಕ ಸ್ಥಿತಿಗತಿಗಳು, ಲಲಿತಕಲಾ ಸಂಗತಿಗಳು ಮತ್ತು ಚರಿತ್ರೆ ಸಂಬಂಧಿಯಾದ ಕಾರ್ಯಚಟುವಟಿಕೆಗಳೊಳಗೆ ಸೇರಿಕೊಳ್ಳುತ್ತವೆ. ಅದೇನೇ ಇದ್ದರೂ ಚಾರಿತ್ರಿಕ ಸ್ವರೂಪದ ಒಟ್ಟಭಿಪ್ರಾಯ ಸಂಸ್ಕೃತಿ -ಆಕೃತಿಗಳ ನಡುವೆ ಹೆಣೆದುಕೊಂಡಿರುತ್ತವೆ. ಅದರ ರಾಜಕೀಯ ಆಯಾಮವನ್ನು ಗುರುತಿಸಿ ಆ ಪ್ರದೇಶದ ಸಂಸ್ಕೃತಿಯ ವಿವರಗಳನ್ನು ಪಡೆದುಕೊಳ್ಳುವ ಪ್ರಯತ್ನ ಮಾಡಬಹುದು.

ಪ್ರಕೃತ ಕೊಪ್ಪಳ ಪ್ರದೇಶದ ಸಂಸ್ಕೃತಿಯ ಅವಯವಗಳನ್ನು ನೋಡುವ ಉತ್ಸಾಹದಿಂದ ಸಮೀಕ್ಷೆಯ ರೂಪದಲ್ಲಿ ರಾಜಕೀಯವಾಗಿ ಆ ಪ್ರದೇಶದ ಮಹತ್ವವನ್ನು ಗುರುತಿಸುವುದು ಈ

ಸಂದರ್ಭದಲ್ಲಿ ಅಗತ್ಯವೆನಿಸುತ್ತದೆ. ಭಾರತದ ಭೂಭಾಗಗಳನ್ನು ವಿಭಿನ್ನ ಅರಸುಮನೆತನಗಳು ಆಳಿವೆ. ದಕ್ಷಿಣೋತ್ತರದುದ್ದಕ್ಕೂ ಏಕಮನೆತನದಿಂದ ಆಳಲ್ಪಟ್ಟಿದೆ. ಆದರೆ ಕೊಪ್ಪಳ ಪ್ರದೇಶವು ಈ ಎರಡೂ ಆಳಿಕೆಗಳನ್ನು ಕಂಡಿದೆ. ಪ್ರಾಗೈತಿಹಾಸಿಕ ಕಾಲದಲ್ಲಿ ರಾಜಕೀಯ ಸಂಘಟನೆ ಇದ್ದಿತೆನ್ನಲಿಕ್ಕೆ ಯಾವ ತೆರನಾದ ಆಧಾರಗಳು ಲಭ್ಯವಾಗಿಲ್ಲ. ಕೊಪ್ಪಳ ಪ್ರದೇಶದಲ್ಲೂ ಈ ಮಾತು ಅನ್ವಯವಾಗುತ್ತದೆ. ಏಕೆಂದರೆ ಪ್ರಾಗೈತಿಹಾಸಿಕ ಕಾಲದಲ್ಲಿ ರಾಜಕೀಯ ಸಂಘಟನೆ ಇತ್ತು ಎನ್ನುವುದಕ್ಕೆ ಯಾವ ಆಧಾರಗಳೂ ಇಲ್ಲಿ ಲಭ್ಯವಿಲ್ಲ. ಆದರೆ ನೇರವಾಗಿ ನಾವು ಮೌರ್ಯರ ಕಾಲದಿಂದ ಕೊಪ್ಪಳ ಪ್ರದೇಶವನ್ನು ರಾಜಕೀಯ ವ್ಯವಸ್ಥೆಗೆ ಒಳಪಟ್ಟಿದೆ ಎಂದು ಹೇಳಲಿಕ್ಕಾಗದು. ದೊರೆತ ಆಧಾರಗಳ ಮೇಲೆ ಚರ್ಚಿಸುವುದಾದರೆ ಮೌರ್ಯರ ಕಾಲದಿಂದಲೇ ಅಲ್ಲಿ ರಾಜಕೀಯ ವ್ಯವಸ್ಥೆ ರೂಪಗೊಂಡಿತ್ತು ಎನ್ನುವುದರಲ್ಲಿ ಎರಡು ಮಾತಿಲ್ಲ. ಏಕೆಂದರೆ ಮೌರ್ಯ ಸಾಮ್ರಾಜ್ಯದ ರಾಜಕೀಯ ಭೌಗೋಳಿಕ ಸೀಮೆಯು ದಕ್ಷಿಣ ಕರ್ನಾಟಕದವರೆಗೆ ಹಬ್ಬಿತ್ತು ಎನ್ನುವುದು ನಿರ್ವಿವಾದ.

## ವಿಭಿನ್ನ ಕಾಲಘಟ್ಟದಲ್ಲಿ ಕೊಪ್ಪಳದ ರಾಜಕೀಯ ವ್ಯವಸ್ಥೆ

### ೪. ೧. ಮೌರ್ಯರು

ಮೌರ್ಯರ ಕಾಲಘಟ್ಟದಲ್ಲಿ ಕೊಪ್ಪಳ ಪ್ರದೇಶವು ಒಂದು ವಾಣಿಜ್ಯ ಕೇಂದ್ರವಾಗಿ , ಧಾರ್ಮಿಕ ಕೇಂದ್ರವಾಗಿ ರಾಜಕೀಯ ವ್ಯವಸ್ಥೆಯ ಮೇಲೆ ಪ್ರಭಾವ ಬೀರಿತ್ತು ಎನ್ನುವುದಕ್ಕೆ ಸಾಕ್ಷಾಧಾರಗಳು ನಮ್ಮ ಮುಂದಿವೆ. ಅವುಗಳನ್ನಿಟ್ಟುಕೊಂಡು ಮೌರ್ಯ ಸಾಮ್ರಾಜ್ಯದ ಮೇಲೆ ಕೊಪ್ಪಳ ಪ್ರದೇಶ ಎಷ್ಟರಮಟ್ಟಿಗೆ ಹಿಡಿತವನ್ನು ಸಾಧಿಸಿದ್ದಿರಬಹುದು ಎಂಬುದನ್ನು ಚರ್ಚಿಸಬಹುದು. ಅಶೋಕನ ಶಿಲಾಶಾಸನಗಳು ಕೊಪ್ಪಳ ಪ್ರದೇಶದಲ್ಲಿ ದೊರೆತ ಹಿನ್ನೆಲೆಯಲ್ಲಿ ರಾಜಕೀಯವಾಗಿ ಹಾಗೆಯೇ ಧಾರ್ಮಿಕವಾಗಿ ಈ ಪ್ರದೇಶದ ಮಹತ್ವವನ್ನು ಹೇಳಬಹುದಾಗಿದೆ. ಮೌರ್ಯರ ಸಾಮ್ರಾಜ್ಯವು ಕೊಪ್ಪಳ ಪ್ರದೇಶಕ್ಕೆ ಇರುವ ಉತ್ತರ ಭಾಗದಲ್ಲಿ ಹೆಚ್ಚು ವಿಸ್ತಾರವಾಗಿತ್ತು. ರಾಜಧಾನಿ ಪಾಟಲೀಪುತ್ರವು ಕೊಪ್ಪಳ

ಪ್ರದೇಶದಿಂದ ಅದೆಷ್ಟೋ ಸಹಸ್ರ ಮೈಲಿಗಳ ದೂರದಲ್ಲಿದೆ. ಪಾಟಲೀಪುತ್ರದಿಂದ ಕೊಪ್ಪಳ ಪ್ರದೇಶಕ್ಕೆ ಸಂಪರ್ಕ ಏರ್ಪಟ್ಟಿರುವುದು ಒಂದು ಸೋಜಿಗದ ಸಂಗತಿಯಾಗಿದೆ. ಅಶೋಕನ ಸಾಮ್ರಾಜ್ಯ ದಕ್ಷಿಣದ ಜಟಂಗ ರಾಮೇಶ್ವರದವರೆಗೆ ಹಬ್ಬಿತ್ತಾದರೂ ಮಸ್ಕಿ ಗವಿಮಠ, ಪಾಲ್ಕಿಗುಂಡು, ಸಿದ್ದಾಪುರ ಮುಂತಾದ ಕರ್ನಾಟಕದ ಪ್ರದೇಶಗಳನ್ನು ಅದು ಒಳಗೊಂಡಿತ್ತು. ಶಾಸನಗಳು ಎಂದರೆ ಕೇವಲ ಕಲ್ಲು ಬರಹಗಳಲ್ಲ, ಅವು ರಾಜಮುದ್ರೆಯನ್ನು ಹೊಂದಿದ ರಾಜನ ಸುಗ್ರೀವಾಜ್ಞೆಗಳೇ ಸರಿ. ಈ ಹಿನ್ನೆಲೆಯಲ್ಲಿ ವಿವಿಧ ವಿಷಯಕ್ಕೆ ಸಂಬಂಧಿಸಿದಂತೆ ರಾಜಾಜ್ಞೆ ಕರ್ನಾಟಕದ ವಿಭಿನ್ನ ಜಾಗಗಲ್ಲಿ ದೊರೆತಿವೆ. ಆ ರಾಜಾಜ್ಞೆಗಳನ್ನು (ಶಿಲಾಶಾಸನ) ಪುರಾತತ್ವ ಇಲಾಖೆಯವರು ಶೋಧಿಸಿ ಸಂಪಾದಿಸಿದ್ದಾರೆ. ಶಿಲಾಶಾಸನಗಳನ್ನು ನೆಡುವಷ್ಟು ಮಹತ್ವದ ಪಟ್ಟಣಗಳು ಇವಾಗಿದ್ದವೇ ಎಂಬುದು ಊಹೆಗೆ ನಿಲುಕದ ವಿಚಾರ. ಏಕೆಂದರೆ ಕೊಪ್ಪಳವನ್ನು ಬಿಟ್ಟರೆ ಕರ್ನಾಟಕದಲ್ಲಿ ಅಶೋಕನ ಶಿಲಾಶಾಸನಗಳಿರುವ ಉಳಿದಾವ ಊರುಗಳು ಪಟ್ಟಣದ ಮಟ್ಟಿಗಾದರೂ ಬೆಳೆದಿಲ್ಲ. ಮಸ್ಕಿಯ ಶಾಸನವು ಅಶೋಕನ ಶಾಸನಗಳಲ್ಲಿ ಅತ್ಯಂತ ಪ್ರಮುಖವಾದದ್ದು. ಏಕೆಂದರೆ 'ದೇವಾನಾಂಪ್ರಿಯ' ಬಿರುದಿನ ಗುಟ್ಟನ್ನು ರಟ್ಟು ಮಾಡಿದ್ದು ಈ ಶಿಲಾಶಾಸನ. ಈ ಶಿಲಾಶಾಸನ ದೊರೆಯದೇ ಇದ್ದರೆ ಈ ವರೆಗೂ ದೇವಾನಾಂಪ್ರಿಯ ಯಾರು ಎನ್ನುವುದು ಪ್ರಶ್ನೆಯಾಗಿಯೇ ಉಳಿಯುತ್ತಿತ್ತು. ಈ ಹಿನ್ನೆಲೆಯಲ್ಲಿ ಕರ್ನಾಟಕದಲ್ಲೆ ನಿಜವಾದ ಪಾಟಲೀಪುತ್ರ ಇತ್ತು ಎಂದು ಭಾವಿಸುವಷ್ಟು ಸಾಂಸ್ಕೃತಿಕ ಘನವಂತಿಕೆಯನ್ನು ಉಳಿಸಿಕೊಂಡಿವೆ. ಕೊಪ್ಪಳದಲ್ಲಿ ಅಶೋಕನ ಎರಡು ಶಿಲಾಶಾಸನಗಳು ದೊರೆತಿವೆ. ಕೊಪ್ಪಳ ಎರಡು ಶಿಲಾಶಾಸನಗಳನ್ನು ನೆಡಿಸಿಕೊಳ್ಳುವಷ್ಟು ರಾಜಕೀಯವಾದ ಅಥವಾ ಧಾರ್ಮಿಕವಾದ ಮಹತ್ವವನ್ನು ಹೊಂದಿತ್ತೇ ಎಂಬುದು ಕುತೂಹಲಕಾರಿಯಾದ ಅಂಶವಾಗಿದೆ.

ಕೊಪ್ಪಳ ಪ್ರದೇಶವು ಕೇವಲ ರಾಜಕೀಯವಾಗಿ ಬೆಳೆಯದೆ ದಕ್ಷಿಣ ಭಾರತದಲ್ಲಿ ಅತ್ಯಂತ ದೊಡ್ಡ ವಾಣಿಜ್ಯ ಕೇಂದ್ರವಾಗಿತ್ತು ಎಂದು ಊಹಿಸಲು ಅವಕಾಶವಿದೆ. ಆ ಕಾರಣದಿಂದಲೇ ಕೊಪ್ಪಳ ಪ್ರದೇಶ ಮೌರ್ಯರ ಸಾಮ್ರಾಜ್ಯದಲ್ಲಿ ಮಹತ್ವದ ರಾಜಕೀಯ ಸ್ಥಾನಮಾನಗಳನ್ನು ಹೊಂದಿತ್ತು ಎಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಅಶೋಕನ ಸಾಮ್ರಾಜ್ಯವು ಪೋಲಿಸ್ ಸಾಮ್ರಾಜ್ಯವಾಗಿರದೆ

ಅದೊಂದು ಧರ್ಮಸಾಮ್ರಾಜ್ಯವಾಗಿತ್ತು. ಕಳಿಂಗ ಯುದ್ಧದ ಐತಿಹ್ಯವನ್ನು ಬದಿಗಿಟ್ಟು ಅವನ ಸಾಮ್ರಾಜ್ಯವನ್ನು ಊಹಿಸಿಕೊಳ್ಳುವುದಾದರೆ ನಿಜವಾಗಿ ಅಶೋಕನ ಸಾಮ್ರಾಜ್ಯ ಧರ್ಮಸಾಮ್ರಾಜ್ಯವಾಗಿತ್ತೇ ಎಂಬುದು ಚರ್ಚಾಸ್ಪದವಾಗಿದೆ. ಏಕೆಂದರೆ ಅಶೋಕನಿಗಿಂತ ಮೊದಲು ಅಶೋಕನಿಗಿಂತ ಪ್ರಬಲವಾದ ಮತ್ತು ಒಂದು ಸಾಮ್ರಾಜ್ಯವನ್ನು ಕಟ್ಟಿದ ವ್ಯಕ್ತಿತ್ವ, ಆ ಸಾಮ್ರಾಜ್ಯವನ್ನು ಆಳಿದೆ. ಚಾಣಕ್ಯನ ಧರ್ಮನೀತಿ ಮತ್ತು ದಂಡಶಾಸ್ತ್ರಗಳ ಹಿನ್ನೆಲೆಯಲ್ಲಿ ರಾಜ್ಯಭಾರ ನಡೆಯುತ್ತಿತ್ತಾದರೂ ಪ್ರಜಾಸಮೂಹ ಧಾರ್ಮಿಕ ಜೀವನವನ್ನು ಸ್ವತಂತ್ರವಾಗಿ ಕಳೆಯುತ್ತಿದ್ದರೇ ಅಥವಾ ಹಿಂದೂಧರ್ಮ ತನ್ನ ಕಟ್ಟುಪಾಡುಗಳೊಂದಿಗೆ ಜನತೆಯೊಡನೆ ಮಿಳಿತವಾಗಿತ್ತೇ ಎನ್ನುವುದು ವಿಚಾರಾರ್ಹ. ಏಕೆಂದರೆ ಚಾಣಕ್ಯನು ಧರ್ಮಶಾಸ್ತ್ರ ಮತ್ತು ದಂಡನೀತಿಯನ್ನು ಮನುವಿನ ಮತ್ತು ಅದರಾಚೆಗಿನ ಉಪನಿಷತ್ತುಗಳನ್ನು ಆಧರಿಸಿ ರಚಿಸಿದನು. ಸರ್ಕಾರದ ಕಾರ್ಯಚಟುವಟಿಕೆಗಳು ಸಂಪೂರ್ಣವಾಗಿ ಚಾಣಕ್ಯನ ದಂಡನೀತಿಯನ್ನು ಆಧರಿಸಿಕೊಂಡು ನಡೆಯುತ್ತಿದ್ದವು. ಈ ಕಟ್ಟುಪಾಡುಗಳೇ ಅಶೋಕನು ಬೌದ್ಧ ಧರ್ಮದ ಅನುಯಾಯಿಯಾಗಲು ಕಾರಣವಾಗಿರಬಹುದು. ಕಳಿಂಗ ಯುದ್ಧದಲ್ಲಿ ಕಂಡುಂಡ ನೋವುಗಳಿಂದ ಬೇಸತ್ತ ಅಶೋಕ ಬೌದ್ಧ ಧರ್ಮಕ್ಕೆ ತನ್ನ ಮನ್ನಣೆಯನ್ನು ವ್ಯಕ್ತಪಡಿಸಿದ ಎನ್ನುವುದು ಒಂದು ಬೀಸು ಹೇಳಿಕೆ. ಹಿಂದೂ ಧರ್ಮದಲ್ಲಿ ಇದ್ದ ಕಟ್ಟುಪಾಡುಗಳಿಂದ ವಿಮುಖನಾದ ಅಶೋಕ ಬೌದ್ಧ ಧರ್ಮವನ್ನು ಸ್ವೀಕರಿಸಿ ಅದನ್ನು ಯಥಾವತ್ ಪ್ರಸಾರಮಾಡುವ ಯೋಗ್ಯ ಕಾರ್ಯಕ್ರಮಕ್ಕೆ ರೂಪರೇಷೆಗಳನ್ನು ತಯಾರಿಸಿದ. ಅವನ ಈ ಧರ್ಮಕಾರಣ ರಾಜಕಾರಣಕ್ಕಿಂತ ಹಿರಿದು. ಈ ಅಂಶವು ಅಶೋಕನ ಜೀವಿತದಲ್ಲಿ ಬೌದ್ಧ ಧರ್ಮ ಪ್ರಸಾರಗೊಳ್ಳಲು ಪ್ರಮುಖ ಕಾರಣವಾಯಿತು. ಈ ಕಾರಣದಿಂದ ಚಂದ್ರಗುಪ್ತ ಮೌರ್ಯ ಸಾಧಿಸದೇ ಇದ್ದ ರಾಜಕೀಯ ವಿಸ್ತರಣೆಗಿಂತ ಅಶೋಕನ ಧರ್ಮವಿಸ್ತರಣೆ ಹೆಚ್ಚು ವ್ಯಾಪ್ತಿಯನ್ನು ಪಡೆದುಕೊಂಡಿತು. ಚಂದ್ರಗುಪ್ತ ಮೌರ್ಯನ ಅತಿಕ್ರಮಣ ನೀತಿ ಮತ್ತು ಆಡಳಿತದಲ್ಲಿ ನೆಲೆಗೊಂಡಿದ್ದ ಕಾನೂನುಗಳ ಶಿಸ್ತುಗಳು ಮುಖ್ಯವಾಗಿ ಅವನ ಸಾಮ್ರಾಜ್ಯವನ್ನು ಸೀಮಿತಗೊಳಿಸಿದವು. ಏಕೆಂದರೆ ಕಾನೂನು ಮತ್ತು ಸುವ್ಯವಸ್ಥೆ ಹೆಚ್ಚು ಸಮರ್ಪಕವಾಗಿ

ಜಾರಿಗೊಳಿಸಲು ದೊಡ್ಡ ಸಾಮ್ರಾಜ್ಯದಲ್ಲಿ ಕಾರ್ಯನಿರ್ವಹಿಸಲು ಸಾಧ್ಯವಾಗಿರಲಿಕ್ಕಿಲ್ಲ. ಈ ಹಿನ್ನೆಲೆಯಲ್ಲಿ ಚಂದ್ರಗುಪ್ತ ಮೌರ್ಯನ ಸಾಮ್ರಾಜ್ಯವು ಅಶೋಕನ ಸಾಮ್ರಾಜ್ಯಕ್ಕಿಂತ ಕಿರಿದಾಗಿತ್ತು.

ಅದೇನೇ ಇದ್ದರೂ ಅಶೋಕನು ಭಾರತದಲ್ಲಿ ಧರ್ಮಸಾಮ್ರಾಜ್ಯವನ್ನು ಸ್ಥಾಪಿಸುವಲ್ಲಿ ಯಶಸ್ವಿಯಾದನು. ದಕ್ಷಿಣೋತ್ತರ ಭಾರತದಲ್ಲಿ ಅವನ ಸಾಮ್ರಾಜ್ಯ ನೆಲೆಗೊಂಡಿತ್ತು. ಅದು ಸಹಸ್ರ ಮೈಲುಗಳ ವ್ಯಾಪ್ತಿಯನ್ನು ಹೊಂದಿತ್ತು. ಅವನು ಕಾನೂನು ಸುವ್ಯವಸ್ಥೆಯ ಜವಾಬ್ದಾರಿಯನ್ನು ಸಂಪೂರ್ಣವಾಗಿ ಧರ್ಮದ ಚೌಕಟ್ಟಿನಲ್ಲಿರಿಸಿದನು. ಭಾರತದುದ್ದಕ್ಕೂ ಜನರ ಮನದಲ್ಲಿ ಧರ್ಮದ ಬೀಜ ಬಿತ್ತಿ ಕಾನೂನು ಸುವ್ಯವಸ್ಥೆಯನ್ನು ಕಾಪಾಡುವ ನಿಟ್ಟಿನಲ್ಲಿ ಯಶಸ್ವಿಯಾದ ಮೊದಲ ಸಾಮ್ರಾಜ್ಯಶಾಹಿ ಎಂದರೆ ಅಶೋಕ. ಅದು ಅವನ ಆಚರಿಸುತ್ತಿದ್ದ ಬೌದ್ಧ ಧರ್ಮದ ವಿಶಾಲ ವ್ಯಾಪ್ತಿಯಿಂದ ಸಾಧ್ಯವಾಯಿತು ಎನ್ನುವುದಂತೂ ಸತ್ಯ. ಈ ಹಿನ್ನೆಲೆಯಲ್ಲಿ ಕೊಪ್ಪಳ ಪ್ರದೇಶ ಒಂದು ಧರ್ಮದ ಸಮಗ್ರ ಕೇಂದ್ರವಾಗಿ ಮಾರ್ಪಾಡಿಸುವ ತವಕ ಅಶೋಕನಿಗಿದ್ದಿರಬೇಕು. ಆದುದರಿಂದಲೇ ಕೇವಲ ೪-೫ ಮೈಲು ವ್ಯಾಪ್ತಿಯಲ್ಲಿ ಎರಡು ಶಿಲಾಶಾಸನಗಳನ್ನು ನೆಡಿಸಿದನು. ಈ ಶಿಲಾಶಾಸನಗಳ ಪೂರ್ಣ ಪಾಠವನ್ನು ಹೇಳುವುದರ ಮೂಲಕ ಈ ಮೇಲಿನ ಚರ್ಚೆಯನ್ನು ಮತ್ತಷ್ಟು ಪುಷ್ಟೀಕರಿಸಬಹುದು.

೧. ದೇವಾನಂ ಪಿಯೆ ಆಹ ಸಾತಿರೇಕಾನಿ ಅಡಿತಿಯಾನಿ ವಸಾಣಿ ಯಂ ಸು ಮಿ ಉಪಾ

೨. ಸಕೆ ಣೊ ಚು ಖೊ ಬಾಢಂ ಪಕಂತೆ ಸಂವಛರೆ ಸಾತಿರೇಕೆಯಂ ಮೆ ಸಂಘೆ ಉಪೇತಿ ಬಾಢಂ

೩. ಚ ಮೆ ಪಕಂತೆ ಸೆ ಇಮಾಯಂ ವೆಲಾಯಂ ಜಂಬೂದೀಪಸಿ ಅಮಿಸಾ ದೇವಾ ಸಮಾಣಾ

೪. ಮಾಣಸೇಪಿ ಹಿದಾಣಿ ಮಿಸಾ ಕಟಾ ಪಕಮಸ ಏಸ ಫಲೇ ಣೊ ಹಿ ಇಯಂ ಮಹತಣೇ ವ ಚ

೫. ಕಿಯೆ ಪಾಪೋತವೆ ಖುಡಕೇನಪಿ ಪಕಮಮಿನೇನ ವಿಪುಲೆಪಿಚ ಕಿ ಯೆ ಸ್ವಗೆ ಆರಾಧಯಿತವೆ ಎ.

೬. ತಾಯ ಚ ಅಠಾಯ ಇಯಂ ಸಾವಣೆ ಖುಡಕಾಚ ಉಡಾರಾಚ ಪಕಮಂತು

ತಿ ಅಂತಾಪಿಚ ಜಾಣಂತೂ ಚಿರಠಿ

೭. ತಿಕೇಚ ಪಕಮೆ ಹೊ ತು ಇಯಂ ಚ ಅಠೆ ವಡಸಿತಿ ವಿಪಲೇಚದಿಯ

೮. ಢಿಯಂ ಪಿಚ ವಢಿಸಿತೀತಿ.

ದೇವತೆಗಳ ಪ್ರೀತಿಗೆ ಪಾತ್ರನಾದವನು ಹೇಳುತ್ತಾನೆ. ಈಗ ಎರಡೂವರೆ ವರುಷಗಳ ಕಾಲ ನಾನು ಉಪಾಸಕನಾಗಿದ್ದೇನೆ. ಆದರೆ ನಾನು ನಿಜವಾಗಿಯೂ ಆಸಕ್ತಿಯಿಂದ ಪ್ರವರ್ತಕನಾಗಿರಲಿಲ್ಲ. ಈಗ ಒಂದೂವರೆ ವರುಷದಿಂದೀಚೆಗೆ ಸಂಘಕ್ಕೆ ಸೇರಿರುತ್ತೇನೆ ಮತ್ತು ಆಸಕ್ತಿಯಿಂದ ಇದರಲ್ಲಿ ಪ್ರವರ್ತಕನಾಗಿದ್ದೇನೆ. ಹೀಗೆ ಈ ಸಮಯದಲ್ಲಿ ಜಂಬೂದ್ವೀಪದಲ್ಲಿ ದೇವರ ಮಾನವರ ಸಂಗಮ ಸಾಧ್ಯವಾಗುತ್ತಿರಲಿಲ್ಲ. ಈಗ ಈ ಸಂಗಮಸಾಧ್ಯವಾಗಿದೆ. ಇದು ಆಸಕ್ತಿಯ ಫಲ. ಕೇವಲ ದೊಡ್ಡವರೇ ಇದನ್ನು ಸಾಧಿಸುತ್ತಾರೆ ಎಂದಲ್ಲ, ಪರ್ಯಾಯವಾಗಿ ತೀರ ಬಡವನೂ ಸಹ ಆಸಕ್ತಿಯಿಂದ ಪ್ರವರ್ತಿಸಿದರೆ ಘನ ಸ್ವರ್ಗವನ್ನು ಪಡೆಯುತ್ತಾನೆ. ಈ ವಿಷಯಕ್ಕಾಗಿ ಈ ಘೋಷಣೆ. ತೀರ ಕೆಳಗಿನವರು ಅರಿಯಲಿ. ಆಸಕ್ತಿಯಿಂದ, ಉತ್ಸಾಹದಿಂದ ಕೂಡಿದ ಕ್ರಿಯೆಗಳು ಸದಾ ಉಳಿಯುತ್ತಿವೆ. ಇದು ಬೆಳೆಯಲಿ, ದೂರ ದೂರದವರೆಗೂ ಬೆಳೆಯಲಿ ಬೆಳೆಯಲಿ ಮತ್ತೆ ಮತ್ತೆ ಬೆಳೆಯಲಿ.

ಸಂದೇಶ

ಒಳ್ಳೆ ಫಲವನ್ನು, ಸುಖವನ್ನು ಪಡೆಯುವುದು ಕೇವಲ ಬಲ್ಲವರು ಮಾತ್ರವಲ್ಲದೆ, ತೀರ ಸಾಮಾನ್ಯನೂ ಹಿಂದುಳಿದವನೂ, ಬಡವನೂ ಕೂಡ ಪ್ರಯತ್ನಶೀಲನಾದರೆ ಸ್ವರ್ಗ ಸುಖವನ್ನು ಪಡೆಯಬಹುದು. ಆಜ್ಞಾನಿಯೆ ಆಗಲಿ, ತಿಳುವಳಿಕಸ್ಥನಾಗಲಿ ಉತ್ತಮ ಪ್ರಯತ್ನಶೀಲನಾಗಬೇಕು ಮತ್ತು ಬಹಳ ಕಾಲದವರೆಗೂ ಅವರಿಂದ ಇಂಥ ಪ್ರಗತಿಪರ ಪ್ರಯತ್ನ ನಡೆದುಕೊಂಡು ಬರಬೇಕೆಂಬುದೇ ಈ ಶಾಸನದಲ್ಲಿಯ ಘೋಷಣೆಯ ಉದ್ದೇಶ.

ಶಾಸನದ ಈ ಪೂರ್ಣಪಾಠವನ್ನು ಗಮನಿಸಿದಾಗ ಮಾನವನ ಮನಸ್ಸಿನಲ್ಲಿ ಮಾನವೀಯತೆ ಮೊಳೆತು ವಿಷಯವಸ್ತುಗಳ ಕಡೆಗೆ ನಿರಾಸಕ್ತರಾಗಿ ಸಾತ್ವಿಕ ಜೀವನವನ್ನು ನಡೆಸುವಲ್ಲಿ

ಪ್ರಯತ್ನಶೀಲರಾಗಬೇಕು ಎಂಬ ಮನವುಟ್ಟುವ ಕೋರಿಕೆ ಇದೆ. ಇದು ಯಾವ ಪೋಲೀಸ್ ಕಾನೂನುಗಳಿಗಿಂತ ಹೆಚ್ಚು ಪರಿಣಾಮಕಾರಿ ಎಂಬುದನ್ನು ಅರಿಯಬಹುದು. ಎಷ್ಟೋ ಸಾಮಾಜಿಕ ವಿಸಂಗತಿಗಳು ಕಾನೂನಿಂದ ನಿಯಂತ್ರಣಗೊಳ್ಳದ ಸಂಗತಿಯನ್ನು ಅಶೋಕ ಗಮನಿಸಿರಬೇಕು. ಸಾಮ್ರಾಜ್ಯದಲ್ಲಿ ಕಾನೂನು ಸುವ್ಯವಸ್ಥೆಯನ್ನು ಕಾಪಾಡಲು ಮಿಲಿಟರಿಗಿಂತ ಧರ್ಮವು ಹೆಚ್ಚು ಸಮರ್ಪಕವಾಗಿ ಕಾರ್ಯನಿರ್ವಹಿಸಬಲ್ಲದು ಎಂಬ ಪೂರ್ಣ ತಿಳುವಳಿಕೆ ಅಶೋಕನ ಕಳಕಳಿಯಲ್ಲಿದೆ. ಆ ಕಾರಣದಿಂದ ಅಶೋಕ ಸಾಮ್ರಾಜ್ಯ ವಿಸ್ತಾರ ಮಾಡಿದ್ದು ಧರ್ಮಕಾರಣದ ಹಿನ್ನೆಲೆಯಲ್ಲಿಯೇ ಹೊರತು ಆಕ್ರಮಣಕಾರಿ ನೀತಿಗಳಿಂದಲ್ಲ.

ಈ ಶಿಲಾಶಾಸನವು ಕೊಪ್ಪಳದ ಗವಿಮಠಕ್ಕೆ ಹೊಂದಿಕೊಂಡಿರುವ ಗುಡ್ಡದಲ್ಲಿದೆ. ಎರಡು ಹೆಬ್ಬಂಡೆಗಳ ನಡುವೆ ಕೆತ್ತಲ್ಪಟ್ಟ ಈ ಶಾಸನ ಇನ್ನೂ ಸುಸ್ಥಿತಿಯಲ್ಲಿದೆ. ( ಈ ಶಾಸನದ ಛಾಯಾಚಿತ್ರವನ್ನು ಅನುಬಂಧದಲ್ಲಿ ಕೊಡಲಾಗಿದೆ) ಮತ್ತೊಂದು ಶಿಲಾಶಾಸನ ಕೊಪ್ಪಳ ಸಮೀಪದ ಪಾಲ್ಕಿಗೊಂಡಿಯಲ್ಲಿದೆ. ಈ ಶಾಸನ ತ್ರುಟಿತವಾಗಿದ್ದು ಓದಲು ಸಾಧ್ಯವಾಗಿಲ್ಲ. (ಈ ಶಾಸನದ ಛಾಯಾಚಿತ್ರವನ್ನು ಅನುಬಂಧದಲ್ಲಿ ಕೊಡಲಾಗಿದೆ) ಈ ಕಾರಣದಿಂದ ಈ ಶಿಲಾಶಾಸನ ಸಂದೇಶ ನಮಗೆ ಅಲಭ್ಯ. ಅಶೋಕನು ಕೊಪ್ಪಳ ಪ್ರದೇಶವನ್ನು ಇಸಿಲ ಪ್ರಾಂತಕ್ಕೆ ಸೇರಿಸಿಕೊಂಡಿದ್ದನು. ಬ್ರಹ್ಮಗಿರಿ ಮತ್ತು ಮಸ್ಕಿ ಶಾಸನಗಳಲ್ಲಿ ಈ ಅಂಶವು ವ್ಯಕ್ತವಾಗಿದೆ. ಈ ಶಾಸನಗಳಲ್ಲಿ ಅಶೋಕ ಚಕ್ರವರ್ತಿಯ ಹಿರಿಯ ಅಧಿಕಾರಿಗಳಾದ ಮಹಾಮಾತ್ರರು ಆಯಾ ತಾಣಗಳ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು. ಈ ಶಾಸನಗಳ ಲಿಪಿಯು ಬ್ರಾಹ್ಮಿ ಭಾಷೆಯಲ್ಲಿದೆ. ನಗರ ಸಂಸ್ಕೃತಿಯ ಬೆಳವಣಿಗೆ ಸಂಸ್ಕೃತ ಭಾಷೆಯೊಂದಿಗೆ ಮತ್ತು ಜನರಾಡುವ ಪಾಳಿ ಭಾಷೆಯಲ್ಲಿ ಕಾಣಬಹುದು. ಆದರೆ ಅಶೋಕನ ಆಡಳಿತದ ಕಾಲಘಟ್ಟದಲ್ಲಿ ಕೊಪ್ಪಳ ಪ್ರದೇಶದ ಜನರು ಆಡುತ್ತಿದ್ದ ಭಾಷೆ ಯಾವುದು ಎಂಬುದಕ್ಕೆ ಸ್ಪಷ್ಟ ಆಧಾರಗಳಿಲ್ಲ. ಆದಾಗ್ಯೂ ಬ್ರಾಹ್ಮಿ ಮತ್ತು ಪಾಳಿ ಭಾಷೆಗಳ ತಿಳುವಳಿಕೆ ಒಂದು ವರ್ಗದಲ್ಲಿತ್ತು ಎಂಬುದನ್ನು ಕಂಡುಕೊಳ್ಳಬಹುದು. ಆದರೆ ಈ ಪ್ರದೇಶದಲ್ಲಿ ಜನರು ಆಡುವ ಭಾಷೆ ಮಾತ್ರ ಕನ್ನಡವಾಗಿದ್ದಿರಲೇಬೇಕು. ಇದನ್ನು 'ಕಂದಮಿಳ

' ಭಾಷೆಯೆಂಬುದನ್ನು ಶಂಬಾ ಜೋಶಿಯವರು ಗುರುತಿಸುತ್ತಾರೆ. ಈ ಭಾಷೆಯು ಮೂಲದ್ರಾವಿಡ ಭಾಷೆಯಿಂದ ತಮಿಳು ಮತ್ತು ಕನ್ನಡ ಸಮಮಿಶ್ರಣದೊಂದಿಗೆ ಮಾತನಾಡುತ್ತಿದ್ದ ಕಾಲಘಟ್ಟದ ಭಾಷೆಯ ಹಂತವೆಂದು ಹೇಳುತ್ತಾರೆ. ಅದೇನೇ ಇದ್ದರೂ ಕೊಪ್ಪಳ ಪ್ರದೇಶ ಅತ್ಯಂತ ಮಹತ್ವದ ಪ್ರದೇಶವಾಗಿ ಮೌರ್ಯರ ಕಾಲಘಟ್ಟದಲ್ಲಿ ಪ್ರಸಿದ್ಧಿಯನ್ನು ಹೊಂದಿತ್ತು ಎಂಬುದು ಮಾತ್ರ ಸತ್ಯ.

## ೪. ೨. ಶಾತವಾಹನರು

ಭಾರತವನ್ನಾಳಿದ ಪ್ರಮುಖ ರಾಜಮನೆತನಗಳಲ್ಲಿ ಶಾತವಾಹನರು ಹಲವಾರುಕಾರಣಗಳಿಂದ ಪ್ರಮುಖರೆನಿಸುತ್ತಾರೆ. ಏಕೆಂದರೆ ಈ ಹೊತ್ತಿಗೆ ರಾಜಕೀಯ ಸಂಘಟನೆಗಳು ತಲೆದೋರಿ ಸುಮಾರು ಶತಮಾನಗಳು ಕಳೆದಿದ್ದವು. ಭೂ ಕಂದಾಯದಿಂದ ಹಿಡಿದು ಸಣ್ಣಪುಟ್ಟ ವಸ್ತುಗಳ ಉತ್ಪಾದನೆಗಳ ಮೇಲೂ ತೆರಿಗೆಗಳನ್ನು ಹಾಕಲಾಗುತ್ತಿತ್ತು. ಜೊತೆಗೆ ಸಾಮ್ರಾಜ್ಯ ವಿಸ್ತರಣೆಯಂಥ ಮಹತ್ವಾಕಾಂಕ್ಷೆಯ ವಿಷಯಗಳು ರಾಜರ ಮನೋಧರ್ಮದಲ್ಲಿರುತ್ತಿದ್ದವು. ಈ ಹಿನ್ನೆಲೆಯಲ್ಲಿ ರಾಜ್ಯಕ್ಕೆ ಬೇಕಾಗುವಂಥ ಎಲ್ಲಾ ಇಲಾಖೆಗಳೂ ಆಗಲೇ ಬೆಳಕಿಗೆ ಬಂದಿದ್ದವು. ಸೈನ್ಯದ ಉಸ್ತುವಾರಿ, ಪ್ರಾಂತೀಯ ಆಡಳಿತಗಳು, ಸಾಮಂತರಿಂದ ಕಪ್ಪ ವಸೂಲಿ, ಜನರ ಮೇಲೆ ಹಾಕುವ ತೆರಿಗೆಗಳು ಇವುಗಳು ವ್ಯವಸ್ಥಿತ ರೂಪವನ್ನು ಕಂಡಿದ್ದವು. ಏಕೆಂದರೆ ಶಾತವಾಹನರ ಸಂದರ್ಭದಲ್ಲಿ ಈ ಮಾತನ್ನು ವಿಶೇಷವಾಗಿ ಹೇಳಬೇಕಾಗುತ್ತದೆ. ಪ್ರಥಮಬಾರಿಗೆ ನಾಣ್ಯ ಪದ್ಧತಿಯನ್ನು ಪರಿಚಯಿಸಿದರು. ಅವರು ಪರಿಚಯಿಸಿದ ನಾಣ್ಯಗಳು ಕೊಪ್ಪಳದ ಪ್ರದೇಶದಲ್ಲಿ ದೊರೆತಿರುವುದು ಮತ್ತೊಂದು ವಿಶೇಷ. (ಕೊಪ್ಪಳ ಪ್ರದೇಶದಲ್ಲಿ ದೊರೆತ ಶಾತವಾಹನರ ನಾಣ್ಯಗಳ ಚಿತ್ರಗಳನ್ನು ಅನುಬಂಧದಲ್ಲಿ ಕೊಡಲಾಗಿದೆ.)

ಮೌರ್ಯ ಸಾಮ್ರಾಜ್ಯದ ಪತನದೊಂದಿಗೆ ಅವರ ಸಾಮಂತ ರಾಜರಾಗಿದ್ದ ಶಾತವಾಹನರು ದಕ್ಷಿಣಭಾರತದಲ್ಲಿ ಅಧಿಕಾರಕ್ಕೆ ಬಂದರು. ಕ್ರಿ.ಪೂ. ೨೩೦ರಲ್ಲಿ ತಮ್ಮ ರಾಜ್ಯವನ್ನು ಸ್ಥಾಪಿಸಿ ೨೨೦ರ ವರೆಗೂ ರಾಜ್ಯವನ್ನು ಆಳಿದರು. ಇವರ ಚರಿತ್ರೆಯನ್ನು ತಿಳಿಯಲು ನಮಗೆ ದೊರೆತಿರುವ ಪ್ರಮುಖ

ಆಧಾರಗಳೆಂದರೆ, ಶಾಸನಗಳು, ನಾಣ್ಯಗಳು, ಸ್ಮಾರಕಗಳು, ಪುರಾಣಗಳು ಪ್ರಮುಖವಾದವುಗಳು. ಇವರ ಬಗ್ಗೆ ದಖನ್ನಿನ ಪೂರ್ವದಲ್ಲಿ ಏಳು ಶಾಸನಗಳು, ಪಶ್ಚಿಮದಲ್ಲಿ ೧೯ ಶಾಸನಗಳು ದೊರೆತಿವೆ. ಪಾಳಿ ಮತ್ತು ಪ್ರಾಕೃತ ಸಾಹಿತ್ಯ ಅಲ್ಪ ಮಾಹಿತಿಯನ್ನು ನೀಡುತ್ತವೆ. ಗುಣಾಢ್ಯನ ಬೃಹತ್ ಕಥಾಕೋಶ ಕೃತಿಯು ಶಾತವಾಹನರ ಬಗ್ಗೆ ಹೆಚ್ಚಿನ ಮಾಹಿತಿಯನ್ನು ನೀಡುತ್ತದೆ. ಶಾತವಾಹನರ ದೊರೆಯಾದ ಹಾಲನು ಬರೆದ ಗಾಥಾಸತ್ತಸತಿಯು ಶಾತವಾಹನರ ಕಾಲದ ಜನಜೀವನವನ್ನು ಅರ್ಥಮಾಡಿಕೊಳ್ಳಲು ಸಹಾಯ ಮಾಡುತ್ತದೆ. ನಾಸಿಕ್ ಮತ್ತು ನಾನಾಗಡ್ ಶಾಸನಗಳಲ್ಲಿ ಉಲ್ಲೇಖಿಸಿರುವಂತೆ ಇವರ ಸಾಮ್ರಾಜ್ಯದ ಪ್ರದೇಶಗಳು ಮಹಾರಾಷ್ಟ್ರ, ಕರ್ನಾಟಕ ಮತ್ತು ಆಂಧ್ರಪ್ರದೇಶದ ಕೆಲವು ಜಿಲ್ಲೆಗಳನ್ನು ಒಳಗೊಂಡಿತ್ತು ಎಂದು ತಿಳಿಯಬಹುದು. ಪ್ರೊ. ರಾಬ್ಸೆಲ್, ಡಾ. ಸ್ಮಿತ್ ಮತ್ತು ಆರ್.ಜಿ. ಭಂಡಾರ್‌ಕರ್ ಅವರುಗಳು ಇವರನ್ನು ಆಂಧ್ರದವರೆಂದು ಕರೆದಿದ್ದಾರೆ. ಶಾತವಾಹನರು ಆಂಧ್ರದವರಲ್ಲವೆಂದು ಸಮಕಾಲೀನ ದಾಖಲೆಗಳಾದ ಹಾತಿಗುಂಪ, ಗಿರ್‌ನಾರ್ ಮತ್ತು ತಾಳಗುಂಪ ಶಾಸನಗಳು ಸಮಕಾಲೀನದಲ್ಲಿ ರಚನೆಯಾಗಿವೆ. ಇವುಗಳ ಮಾಹಿತಿಯ ಪ್ರಕಾರ ಇವರು ಆಂಧ್ರದವರಲ್ಲವೆಂದು ತಿಳಿಯಬಹುದು. ಬಳ್ಳಾರಿ ಜಿಲ್ಲೆಯ ಹಿರೇಹಡಗಲಿ ಶಾಸನದ ಪ್ರಕಾರ 'ಶತಾಹನಿ ರಟ್ಟ' ಅಥವಾ ಇಂದಿನ ಬಳ್ಳಾರಿ ಜಿಲ್ಲೆ ಶಾತವಾಹನರ ಮೂಲ ಎಂದು ತಿಳಿದುಬರುತ್ತದೆ. ಅದೇನೇ ಇದ್ದರೂ ಶಾತವಾಹನರು ಕನ್ನಡಿಗರಾಗಿದ್ದರು ಎನ್ನಬಹುದು. ಶಾತವಾಹನರ ನಾಣ್ಯಗಳು ಕೊಪ್ಪಳ ಪ್ರದೇಶದಲ್ಲಿ ಹೇರಳವಾಗಿ ದೊರೆತಿವೆ. ಕೊಪ್ಪಳ ಪ್ರದೇಶದಲ್ಲಿ ಶಾತವಾಹನರ ಕಾಲದ ಶಾಸನಗಳು ಬೆಳಕಿಗೆ ಬಂದಿವೆ. ಆದರೆ ನಾಣ್ಯಗಳು ಕೊಪ್ಪಳ ಪ್ರದೇಶದಲ್ಲಿ ಹೆಚ್ಚು ದೊರೆತಿರುವುದರಿಂದ ಅವರ ಶಾಸನಗಳಿಗಿಂತ ನಾಣ್ಯಗಳೇ ಹೆಚ್ಚು ಆಧಾರಗಳಾಗಿ ನಮಗೆ ಲಭ್ಯವಾಗುತ್ತವೆ. ನಾಣ್ಯಗಳ ಮೇಲೆ ರಾಜಮುದ್ರೆ ಇದ್ದು ಅದು ಆನೆಯ ಲಾಂಛನದೊಂದಿಗೆ ವ್ಯಕ್ತಗೊಂಡಿದೆ. ಕೊಪ್ಪಳದ ಕೋಟೆಯಲ್ಲಿನ ಎತ್ತರದ ಗುಂಡಿನಲ್ಲಿ ಕೆತ್ತಿದ ' ಉಸ್ಮಾನ್' ತಾಣದಲ್ಲಿ ದೊರೆತ ಇವರ ಕಾಲದ ಒಂದು ನಾಣ್ಯ ಒಂದು ಬದಿಯಲ್ಲಿ ಆನೆಯ ಉಬ್ಬು ಚಿತ್ರವನ್ನು ಹೊಂದಿದೆ. ಇದು ತುಂಬಾ ಕಲಾತ್ಮಕವಾಗಿದೆ. ಮತ್ತು ಪ್ರಮಾಣಬದ್ಧವಾಗಿದೆ. ಇದರ ಸುತ್ತಲೂ ಬ್ರಾಹ್ಮಿ ಲಿಪಿಯಲ್ಲಿ 'ಸಿರಿಸತಕ(ನಿ)' ಎಂದು ಬರೆಯಲ್ಪಟ್ಟಿದೆ. ಇದರ ಲಿಪಿ

ಬ್ರಾಹ್ಮಿಯಾಗಿದ್ದರೂ ಭಾಷೆಯು ಪ್ರಾಕೃತವಾಗಿದೆ. ಇದು ಮಹಾರಾಜ ಗೌತಮಪುತ್ರ ಶಾತಕರ್ಣಿಯ ಕಾಲದ್ದಾಗಿದೆ ಎಂದು ಶಂಕಿಸಬಹುದು. ನಾಣ್ಯದ ಹಿಂಬದಿಯಲ್ಲಿ ವರ್ತುಲದೊಳಗಿನ ಫಲಸಹಿತ ವೃಕ್ಷ ಮೂಡಿಸಲಾಗಿದೆ. ಈ ನಾಣ್ಯದ ವಿವರಗಳಿಂದ ಸೈನ್ಯದಲ್ಲಿ ಆನೆ ಹೆಚ್ಚು ಬಳಕೆಯಾಗುತ್ತಿತ್ತು ಮತ್ತು ಭಾಷೆಯು ಪ್ರಾಕೃತವಾಗಿರುವುದರಿಂದ ಆಡಳಿತ ಭಾಷೆಯು ಪ್ರಾಕೃತವೇ ಆಗಿತ್ತು ಎನ್ನುವುದು ತಿಳಿದುಬರುತ್ತದೆ. ಫಲಭರಿತ ವೃಕ್ಷವು ಕೃಷಿಯ ಸಂಕೇತ ಮಾತ್ರವಲ್ಲ ಸಮೃದ್ಧಿಯ ಸಂಕೇತವೆಂದು ಇದನ್ನು ಗುರುತಿಸುತ್ತಾರೆ. ಕೊಪ್ಪಳ ಪ್ರದೇಶದಲ್ಲಿ ಈ ನಾಣ್ಯಗಳು ಹೆಚ್ಚು ದೊರೆತಿರುವುದರಿಂದ ಕೊಪ್ಪಳವು ಆ ಕಾಲದಲ್ಲಿ ಒಂದು ಪ್ರಮುಖ ವಾಣಿಜ್ಯ ಕೇಂದ್ರವಾಗಿತ್ತು ಎಂಬುದು ತಿಳಿದುಬರುತ್ತದೆ.

ಕೊಪ್ಪಳಕ್ಕೆ ಅತಿ ಸಮೀಪದಲ್ಲಿರುವ ಚಿಕ್ಕ ಸಿಂದೋಗಿಯಲ್ಲಿ ಕೆಲವು ವರ್ಷಗಳ ಹಿಂದೆ ಆಕಸ್ಮಿಕವಾಗಿ ದೊರೆತ ಒಂದು ಪಾತ್ರೆಯಲ್ಲಿ ಸುಮಾರು ನಾಲ್ಕು ಸಾವಿರ ಶಾತವಾಹನರ ನಾಣ್ಯಗಳು ದೊರೆತಿವೆ. ಕರ್ನಾಟಕ ಸರ್ಕಾರದ ಪುರಾತತ್ವ ಇಲಾಖೆ ಈ ವಿಷಯವನ್ನು ಪ್ರಕಟಿಸಿದೆ. ಹೆಚ್ಚಿನ ಮಾಹಿತಿಯು, ಇಂಡಿಯನ್ ಆರ್ಕಿಯಾಲಾಜಿಕಲ್ ರಿವ್ಯೂವ್‌ನ ೧೯೭೭-೭೮ರ ಸಂಚಿಕೆಯಲ್ಲಿದೆ. ಆ ಪಾತ್ರೆಯಮೇಲೆ 'ಚಿಂತಸ' ಎಂದು ಬರೆದಿದೆ. ಚಿಂತಸ್ ಎಂಬುದು ವ್ಯಕ್ತಿಯ ಹೆಸರೆಂದು ಅದಕ್ಕೆ ಷಷ್ಠಿ ವಿಭಕ್ತಿ 'ಅ' ಪ್ರತ್ಯಯ ಹತ್ತಿ ಚಿಂತಸ ಎಂದಾಗಿರಬೇಕೆಂದು ವಿದ್ವಾಂಸರು ಶಂಕಿಸುತ್ತಾರೆ. ಡಾ. ಅ. ಸುಂದರ ಅವರು ಈ ಸ್ಥಳದ ಪರಿಶೋಧನೆಯನ್ನು ಮಾಡಿದ್ದು ಅದೇ ಪ್ರದೇಶದಲ್ಲಿ ಕಲ್ಲಿನ ಭಗ್ನ ವಿಗ್ರಹಗಳನ್ನು ಶೋಧಿಸಿರುವರು. ಶಾತವಾಹನರ ಕಾಲದ ನಾಣ್ಯಗಳು ಗದ್ಯಾಣ, ಪಣ, ಸುವರ್ಣ, ದಿನಾರ, ಕುಷಣ ಎಂದು ಐದು ಪ್ರಕಾರಗಳಲ್ಲಿ ಕಂಡುಬರುತ್ತವೆ. ಸುವರ್ಣ ದಿನಾರ ನಾಣ್ಯಗಳು ಚಿನ್ನದ ಲೋಹದಿಂದ ಮಾಡಲ್ಪಟ್ಟಿವೆ. ಕುಷಣ ಎಂಬುದು ಬೆಳ್ಳಿಯ ನಾಣ್ಯವಾಗಿತ್ತು. ಈ ನಾಣ್ಯಗಳು ಆನೆ, ಕುದುರೆ, ಸಿಂಹ ಮತ್ತು ಬಾಣದ ಚಿಹ್ನೆಗಳನ್ನು ಒಳಗೊಂಡಿದ್ದು ಕ್ರಮವಾಗಿ ೩.೫ ರಿಂದ ೫೬.೦ ಗ್ರಾಂಗಳವರೆಗೆ ತೂಗುತ್ತಿದ್ದವು. ಹಾಗೆಯೇ ಅರ್ಧ ಮುಕ್ಕಾಲು, ಒಂದೂವರೆ ಇಂಚಿನ ವ್ಯಾಸವನ್ನು ಈ ನಾಣ್ಯಗಳು ಹೊಂದಿದ್ದವು.

ಮೌರ್ಯ ಸಾಮ್ರಾಜ್ಯದ ಕಾಲಘಟ್ಟದಲ್ಲಿ ಕೊಪ್ಪಳ ಪ್ರದೇಶವು ಪ್ರಸಿದ್ಧ ನಗರವಾಗಿತ್ತು. ಆದುಧಾರ್ಮಿಕ, ಶೈಕ್ಷಣಿಕ, ವಾಣಿಜ್ಯಕ ಹಾಗೆಯೇ ರಾಜಕೀಯ ಕಾರ್ಯಕ್ಷೇತ್ರವಾಗಿ ದಕ್ಷಿಣ ಭಾರತದಲ್ಲಿ ಪ್ರಚಲಿತಕ್ಕೆ ಬಂದಿತ್ತು. ಅಲ್ಲಲ್ಲಿ ಬೌದ್ಧ ಸ್ತೂಪಗಳನ್ನು ಕಾಣಬಹುದು. ಈಗಿನ ಗವಿಮಠದಲ್ಲಿ ಈ ಸ್ತೂಪಗಳಂತೆ ಕಾಣುವ ಮೂಲಗಳನ್ನು ಕಾಣಬಹುದು. ಒಂದು ಕಾಲದಲ್ಲಿ ಈ ಗವಿಮಠ ಬೌದ್ಧರ ಕೇಂದ್ರವಾಗಿತ್ತು ಎಂಬುದನ್ನು ವಿದ್ವಾಂಸರು ಈಗಾಗಲೇ ಗುರುತಿಸಿದ್ದಾರೆ. ಅನಂತರ ಅದು ಜೈನರ ಕೇಂದ್ರವಾಯಿತು. ಶಾತವಾಹನರ ಕಾಲಕ್ಕಾಗಲೇ ಜೈನಧರ್ಮ ದಕ್ಷಿಣ ಭಾರತಕ್ಕೆ ಲಗ್ಗೆಯಿಟ್ಟಿತು. ಶಾತವಾಹನರು ಭಾಗಶಃ ಜೈನಧರ್ಮಕ್ಕೆ ಮನ್ನಣೆಯನ್ನು ಕೊಟ್ಟಿದ್ದರು. ಈ ಹಿನ್ನೆಲೆಯಲ್ಲಿ ಕೊಪ್ಪಳ ನಗರವು ಜೈನಕೇಂದ್ರವಾಗಿ ಪರಿವರ್ತನೆಯಾಗುತ್ತಿತ್ತು. ಶಾತವಾಹನರು ಅದನ್ನು ಧಾರ್ಮಿಕವಾಗಿ ಅಷ್ಟು ಅನುಲಕ್ಷಿಸದೆ ರಾಜಕೀಯ ಮತ್ತು ವಾಣಿಜ್ಯಕ ವಸಾಹತನ್ನಾಗಿ ಮಾಡಿಕೊಂಡಿದ್ದರು ಎಂಬುದರಲ್ಲಿ ಎರಡು ಮಾತಿಲ್ಲ.

## ೪. ೩. ಕದಂಬರು

ಕದಂಬರ ಆಳ್ವಿಕೆಯಲ್ಲಿ ಕೊಪ್ಪಳ ನಗರವು ಪ್ರಮುಖ ಪಾತ್ರವನ್ನು ವಹಿಸಿದೆ. ಚಂದ್ರವಳ್ಳಿಯ ಪ್ರಥಮ ಶಾಸನದಲ್ಲಿಯೆ ಕೊಪ್ಪಳ ನಗರದ ಉಲ್ಲೇಖವಿದೆ. ಆ ಶಾಸನದ ಪಾಠವು ಹೀಗಿದೆ :

೧) 'ಕದಂಬಾಣಂ ಮಯೂರ ಮರ್ಮ್ಮಣಾ

೨) ತಟಾಕಂ ದೃಢಂ ಕೃತಂ ಅಭಿರುಪಂ ರ (ಚ) ಯಿತ್ವಾ

೩) ವಾನ(ವಾ) ಸಕಂ ಸ್ಥಾಪಯಿತ್ವಾ **ಕುಪಣಚ** (ಮೋ) .......

ಕದಂಬರ ಅರಸ ಮಯೂರವರ್ಮನು ಕೆತ್ತಿಸಿದ ಈ ಶಾಸನವು ಚಂದ್ರವಳ್ಳಿಯ ಕೆರೆಯನ್ನು ಬಲಪಡಿಸಿದನೆಂದು ಈ ಶಾಸನದಲ್ಲಿ ಹೇಳಲಾಗಿದೆ. ಈ ಶಾಸನವನ್ನು ಕೆತ್ತಿದ ಲಿಪಿಕಾರ ಅಥವಾ ರೂವಾರಿ

ಚಮ ಅಥವಾ ಚಾಮ (ಚಮೋ). ಈ ಚಾಮನು ಕೊಪ್ಪಳದವನು ಎಂದು ಉಲ್ಲೇಖಿಸಲಾಗಿದೆ. ಈ ಕೊಪ್ಪಳವು ಅಂದು ಒಂದು ಶೈಕ್ಷಣಿಕ ಕೇಂದ್ರವಾಗಿತ್ತು. ಅಗ್ರಹಾರ ಸಂಸ್ಕೃತಿ ಬೆಳೆಯುವುದಕ್ಕೂ ಮುನ್ನ ಕೊಪ್ಪಳವು ಒಂದು ವಿದ್ಯಾಕೇಂದ್ರವಾಗಿ ಪರಿಣಮಿಸಿತು. ಕಿಸುಕಾಡು, ಕುಕನೂರು, ಗಂಗವಾಡಿ, ತರ್ದವಾಡಿ, ನರೆಯಂಗಲ್ಲು, ನೊಳಂಬವಾಡಿ, ಪುಲಿಗೆರೆ, ಬನವಾಸಿ, ಬೆಳ್ವೊಲ, ಮಾಸವಾಡಿ, ಯರದೊಡೆನಾಡು, ಈ ಸ್ಥಳಗಳ ಅಗ್ರಹಾರಗಳಲ್ಲಿ ಕೊಪ್ಪಣಾಚಲದ ಅಗ್ರಹಾರವು ಬಹಳ ಹಳೆಯದಾಗಿತ್ತು ಮಾತ್ರವಲ್ಲ ಹೆಚ್ಚು ಪ್ರಸಿದ್ಧಿಗೆ ಬಂದಿತ್ತು. ಈ ಬನವಾಸಿಯ ನಾಡಲ್ಲಿ ಕದಂಬರು ಕೊಪಣಾಚಲವನ್ನು ಗೆದ್ದು ತಮ್ಮ ಸಾಮ್ರಾಜ್ಯಕ್ಕೆ ಸೇರಿಸಿಕೊಂಡರು ಎನ್ನುವುದಕ್ಕೆ ಉಲ್ಲೇಖಗಳಿವೆ.

ಕದಂಬ ವಂಶ ನಮ್ಮ ನಾಡಿನ ಬಹುಮುಖ್ಯವಾದ ಅರಸುಮನೆತನ. ಉತ್ತರ ಕನ್ನಡ ಜಿಲ್ಲೆಯ ಬನವಾಸಿಯು ಅವರ ರಾಜಧಾನಿಯಾಗಿತ್ತು. ಕ್ರಿ.ಶ. ೩೨೫ರಿಂದ ೨೦೦ ವರ್ಷ ಸ್ವತಂತ್ರವಾಗಿ ರಾಜ್ಯಭಾರ ಮಾಡಿದರು. ಕರ್ನಾಟಕವನ್ನು ಆಳಿದ ಮೊದಲ ಕನ್ನಡಿಗ ಅರಸು ಮನೆತನವೆಂಬ ಹೆಮ್ಮೆ ಅವರದ್ದಾಗಿದೆ. ಅವರ ಮೂಲ ಸ್ಥಳ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ತಾಳಗುಂದ. ಬ್ರಾಹ್ಮಣರಾಗಿದ್ದ ಕದಂಬವಂಶದ ಮಯೂರ ಶರ್ಮ ತನ್ನ ಬಾಲ್ಯದಲ್ಲಿ ಉನ್ನತ ಶಿಕ್ಷಣಕ್ಕಾಗಿ ಕಂಚಿಗೆ ಹೋಗಿದ್ದಾಗ ಅಲ್ಲಿನ ಪಲ್ಲವರು ತಾವು ಕ್ಷತ್ರಿಯರೆಂಬ ಅಹಂಕಾರದಿಂದ ಆ ಹುಡುಗನನ್ನು ಅಪಮಾನಪಡಿಸಿದ್ದರಿಂದ ಅವನು ಖಡ್ಗವನ್ನು ಹಿಡಿದು ಕ್ಷತ್ರಿಯನಾಗಿ ಪಲ್ಲವರನ್ನು ಸೋಲಿಸಿದ ಕಥೆ ನಮ್ಮ ಚರಿತ್ರೆಯಲ್ಲಿ ಸಿಗುತ್ತದೆ. ಹೀಗೆ ಮಯೂರಶರ್ಮನು ಸಾಮ್ರಾಜ್ಯವನ್ನು ಸ್ಥಾಪಿಸಿ ಮಯೂರವರ್ಮನಾಗಿದ್ದಾನೆ. ಕದಂಬರ ರಾಜ್ಯವು ಮೊದಲ ಕನ್ನಡಿಗರ ರಾಜ್ಯ. ಇಲ್ಲಿಂದ ಕನ್ನಡಿಗರಿಗೆ ಸ್ವಾಭಿಮಾನ ಕಾಪಾಡಿಕೊಳ್ಳುವ ಮನೋಧರ್ಮ ಹೆಚ್ಚಾಗತೊಡಗಿತು. ಕನ್ನಡಿಗರ ಕೆಚ್ಚು ಸ್ವಾಭಿಮಾನ, ಸಾಹಸಗಳಿಗೆ ಕದಂಬ ವಂಶವು ಪ್ರತೀಕ. ಅವನ ಚಂದ್ರವಳ್ಳಿಯ ಶಾಸನವು ಸಂಸ್ಕೃತ ಭಾಷೆಯಲ್ಲಿದೆ. ಇದರ ಆಧಾರದಿಂದ ಕೊಪ್ಪಳ ಪ್ರದೇಶವು ಮಯೂರವರ್ಮನ ಆಳ್ವಿಕೆಗೆ ಒಳಪಟ್ಟಿತ್ತೆಂಬುದು ಸ್ಪಷ್ಟವಾಗುತ್ತದೆ. ಕನ್ನಡ ಭಾಷೆ ಕದಂಬರ ಸಂದರ್ಭದಲ್ಲಿ ರಾಜಮಾನ್ಯತೆಯನ್ನು ಪಡೆದುಕೊಳ್ಳುತ್ತಿತ್ತು.

ಕಲ್ಲಿನ ಮೇಲೆ ದೊರೆಯುವ ಮೊದಲ ಕನ್ನಡ ಬರಹವೆಂದರೆ ಬೇಲೂರು ತಾಲ್ಲೂಕಿನ ಹನುಮಿಡಿ (ಹಲ್ಮಿಡಿ) ಎಂಬ ಗ್ರಾಮದ ಕ್ರಿ.ಶ. ೪೫೦ರ ಕದಂಬರ ಶಾಸನ. ಇದು ಕನ್ನಡದಲ್ಲಿದೆ. ಆ ಶಾಸನದಲ್ಲಿ ಪಲ್ಲವರೇ ಮೊದಲಾದವರನ್ನು ಸೋಲಿಸಿದ ವಿಜ ಎಂಬ ಅರಸ ವೀರಸೈನಿಕನಿಗೆ ಬಿಟ್ಟುಕೊಟ್ಟ ದಾನದ ವಿಷಯವಿದೆ. ಬಹಳ ಸುಂದರವಾದ ಕನ್ನಡದ ಗದ್ಯಶೈಲಿ ಆ ಶಾಸನದಲ್ಲಿದೆ. ತಾಳಗುಂದದಲ್ಲಿ ಕ್ರಿ.ಶ. ೪೫೦ರ ಸಂಸ್ಕೃತ ಶಾಸನ ಲಭ್ಯವಾಗಿದೆ. ಆ ಶಾಸನವು ಕದಂಬರ ಮೂಲಪುರುಷ, ಕದಂಬರು ಕಟ್ಟಿದ ಸಾಮ್ರಾಜ್ಯ, ಮತ್ತು ಅದರ ಮೇರೆಗಳನ್ನು ಗುರುತಿಸುತ್ತದೆ. ಆ ಮೇರೆಯ ಒಳಗಡೆ ಕೊಪ್ಪಳ ಪ್ರದೇಶವಿರುವುದು ಗಮನಾರ್ಹ ಅಂಶವಾಗಿದೆ.

## ೪. ೪. ಗಂಗರು

ಕದಂಬರ ಕಾಲದಲ್ಲಿ ದಕ್ಷಿಣ ಕರ್ನಾಟಕದ ಮೈಸೂರು ಜಿಲ್ಲೆಯ ತಲಕಾಡಿನಿಂದ ಗಂಗರು ಆಳುತ್ತಿದ್ದರು. (ಕ್ರಿ.ಶ. ೩೨೫-ಕ್ರಿ.ಶ. ೧೦೦೦) ಇವರ ಮೊದಲ ರಾಜಧಾನಿ ಕೋಲಾರ. ಇವರ ಮೂಲಪುರುಷ ಕೊಂಗಣಿವರ್ಮ ಎಂದು ತಿಳಿದುಬಂದಿದೆ. ಗಂಗರ ಶಾಸನಗಳಲ್ಲಿ ಆ ದೊರೆಗಳನ್ನು 'ಪ್ರಜೆಗಳ ಕ್ಷೇಮವೊಂದೇ ತಮ್ಮ ಅಧಿಕಾರದಿಂದ ಪಡೆಯುವ ಪ್ರಯೋಜನವುಳ್ಳವರೆಂದು, ಯುದ್ಧಗಳಲ್ಲಿ ಮೈತುಂಬ ಆದ ಗಾಯಗಳಿಂದ ಶೋಭಿಸುವವರು ಎಂದು ಮುಂತಾಗಿ ಹೊಗಳಲಾಗಿದೆ. ಇವರಲ್ಲಿ ದುರ್ವಿನೀತ ಎಂಬ ದೊರೆ ಪ್ರಸಿದ್ಧನು. ಇವನ ಆಸ್ಥಾನದಲ್ಲಿ ಕೆಲಕಾಲ ಸಂಸ್ಕೃತದ ಮೇರು ಕವಿ ಭಾರವಿ ಇದ್ದನೆಂದು ಶಾಸನಗಳಿಂದ ತಿಳಿದುಬರುತ್ತದೆ. ದುರ್ವಿನೀತನೇ ಸ್ವತಃ ವಿದ್ವಾಂಸ ಮತ್ತು ಕನ್ನಡದ ಕವಿ. ಇವನು ಕಂಚಿಯ ಪಲ್ಲವರ ಪರಮೇಶ್ವರವರ್ಮನನ್ನು ಸೋಲಿಸಿ ಉಗ್ರೋದಯ ಎಂಬ ರತ್ನಕಂಠೀಹಾರವನ್ನು ಕಿತ್ತುಕೊಂಡವನು ಎಂಬ ಹೊಗಳಿಕೆಗಳು ಶಾಸನಗಳಲ್ಲಿ ಸಿಗುತ್ತವೆ. ಮೊದಲು ಕುಲವಾಲ ಎಂದರೆ ಈಗಿನ ಕೋಲಾರ ಇವರ ರಾಜಧಾನಿಯಾಗಿದ್ದಿತು. ಅನಂತರ ತಲಕಾಡನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡರು. ಸಂಸ್ಕೃತದಲ್ಲಿ ಅದನ್ನು ತಲವನಪುರ ಎಂದು ಕರೆಯುತ್ತಿದ್ದರು.

ದಡಿಗನೇ ಈ ವಂಶದ ಮೊದಲನೆಯ ರಾಜ. ಅವನಿಗೆ ಕೊಂಗಣಿವರ್ಮನೆಂಬ ಬಿರುದಿತ್ತು. ದುರ್ವಿನೀತನ ಕಾಲದಲ್ಲಿ ಗಂಗರು ಹೆಚ್ಚು ಬೆಳಕಿಗೆ ಬಂದರು. ಅವನ ಕಾಲದಲ್ಲಿ ಗಂಗ ಸಾಮ್ರಾಜ್ಯ ಹೆಚ್ಚು ಪ್ರಾಬಲ್ಯವನ್ನು ಹೊಂದಿತ್ತು. ಕ್ರಿ.ಶ. ೪೫೦ ರಿಂದ ಕ್ರಿ.ಶ. ೬೦೦ ಈ ವರೆಗಿನ ಕಾಲಾವಧಿಯಲ್ಲಿ ಬಾದಾಮಿಯ ಚಾಲುಕ್ಯರು ಪ್ರಬಲವಾಗುತ್ತಿದ್ದ ಕಾಲ. ಇವರೊಡನೆ ವೈವಾಹಿಕ ಸಂಬಂಧವನ್ನು ದುರ್ವಿನೀತನು ಬೆಳೆಸಿದನು. ದುರ್ವಿನೀತನ ಕಾಲದಲ್ಲಿ ಪಲ್ಲವರು ಕರ್ನಾಟಕದ ಮೇಲೆ ನುಗ್ಗುವ ಸಾಹಸವನ್ನು ಕೈಬಿಟ್ಟು ಹಿಮ್ಮೆಟ್ಟಬೇಕಾಯಿತು. ಈತನು ಮಹಾಸಾಹಸಿಯಾಗಿದ್ದುದಲ್ಲದೆ ವಿವೇಚನಾಪರನು, ಸಚ್ಛೀಲ ಸಮನ್ವಿತನೂ ಧರ್ಮಿಷ್ಠನೂ ಆಗಿದ್ದನೆಂದು ಕೊಪ್ಪಳ ಪ್ರದೇಶದ ಒಂದು ಶಾಸನ ವರ್ಣಿಸಿದೆ. ತನ್ನ ವೈಯಕ್ತಿಕ ಜೀವನದಲ್ಲಿಯೂ ಮತ್ತು ರಾಜಕೀಯದಲ್ಲಿಯೂ ಕೂಡ ನಡೆನುಡಿಗಳೊಂದಾದ ಉದಾತ್ತ ಮಾರ್ಗ ಈತನದು. ಪ್ರಭುಶಕ್ತಿ, ಮಂತ್ರಶಕ್ತಿ ಮತ್ತು ಉತ್ಸಾಹಶಕ್ತಿಗಳ ಸಂಗಮ ದುರ್ವಿನೀತನಲ್ಲಿತ್ತು ಎಂಬುದನ್ನು ಮತ್ತೊಂದು ಶಾಸನ ಹೇಳುತ್ತದೆ. ಈತನದು ಬಹುಮುಖವಾದ ಶಕ್ತಿಯನ್ನುಳ್ಳ ವ್ಯಕ್ತಿತ್ವ. ದೂರದೃಷ್ಟಿಯನ್ನುಳ್ಳವನು, ದೀನದುಃಖಿಗಳಲ್ಲಿ ದಯಾಮಯನು, ಯುದ್ಧಗಳಲ್ಲಿ ಭಯಂಕರನೂ, ನಡೆನುಡಿಗಳಲ್ಲಿ ಸುಸಂಸ್ಕೃತನೂ ಕಲಾಭಿರುಚಿಯಲ್ಲಿ ಸಹೃದಯನೂ ಆಗಿದ್ದನೆಂದು ಅನೇಕ ಕೃತಿಗಳಿಂದ ತಿಳಿದುಬರುತ್ತದೆ.

ಬಾದಾಮಿಯ ಚಾಲುಕ್ಯರು ಚಕ್ರವರ್ತಿಗಳಾಗಿ ತಲೆಯೆತ್ತುತ್ತಿದ್ದುದರಿಂದ ಗಂಗರು ಅವರ ಸಂಬಂಧವನ್ನು ಬೆಳೆಸಿಕೊಂಡು ಅವರಿಗೆ ಮಿತ್ರರೂ ಸಾಮಂತರೂ ಆಗಿದ್ದರು. ಈ ಸಂದರ್ಭದಲ್ಲಿ ಕೊಪ್ಪಳ ಪ್ರದೇಶವನ್ನು ಗಂಗರಿಂದ ಚಾಲುಕ್ಯರು ತಮ್ಮ ವಶಕ್ಕೆ ತೆಗೆದುಕೊಂಡಿರಬೇಕು. ಏಕೆಂದರೆ ಕೊಪ್ಪಳ ಪ್ರದೇಶವು ಬಾದಾಮಿಯ ಹತ್ತಿರದಲ್ಲಿರುವುದರಿಂದ ಈ ನಗರವು ಸಹಜವಾಗಿಯೇ ಚಾಲುಕ್ಯರ ಗಮನ ಸೆಳೆದಿರಬೇಕು. ಆದರೆ ಎರಡನೆಯ ಪುಲಕೇಶಿಯ ಮರಣಾನಂತರ ಚಾಲುಕ್ಯ ವಂಶ ತಾತ್ಕಾಲಿಕವಾಗಿ ಅವನತಿಗೊಳಗಾಗಿತ್ತು. ಅವನ ನಂತರ ರಾಷ್ಟ್ರಕೂಟರು ಪ್ರಬಲರಾಗಿ ಕರ್ನಾಟಕದಲ್ಲೆಲ್ಲಾ ವ್ಯಾಪಿಸಿದರು. ಆದರೆ ಗಂಗರು ಈ ಏರುಪೇರುಗಳಿಂದ ಅಷ್ಟಾಗಿ ವಿಚಲಿತರಾಗದೆ

ಗಂಗವಾಡಿಯನ್ನಾಳುತ್ತಾ ಸಾಮಂತರಾಗಿ ಮುಂದುವರಿಯುತ್ತಿದ್ದರು. ಶ್ರೀಪುರುಷ, ಶಿವಮಾರ, ಮಾರಸಿಂಹ, ರಾಚಮಲ್ಲ ಮೊದಲಾದ ರಾಜರುಗಳು ಈ ವಂಶದ ಕೀರ್ತಿಯನ್ನು ಹೆಚ್ಚಿಸಿದರು. ಮಾರಸಿಂಹ ಮತ್ತು ನಾಲ್ಕನೆಯ ರಾಚಮಲ್ಲ ಇವರ ಆಳ್ವಿಕೆಯಲ್ಲಿ ಕರ್ನಾಟಕದ ಕೀರ್ತಿಯನ್ನು ಶಾಶ್ವತವಾಗಿ ಉಳಿಸುವಂತಹ ಮಹತ್ಸಾಧನೆಯೊಂದಕ್ಕೆ ಈ ವಂಶ ಕಾರಣವಾಯಿತು. ಅದೆಂದರೆ ಶ್ರವಣಬೆಳಗೊಳದಲ್ಲಿ ಗೊಮ್ಮಟೇಶ್ವರನ ಬೃಹತ್ ವಿಗ್ರಹ ನಿರ್ಮಾಣ.

ಮಾರಸಿಂಹ ಮತ್ತು ರಾಚಮಲ್ಲರ ಬಳಿಯಲ್ಲಿ ದಂಡನಾಯಕನಾಗಿದ್ದ ಚಾವುಂಡರಾಯ ಇದಕ್ಕೆ ಕಾರಣನಾದವನು. ಅವನು ಅಸಮ ಸಾಹಸವನ್ನು ಏಕೈಕ ಸ್ವಾಮಿನಿಷ್ಠೆಯ ಜೊತೆಗೆ ಅಗಾಧವಾದ ಪಾಂಡಿತ್ಯ, ಕಾವ್ಯಶಕ್ತಿ, ಕಲೋಪಾಸನೆಗಳನ್ನು ಮೈಗೂಡಿಸಿಕೊಂಡಿದ್ದನು. ರನ್ನ ಕವಿಗೆ ಕೆಲಕಾಲ ಆಶ್ರಯ ಕೊಟ್ಟ ಹಿರಿಮೆ ಆತನದು. ಅದಲ್ಲದೆ ತಾನೇ ಸ್ವತಃ ಕೃತಿಕಾರನಾಗಿ ಚಾವುಂಡರಾಯಪುರಾಣ ಎಂಬ ಗ್ರಂಥವನ್ನು ಬರೆದನು. ಆ ಚಾವುಂಡರಾಯಪುರಾಣದಲ್ಲಿ ಕೊಪ್ಪಳ ಪ್ರದೇಶದ ಉಲ್ಲೇಖವಿದೆ.

ಅಸಿಧಾರಾ ವ್ರತದಿಂದ ಪೆಂಪೆಸೆವಿನಂ ಮುಳ್ಗುಂದದೊಳ್ ಪೊನ್ನಂ ಸಂ
ನ್ಯಸನಕ್ಕೆಂದೆ ನಿವೃತ್ತಿಗೈದು ಕೊಪಣಾದ್ರಿಂದಕ್ಕೆ ವಂದಾಗಮ ಪೋ
ಕ್ತ ಸಮಾಧಾನ ನಿಧಾನದಿಂ ಮುಡುಪಿ ಮುಕ್ತಿಸ್ಥಾನಮಂ ಮುಂಜೆ
ಧಿಸಿಕೊಂಡೊಳ್ಪು ಕುಮಾರಸೇನ ಮುನಿ ಪುಂಗಕ್ಕುಂ ಪೆರರ್ಗಕ್ಕುಮು

(ಚಾವುಂಡರಾಯಪುರಾಣ , ಸಂಧಿ ೧ ಪದ್ಯ ೬)

ಕುಮಾರಸೇನ ಮುನಿಯು ಮುಳಗುಂದದಲ್ಲಿ ಕಠಿಣ ವ್ರತವನ್ನು ಕೈಗೊಂಡರೂ ಆಗಮೋಕ್ತ ಸಮಾಧಾನವಿಧಾನದಿಂದ ನಿರ್ವಾಣ ಸಾಧಿಸಲು ಸಾಧ್ಯವಾಗಲಿಲ್ಲ. ಆ ಕಾರಣಕ್ಕಾಗಿ ಆ ಮುನಿಯು ಅಲ್ಲಿಂದ ಬಿಡುಗಡೆ ಹೊಂದಿ ಅದ್ರಿಗಳಲ್ಲಿ ಇಂದ್ರನಂತಿರುವ ಕೊಪಣಾದ್ರಿಗೆ ಆಗಮಿಸಿ ಆಗಮೋಕ್ತ ವಿಧಾನದಿಂದ ನಿರ್ವಾಣ ಹೊಂದಿರುವನೆಂದು ಕವಿ ಚಾವುಂಡರಾಯನು ಹೇಳಿದ್ದಾನೆ. ಇದು ಕೊಪ್ಪಳದ ಮಹತ್ವವನ್ನು ಸಾರುತ್ತದೆ. ಜೈನಮುನಿಗಳು ನಿರ್ವಾಣಕ್ಕೋಸ್ಕರ ಕೊಪ್ಪಳದ ಬೆಟ್ಟಗುಡ್ಡಗಳ

ಸಾಲುಗಳಲ್ಲಿ ಆಗಮಿಸುತ್ತಿದ್ದರೆನ್ನುವುದು ಕೇವಲ ಕಾವ್ಯದ ಮಾತಲ್ಲ; ಅದು ಅಲ್ಲಿನ ಧಾರ್ಮಿಕ ಮಹತ್ವದ ಸಂಕೇತ. ಕಾವ್ಯಗಳು ಸಂಸ್ಕೃತಿಯನ್ನು ಬಿಂಬಿಸುವ ಕನ್ನಡಿಗಳು. ಈ ಕನ್ನಡಿಯಲ್ಲಿ ಕೊಪ್ಪಳದ ಚಿತ್ರಣ ಸ್ಪಷ್ಟವಾಗಿ ಮೂಡಿ ಬಂದಿದೆ. ಅದೇನೇ ಇದ್ದರೂ ಗಂಗರ ಕಾಲದಲ್ಲಿ ಅದರಲ್ಲೂ ಚಾವುಂಡರಾಯನ ಕಾಲದಲ್ಲಿ ಕೊಪ್ಪಳವು ಜೈನರ ಪವಿತ್ರ ಕೇಂದ್ರಗಳಲ್ಲೊಂದಾಗಿತ್ತು ಎಂಬುದನ್ನು ಅಲ್ಲಗಳೆಯುವಂತಿಲ್ಲ.

ಗಂಗವಂಶದ ರಾಜರು ಅವನ ರಾಣಿಯರನೇಕರು ಕೊಪ್ಪಲಕ್ಕೆ ಬಂದು ಪವಿತ್ರ ಸಲ್ಲೇಖನ ವ್ರತವನ್ನು ಆಚರಿಸಿ ಮರಣ ಹೊಂದಿದರೆಂದು ಕೊಪ್ಪಳದಲ್ಲಿಯ ಅನೇಕ ನಿಷಿಧಿಕಲ್ಲುಗಳು ತಿಳಿಸುತ್ತವೆ. ಅದರ ಬಗೆಗೆ ಶಾಸನವೊಂದು ಹೀಗಿದೆ :

(ಸ್ವಸ್ತಿ) ಜಿನಶಾಸನಾಯ ಶಕ ಕಾಳಾಕ್ರಾನ್ತ (ವರ್ಷ)
೮೯೪ಳ ನೆಯ ಶ್ರೀಮುಖ ಸಂವತ್ಸರಂ ಪ್ರವರ್ತ್ತಿಸೆ ತದ್ವ
ರ್ಷಾನನ್ತರ ಪುಶ್ಯಸುದ್ಧ ೫ ಸೋಮವಾರದಂದು ಶ್ರೀಮ
ದ್ಗಂಗ ಗಾಂಗೇಯ ಪೆರ್ಮ್ಮಾನಡಿಗಳರಿಯಪ್ರ್ಪದ್ಮ
(ರ)ಸಿಯರ್ ಪರಮ ಶ್ರಾವಕಿ ಬೂತುಗನರಸಿ ಜಗಂ
ಪೊಗಳೆ ನೆಗಳ್ದ ಪದ್ಮಬ್ಬೆ ಕರಂ ಪರಿಣಾಮ ಸುದ್ದಿಯಿಂ
ನ್ದಂ ಪರಮಾತ್ಮನ ಚರಣಯುಗಳಮಂನ್ನೆನೆಯುತ್ತು (೦)॥
(ಸಾ) ವದುರುಜೆಯನ (ಗಿಂ) ಪೆರತೊನ್ದಂ ಬಗೆಯಲ್ಮೋಹ ರಾ
ರುಹನೆ ಸರಣೆನ್ನೆನ್ದು ಮುದದಿನ್ದಂ ಕುಪಣಕೆ ಬನ್ದು ಪ
ಲರ್ಪ್ಪೊಗಳೆ ದೀಕ್ಷೆಯಂ ಕೈಕೊಣ್ಡಳ್॥
(ಹಿಂಭಾಗ)
ಆಸೀದಸೀಮಗುನ ಸಂಗ್ರಹಣ ಪ್ರ
ವೀಣ ವಿದ್ರಾಣೂ ಬಾಣಗಣ ವಿಕ್ರಮ

ಪಂಚಬಾಣ ಚಾರಿತ್ರ ಪಾತ್ರಮ
ಳ್ಳ ಶ್ರುತಣ ಕಿಮತ್ರ ಲೋಕತ್ರ
ಯಾಧಿಪಗುರು ಮಳಧಾರಿದೇವರ್॥

(ಕ್ರಿ.ಶ. ೯೭೨ ರಲ್ಲಿ ಗಂಗಗಾಂಗೇಯ ಪೆರ್ಮ್ಮಾನಡಿ ಬೂತುಗನಿಮ್ಮಡಿಯ ಅರಸಿ ಪರಮಶ್ರಾವಕಿಯಾದ ಪದ್ಮಬ್ಬರಸಿ ಈಕೆ ಲೋಕವೆಲ್ಲ ಹೊಗಳುಹಾಗೆ, ತುಂಬ ಪರಿಣಾಮ ಶುದ್ಧಿಯಿಂದ, ಜಿನರ• ಚರಣಗಳನ್ನು ನೆನೆದಳು. '' ಸಾವು ಎಂಬುದು ಸಹ ಒಂದು ಕಾಯಿಲೆ, ನನಗೆ ಇನ್ನು ಬೇರೆ ಯೋಚನೆ ಬೇಡ, ಮೋಹಗಳನ್ನು ಗೆದ್ದಿರುವ ಅರ್ಹಂತನೇ ಶರಣು'' ಎಂದು ಯೋಚಿಸಿದಳು. ಕೂಡಲೆ ಮುದದಿಂದ ಕುಪಣ ತೀರ್ಥಕ್ಕೆ ಬಂದಳು. ಹಲವರು ಹೊಗಳುವ ರೀತಿಯಲ್ಲಿ ದೀಕ್ಷೆಯನ್ನು ಕೈಕೊಂಡಳು. ಆಕೆಯ ಗುರುಗಳು ಬಹುಗುಣಗಳ ಮಲಧಾರಿದೇವರು. ಅವರು ಅಯ್ದು ಬಾಣಗಳ ಕಾಮನನ್ನು ಗೆದ್ದವರು. ಉತ್ತಮ ಚರಿತ್ರವಂತರು.

ಡಾ. ಹಂಪಾನಾ ಅವರು ಈ ವಿಷಯವನ್ನು ಆಳವಾಗಿ ಸಂಶೋಧಿಸಿರುವುದು ಈ ಬಗೆಗೆ ಚರ್ಚೆಯನ್ನು ಮುಂದಿನ ಅಧ್ಯಾಯಗಳಲ್ಲಿ ಎತ್ತಿಕೊಳ್ಳಲಾಗಿದೆ.

ಡಾ. ಎಂ. ಎಂ. ಕಲಬುರ್ಗಿಯವರು ಅಭಿಪ್ರಾಯಪಟ್ಟಿರುವಂತೆ ಕೊಪ್ಪಳವು ಜೈನಧರ್ಮದ ಪವಿತ್ರ ಕೇಂದ್ರವಾಗಿ ಗಂಗರ, ಕದಂಬರ ಕಾಲದಲ್ಲಿ ರೂಪಗೊಂಡಿತ್ತು. ಜೈನಪುರಾಣಗಳು ಅಲ್ಲಿ ಮುನಿಗಳಿಂದ ಬೋಧಿಸಲ್ಪಡುತ್ತಿದ್ದವು. ಜೈನವ್ರತಗಳ ವಿಧಿ-ವಿಧಾನಗಳು ಅಲ್ಲಿಂದ ಹೊಸತಾಗಿ ರೂಪಿತವಾಗುತ್ತಿದ್ದವು. ಪ್ರತಿಯೊಂದು ಹಂತದಲ್ಲಿಯೂ ಕೊಪ್ಪಳ ಜೈನರ ಅಧ್ಯಯನ ಕೇಂದ್ರವಾಗಿ ರೂಪಗೊಂಡಿತ್ತು. ಇಂತಹ ಅಧ್ಯಯನ ಕೇಂದ್ರವನ್ನು ಅತ್ತಿಮಬ್ಬೆಯು ಲಕ್ಕುಂಡಿಯಲ್ಲಿ ಮತ್ತೆ ಮರುಹುಟ್ಟು ಕೊಡಲು ಪ್ರಯತ್ನಿಸಿದಳು. ಲಕ್ಕುಂಡಿಯಲ್ಲಿ ದೊರೆತಿರುವ ಅತ್ತಿಮಬ್ಬೆಯ ಎರಡು ಶಾಸನಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಈ ಅಂಶವು ತಿಳಿದುಬರುತ್ತದೆ. ಅತ್ತಿಮಬ್ಬೆಯ ಕಾಲಕ್ಕೆ

ಕೊಪ್ಪಳ ಪ್ರದೇಶವು ಜೈನ ಕೇಂದ್ರವಾಗಿ ಉಳಿಯುವ ಹಂತದಲ್ಲಿ ಇರಲಿಲ್ಲ. ಏಕೆಂದರೆ ಆ ಹೊತ್ತಿಗೆ ವೈದಿಕ ಮತ್ತು ಬೌದ್ಧ ಧರ್ಮೀಯರು ಅಲ್ಲಿ ತಮ್ಮ ನೆಲಗಳನ್ನು ಹೊಂದಲು ಪ್ರಯತ್ನಪಡುತ್ತಿದ್ದರು. ಕೊಪ್ಪಳವು ಜೈನ ಕೇಂದ್ರವಾಗಿ ಮುಂದುವರೆಯುವ ಯಾವ ಭರವಸೆಗಳೂ ಅತ್ತಿಮಬ್ಬೆಯಲ್ಲಿ ಕಾಣಲ್ಪಡಲಿಲ್ಲ. ಇದರಿಂದಾಗಿ ಈ ಶಾಸನಗಳ ಆಧಾರದಿಂದ ಕೊಪ್ಪಳ ನಗರವು ಜೈನರ ವಿಶ್ವವಿದ್ಯಾಲಯವೇ ಆಗಿದ್ದಿತೆಂದು ಕಲಬುರ್ಗಿಯವರು ಅಭಿಪ್ರಾಯಪಡುತ್ತಾರೆ.

## ೪. ೫. ರಾಷ್ಟ್ರಕೂಟರು

ಕರ್ನಾಟಕವನ್ನು ಆಳಿದ ಇನ್ನೊಂದು ದೊಡ್ಡ ವಂಶ ರಾಷ್ಟ್ರಕೂಟರದು. ಬಾದಾಮಿ ಮತ್ತು ಕಲ್ಯಾಣಿ ಚಾಲುಕ್ಯರ ಮಧ್ಯದಲ್ಲಿ ಸುಮಾರು ೨೨೫ ವರ್ಷಗಳ ದೀರ್ಘ ಕಾಲಾವಧಿಯಲ್ಲಿ ಕರ್ನಾಟಕದ ಸಾರ್ವಭೌಮರಾಗಿ ಆಳ್ವಿಕೆ ನಡೆಸಿದರು. ದೀರ್ಘತೆಯಲ್ಲಿ ಮಾತ್ರವಲ್ಲದೆ, ರಾಜಕೀಯ ಮತ್ತು ಸಾಂಸ್ಕೃತಿಕ ರಂಗದಲ್ಲಿ ಇವರು ಸಾಧಿಸಿದ್ದು ಅಪರಿಮಿತ. ಕೊಪ್ಪಳ ಪ್ರದೇಶವು ಇವರ ರಾಜ್ಯದ ಅಧೀನಕ್ಕೊಳಪಟ್ಟಿತ್ತು ಎಂಬುದು ಮಹತ್ವಪೂರ್ಣ ಸಂಗತಿ. ಕೊಪ್ಪಳದ ಸುಮಾರು ಹಲಾವರು ಶಾಸನಗಳು ರಾಷ್ಟ್ರಕೂಟರ ಮನೆತನವನ್ನು ಅವರ ಆಡಳಿತದ ಕಾರ್ಯವೈಖರಿಗಳನ್ನು ಹೇಳುತ್ತವೆ. ರಾಷ್ಟ್ರಕೂಟರು ಜೈನಧರ್ಮಕ್ಕೆ ಮನ್ನಣೆ ಇತ್ತುದರಿಂದ ಜೈನಧರ್ಮದ ಕೇಂದ್ರವಾದ ಕೊಪ್ಪಳವನ್ನು ವಿಶೇಷವಾಗಿ ಕಾಣುತ್ತಿದ್ದರು ಎಂಬುದು ಗಮನಾರ್ಹ ಅಂಶ.

ರಾಷ್ಟ್ರಕೂಟರ ಮೂಲ ಪುರುಷ ದಂತಿದುರ್ಗ. ಕ್ರಿ.ಶ. ೭ನೇ ಶತಮಾನದಲ್ಲಿ ಎಲಿಚಪುರವನ್ನು ಆಳುತ್ತಿದ್ದ ನನ್ನರಾಜ ವಂಶದವನೆಂದು ಇವನನ್ನು ವಿದ್ವಾಂಸರು ಗುರುತಿಸುತ್ತಾರೆ. ರಾಷ್ಟ್ರಕೂಟರು ರಾಜಪಠಾಣದಲ್ಲಿರುವ ರಾಠ ವಂಶದವರೆಂದು ಫ್ಲೀಟ್ ಅಭಿಪ್ರಾಯಪಡುತ್ತಾರೆ. ಆದರೆ ಆ ರಾಠಾರರ ಅಸ್ತಿತ್ವ ಕಂಡುಬರುವುದು ರಾಷ್ಟ್ರಕೂಟರಿಂದ ಈಚೆಗೆ. ರಾಷ್ಟ್ರಕೂಟರು ಅಚ್ಚ ಕನ್ನಡ ವಂಶದವರೆಂದು ಅವರ ಮನೆಯ ಮಾತು ಕನ್ನಡವಾಗಿತ್ತೆಂದು ಶ್ರೀ. ಆಳ್ತೇಕರರು ಸಾಧಾರವಾಗಿ

ಸಮರ್ಥಿಸಿ ನಿಸ್ಸಂದೇಹವಾದ ನಿರ್ಧಾರಕ್ಕೆ ಬಂದಿದ್ದಾರೆ. ಕರ್ನಾಟಕದ ಹೊರಭಾಗದಲ್ಲಿರುವ ಬುಂದೇಲ ಖಂಡದಲ್ಲಿರುವ ಈ ವಂಶದ ಮೂರನೇ ಕೃಷ್ಣನ ಶಾಸನ ಸಿಕ್ಕಿದೆ. ಅದನ್ನು ಕೃಷ್ಣನು ಕನ್ನಡದಲ್ಲಿ ಬರೆಸಿರುವುದನ್ನು ನೋಡಿದರೆ ಕನ್ನಡವು ಗೌರವಾದರಗಳಿಗೆ ಪಾತ್ರವಾಗಿ ಅವರ ಮಾತೃಭಾಷೆಯಾಗಿತ್ತೆಂಬುದು ಗೊತ್ತಾಗುತ್ತದೆ. ಡಾ. ಶಂಬಾ ಜೋಶಿಯವರು ರಾಷ್ಟ್ರಕೂಟರನ್ನು ರಾಠ್ಠ ವಂಶದವರೆಂದು ಗುರುತಿಸುತ್ತಾರೆ. ರಾಠ್ಠ ಪದವು ಕನ್ನಡ ಪದವಾಗಿದೆ. ಮಹಾರಾಷ್ಟ್ರದ ಬಹುಭಾಗವು ಕನ್ನಡದ ಪ್ರದೇಶವಾಗಿದಿತು. ಈ ಹಿನ್ನೆಲೆಯಲ್ಲಿಯೇ ಮಹಾರಾಷ್ಟ್ರಕ್ಕಿರುವ ಮರಾಠ್ಠ ರಾಷ್ಟವೆಂಬ ಹೆಸರು ಕನ್ನಡದ ಹಿನ್ನೆಲೆಯಲ್ಲಿಯೇ ಹುಟ್ಟಿಕೊಂಡಿದೆ ಎಂಬುದನ್ನು ಅವರು ಮಹಾರಾಷ್ಟ್ರದ ಮೂಲ ಎನ್ನುವ ಪುಸ್ತಕದಲ್ಲಿ ಹೇಳಿದ್ದಾರೆ. ರಾಷ್ಟ್ರಕೂಟರೇ ಇದಕ್ಕೆ ಬಹಳ ಮುಖ್ಯವಾಗಿ ಕಾರಣವಾಗಿರುವರು ಎಂಬುದು ಅವರ ಅಭಿಮತ. ಇಂತಹ ರಾಷ್ಟ್ರಕೂಟರ ಕಾಲಘಟ್ಟದಲ್ಲಿ ಕೊಪ್ಪಳವು ಅವರ ನೇರ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದು ಗಮನಾರ್ಹ ಅಂಶ.

ಕನ್ನಡ ಸಂಸ್ಕೃತಿಯ ಸಂದರ್ಭದಲ್ಲಿ ರಾಷ್ಟ್ರಕೂಟರನ್ನು ನೆನೆಯಲೇಬೇಕು. ಏಕೆಂದರೆ ಕನ್ನಡದ ಏಕಾಕೃತಿಯ ಸಂಸ್ಕೃತಿ ಕಂಡುಬಂದದ್ದು ಅಲ್ಲಿಂದಲೇ. ಕರ್ನಾಟಕದ ಸೀಮೆಯನ್ನು ನಿಖರವಾಗಿ ಹೇಳುವ ಅಂಶವು ರಾಷ್ಟ್ರಕೂಟರ ಮೂಲಕವಾಗಿ ನಮ್ಮ ಗಮನಕ್ಕೆ ಬಂದಿದೆ. ರಾಷ್ಟ್ರಕೂಟರ ರಾಜಮನೆತನ ತನ್ನದೇ ಆದ ಕೊಡುಗೆಯನ್ನು ಕೊಟ್ಟಿದೆ. ಏಕೆಂದರೆ ಅವರ ಕಾಲಘಟ್ಟದಲ್ಲಿ ಬಂದ ಕವಿರಾಜಮಾರ್ಗ ಕೃತಿಯು ಇಡೀ ಕನ್ನಡ ಸಂಸ್ಕೃತಿಗೆ ಹಿಡಿದ ಕನ್ನಡಿಯಾಗಿದೆ. ಕನ್ನಡಕಾವ್ಯ ಅದು ಕ್ರಮಿಸಬೇಕಾದ ಮಾರ್ಗ, ಅದು ನಡೆದುಬಂದ ದಾರಿ ಮುಂತಾದವುಗಳನ್ನು ಬಹಳ ಸ್ಪಷ್ಟವಾಗಿ ನಿರ್ದೇಶಿಸುತ್ತದೆ. ನಾಡಿನ ಸೀಮೆಯನ್ನು ಗುರುತಿಸಿರುವಲ್ಲಿ ಈ ಕೃತಿಯ ಪಾತ್ರ ಬಹಳ ಮಹತ್ವವಾದದ್ದು.

ಕಾವೇರಿಯಿಂದಮಾ ಗೋ
ದಾವರಿವರಮಿರ್ಪ ನಾಡದಾಕನ್ನಡದೊಳ್
ಭಾವಿಸಿದ ಜನಪದಂ ವಸು
ಧಾವಳಯವಿಲೀನ ವಿಶದ ವಿಷಯ ವಿಶೇಷಂ॥

ಕನ್ನಡ ಸಂಸ್ಕೃತಿಯು ಕಾವೇರಿ ನದಿಯಿಂದ ಗೋದಾವರಿ ನದಿಯ ನಡುವಿನ ಭೂ ಪ್ರದೇಶದಲ್ಲಿ ನೆಲೆಗೊಂಡಿದ್ದನ್ನು ಈ ಉಲ್ಲೇಖಗಳಿಂದ ತಿಳಿಯಬಹುದು. ಆದರೆ ಕಾವೇರಿ ನದಿಯಿಂದ ಗೋದಾವರಿ ನದಿಯವರೆಗಿನ ಭೂಮಿಯು ರಾಜಕೀಯವಾಗಿ ತನ್ನ ಗಡಿಯನ್ನಾಗಿ ಮಾಡಿಕೊಂಡಿತ್ತು. ಅಥವಾ ಭಾಷಿಕ ನೆಲೆಯಲ್ಲಿ ಇವೆರಡೂ ಗಡಿಗಳಾಗಿದ್ದವು ಎಂಬುದು ಚರ್ಚೆಯ ವಿಷಯವಾಗಿದೆ. ಏಕೆಂದರೆ ಈಗ ಕನ್ನಡ ನಾಡು ಉತ್ತರದಲ್ಲಿ ಕೃಷ್ಣಾನದಿಗೆ ಸೀಮಿತವಾಗಿದೆ. ಆದರೆ ಮಹಾರಾಷ್ಟ್ರವು ಪ್ರಾಕೃತ ಸಂಸ್ಕೃತಿಯೊಂದರ ಉತ್ತರದ ಹಂತವೆಂದು ತಿಳಿದುಬರುತ್ತದೆ. ಗೋದಾವರಿವರೆಗಿನ ಪ್ರದೇಶದಲ್ಲಿ ಕನ್ನಡವು ಮಾತೃಭಾಷೆಯಾಗಿತ್ತೋ ಅಥವಾ ಪ್ರಾಕೃತದ ಅಪಭ್ರಂಶವಾದ ಮರಾಠಿಯು ಆ ಪ್ರದೇಶದ ಜನರ ಮಾತೃಭಾಷೆಯಾಗಿತ್ತೋ ಅದರ ಬಗೆಗೆ ಉಲ್ಲೇಖಗಳಿಲ್ಲ. ಮಹಾರಾಷ್ಟ್ರದ ಉತ್ತರ ಭಾಗದಲ್ಲೂ ಕೂಡ ಕನ್ನಡದ ಶಾಸನಗಳು ವಿಪುಲವಾಗಿ ದೊರಕುತ್ತವೆ. ಜೊತೆಗೆ ಅವರು ಮಾತನಾಡುವ ಮರಾಠಿಯಲ್ಲಿ ಕನ್ನಡದ ಪದಗಳು ಅನೇಕ ಇವೆ. ಭೌಗೋಳಿಕ ಪ್ರದೇಶಗಳಿಗೆ ಇರುವ ಹೆಸರುಗಳು ಕೂಡ ಕನ್ನಡ ಭಾಷೆಯಲ್ಲಿವೆ. ಆಚರಣೆಯಲ್ಲಿ ಕನ್ನಡದ ನಡೆವಳಿಗಳಿವೆ. ಹೀಗಿರುವುದರಿಂದ ಮರಾಠರ ಕಾಲದಲ್ಲಿ ಗೋದೆಯವರೆಗೂ ಕನ್ನಡ ನಾಡು ಇದ್ದಿತೆನ್ನುವುದು ಅತಿಶಯೋಕ್ತಿಯಲ್ಲ. ಕವಿರಾಜಮಾರ್ಗಕಾರನ ಕನ್ನಡ ಪರಿಸರದಲ್ಲಿ ಕೊಪ್ಪಳವು ತಿರುಳ್ಗನ್ನಡ ಪ್ರದೇಶವೆಂದು ಗುರುತಿಸಲ್ಪಟ್ಟಿತ್ತು. ಆ ಪ್ರದೇಶದ ಕನ್ನಡವು ಅಚ್ಚಕನ್ನಡದ ಪ್ರದೇಶವಾಗಿತ್ತು; ಆ ಕನ್ನಡಕ್ಕೆ ಬೇರೆ ಭಾಷೆಗಳ ಪ್ರಭಾವ ಅಂದು ಆಗಿರಲಿಲ್ಲ. ಅಲ್ಲಿನ ಜನರಾಡುವ ಭಾಷೆ ಗ್ರಾಂಥಿಕ ಶೈಲಿಗೆ ತುಂಬ ಹತ್ತಿರವಾಗಿತ್ತು. ಈ ಕಾರಣದಿಂದ ಕನ್ನಡದ ಮಧ್ಯದ ಭೂಮಿ ಅಥವಾ ಕನ್ನಡದ ತಿರುಳಿರುವ ಪ್ರದೇಶ ಎಂದು ಕೊಪ್ಪಳ ಪ್ರದೇಶವನ್ನು ಗುರುತಿಸುತ್ತಾರೆ. ಕವಿರಾಜಮಾರ್ಗದಲ್ಲಿ ಬರುವ

ಅದರೊಳಗಂ ಕಿಸುವೊಳಲಾ
ವಿದಿತ ಮಹಾ ಕೊಪಣನಗರದಾ ಪುಲಿಗೆರೆಯಾ
ಸದಭಿಸ್ತುತಮಪ್ಪೊಂಕುಂ
ದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್

ಎಂಬ ಉಲ್ಲೇಖದಲ್ಲಿ ಕೊಪ್ಪಳ ಪ್ರದೇಶವನ್ನು ತಿರುಳ್ಗನ್ನಡ ನಾಡೆಂದು ಬಣ್ಣಿಸಿರುವರು. ಇಲ್ಲಿ ಬರುವ ಪುಲಿಗೆರೆ ಗದಗ ಜಿಲ್ಲೆಯ ಲಕ್ಷ್ಮೇಶ್ವರ, ಕಿಸುವೊಳಲು ಬಾಗಲಕೋಟೆ ಜಿಲ್ಲೆಯ ಪಟ್ಟದಕಲ್ಲು, ಒಕ್ಕುಂದವು ಧಾರವಾಡ ಜಿಲ್ಲೆಯ ಒಕ್ಕುಂದವಾಗಿದೆ. ಕನ್ನಡ ಸಂಸ್ಕೃತಿಯ ಬೆಳವಣಿಗೆಯಲ್ಲಿ ಕರ್ನಾಟಕದ ಉತ್ತರ ಭಾಗವು ಬಹಳ ಮಹತ್ವಪೂರ್ಣ ಪಾತ್ರವನ್ನು ವಹಿಸಿದೆ. ರಾಷ್ಟ್ರಕೂಟರ ಕಾಲದಲ್ಲಿ ಇಡೀ ಕನ್ನಡದ ಚಟುವಟಿಕೆಗಳು ಈ ತಿರುಳ್ಗನ್ನಡದ ಪ್ರದೇಶದಲ್ಲಿ ನಡೆಯುತ್ತಿದ್ದವು. ರಾಜಕೀಯ ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಮತ್ತು ಆಡಳಿತಾತ್ಮಕ ಕಟ್ಟುಕಟ್ಟಳೆಗಳು ಇಲ್ಲಿಂದಲೇ ರೂಪಿತವಾಗುತ್ತಿದ್ದವು. ಅದು ಕೊಪ್ಪಳ ಪ್ರದೇಶದಂಥ ನಗರ ಪ್ರದೇಶಗಳಲ್ಲಿ ಇವುಗಳ ಕುರಿತು ಚಿಂತನೆ ಅಲ್ಲಿ ನಡೆಯುತ್ತಿದ್ದಿರಬೇಕು. ಏಕೆಂದರೆ ಮೌರ್ಯರ ಕಾಲದಲ್ಲಿಯೇ ಈ ನಗರವು ಪ್ರಮುಖ ಧಾರ್ಮಿಕ ಮತ್ತು ವಾಣಿಜ್ಯಕೇಂದ್ರವಾಗಿತ್ತೆಂಬುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಗಂಗ ಮತ್ತು ಕದಂಬರ ಕಾಲದಲ್ಲಿಯೂ ಬಹಳ ಮಹತ್ವಪೂರ್ಣವಾದ ಪಾತ್ರವನ್ನು ವಹಿಸಿದ್ದ ಈ ನಗರವು ರಾಷ್ಟ್ರಕೂಟರ ಕಾಲದಲ್ಲಿಯೂ ಕನ್ನಡ ಸಂಸ್ಕೃತಿಯ ನಿರ್ಮಾಣದಲ್ಲಿ ಒಂದು ಮೈಲಿಗಲ್ಲಾಗುವಂಥ ಪಾತ್ರವನ್ನು ವಹಿಸಿವೆ. ಏಕೆಂದರೆ ರಾಷ್ಟ್ರಕೂಟರ ಸಾಮಂತರು ಹಲವರು. ಅದರಲ್ಲಿ ಕಲ್ಯಾಣದ ಚಾಲುಕ್ಯರು, ಗಂಗರು ಮುಂತಾದವರು ಮುಖ್ಯರು. ಅವರ ಕಾಲದಲ್ಲಿ ಕನ್ನಡ ಸಂಸ್ಕೃತಿಯು ವಿಭಿನ್ನ ಆಯಾಮಗಳನ್ನು ಪಡೆದುಕೊಂಡಿದೆ. ಸಧ್ಯಕ್ಕೆ ಕನ್ನಡ ಸಾಹಿತ್ಯದ ಚರಿತ್ರೆ ಆರಂಭವಾಗುವುದು ಈ ಕವಿರಾಜಮಾರ್ಗದ ಕಾಲಘಟ್ಟದಿಂದಲೇ. ಏಕೆಂದರೆ ಕನ್ನಡದ ಜನತೆ ಸಹಜವಾಗಿ ಕಾವ್ಯ ಪ್ರಯೋಗವನ್ನು ಮಾಡಬಲ್ಲರು ಎಂಬ ವಿಶ್ವಾಸ ಅವನಿಗೆ ಬಂದಿದೆ.

ಪದನರಿದು ನುಡಿಯಲುಂ ನುಡಿ
ದುದಾರಯಲು ಮಾರ್ಪರಾನಾಡವರ್ಗಳ್
ಚದುರರ್ ನಿಜದಿಂ ಕುರಿ
ತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್॥

ಎಂಬ ಉಲ್ಲೇಖಗಳಿಂದ ಕನ್ನಡದ ಜನತೆ ಚತುರರು ಮಾತ್ರವಲ್ಲ ಕುರಿತೋದದೆಯೇ ಕಾವ್ಯಪ್ರಯೋಗವನ್ನು ನಡೆಸಬಲ್ಲಂಥಹವರು. ರಾಷ್ಟ್ರಕೂಟರ ಸಾಮಂತರಾದ ಗಂಗ, ಚಾಲುಕ್ಯರು ಸಾಮಂತರಾಗಿದ್ದುಕೊಂಡೇ ಕಾವ್ಯಶೀಲತೆಗೆ, ಸಂಸ್ಕೃತಿಶೀಲತೆಗೆ ಸ್ಪಂದಿಸಿದ್ದರೆನ್ನುವುದು ಮಹತ್ವದ ಅಂಶ.

ಈ ಹಿನ್ನೆಲೆಯಲ್ಲಿಯೇ ಕೊಪ್ಪಳವು ಚರಿತ್ರೆಯಲ್ಲಿ ಒಂದು ಸಾಂಸ್ಕೃತಿಕ ನಗರವಾಗಿ ಎದ್ದುಕಾಣುತ್ತಿದೆ. ಕೊಪ್ಪಳದಲ್ಲಿ ದೊರೆತಿರುವ ರಾಷ್ಟ್ರಕೂಟರ ಅರಸು ನೃಪತುಂಗನ ಒಂದು ಶಾಸನದ ಪಾಠವು ಹೀಗಿದೆ:

೧. ಸ್ವಸ್ತಿ ಶ್ರೀ ನೃಪತುಂಗವಲ್ಲ (ಭ)....................

೨. ಧ್ವಸ್ತಾರಾತಿ, ನರೇಂನ್ದ್ರನಾಳೆ ನೆಲನಂ ಶ್ರೀ (ಜ) ..........

೩. ಪ್ರಸ್ತರಾತಿ ದಲಿದೆನ್ದು ತಳ್ತಿರುದು ಮತ್ತನ್ನಾಜ...........

೪. ಪ್ರಸ್ತುತ್ಯಂ ಪಡೆದಂ ಸುರೇಂನ್ದ್ರ ಸುಖಮಂ ವೀರೋ......

೫. .................. ರು ಗುಣಾಘನಪ್ಪ (ಪಡೆ ವೀಲೀತ?)

೬. ................. (ಮಂ) ಪದನದೊಳುರವಾಳೊ (?)......

೭. ...........................................................

ಈ ಶಾಸನವು ತೃಟಿತವಾಗಿದ್ದು ಇದರ ಪೂರ್ಣ ಪಾಠವು ದೊರೆಯುತ್ತಿಲ್ಲ. ಅದೇನೇ ಇದ್ದರೂ ಕೊಪ್ಪಳವು ಅಮೋಘವರ್ಷ ನೃಪತುಂಗನ ಕಾಲದಲ್ಲಿ ಕನ್ನಡ ಸಂಸ್ಕೃತಿಯ ಪ್ರಮುಖ ಕೇಂದ್ರವಾಗಿತ್ತೆಂಬುದನ್ನು ಈ ರೀತಿಯಾಗಿ ಹೇಳಬಹುದು.

### ೪. ೬. ಚಾಲುಕ್ಯರು

ಚಾಲುಕ್ಯ ಸಾಮ್ರಾಜ್ಯವು ಮೂರು ಹಂತದಲ್ಲಿ ಕನ್ನಡ ಸಂಸ್ಕೃತಿಯ ಪ್ರಧಾನ ಧಾರೆಯಲ್ಲಿ ಚರಿತ್ರೆಯಲ್ಲಿ ಚರ್ಚಿಸಿಕೊಳ್ಳುತ್ತದೆ. ಮೊದಲನೆಯ ಹಂತವೆಂದರೆ, ಬಾದಾಮಿ ಚಾಲುಕ್ಯರು. (ಇವರನ್ನು

ಪೂರ್ವ ಚಾಲುಕ್ಯರೆಂದು ಕರೆಯುತ್ತಾರೆ) ಅನಂತರ ಕಲ್ಯಾಣದ ಚಾಲುಕ್ಯರು ಪ್ರಧಾನಧಾರೆಗೆ ಬಂದು ಚರ್ಚಿಸಿಕೊಳ್ಳುತ್ತಾರೆ. ಮೂರನೆಯ ಹಂತವೆಂದರೆ ಅಷ್ಟೇನೂ ಮಹತ್ವವಿಲ್ಲದಿದ್ದರೂ ಆಂಧ್ರದ ಚರಿತ್ರೆಯಲ್ಲಿ ಎದ್ದುಕಾಣುವ ವೆಂಗಿಯ ಚಾಲುಕ್ಯರು ಕನ್ನಡದ ಸಂಸ್ಕೃತಿಯ ಸಂದರ್ಭದಲ್ಲಿ ಉಲ್ಲೇಖಿಸಿಕೊಳ್ಳುತ್ತಾರೆ. ಒಂದನೇ ಪುಲಕೇಶಿಯು (ಕ್ರಿ.ಶ. ೫೦೦) ಸ್ವತಂತ್ರವಾದ ಚಾಲುಕ್ಯ ಸಾಮ್ರಾಜ್ಯಕ್ಕೆ ಭದ್ರವಾದ ಬುನಾದಿಯನ್ನು ಹಾಕಿದನು. ಈತನಿಗೆ ಸತ್ಯಾಶ್ರಯ, ರಣವಿಕ್ರಮ, ಮೊದಲಾದ ಬಿರುದುಗಳಿದ್ದವು. ಈತನ ರಾಜಧಾನಿಯು ಮೊದಲು ಇಂದ್ರಕಾಂತ ಅಥವಾ ಅಜಂತ ಎಂದು ತಿಳಿದುಬರುತ್ತದೆ. ಪಲ್ಲವರನ್ನು ಸೋಲಿಸಿ ತನ್ನ ರಾಜ್ಯವನ್ನು ವಿಸ್ತರಿಸಿದ ಮೇಲೆ ವಾತಾಪಿ ಅಥವಾ ಬಾದಾಮಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಅಶ್ವಮೇಧ ಯಾಗವನ್ನು ಮಾಡಿ ಸಾರ್ವಭೌಮತ್ವವನ್ನು ಪ್ರಕಟಿಸಿದ ಹಿರಿಮೆ ಈತನದು. ಇವನ ತರುವಾಯದಲ್ಲಿ ಬಂದ ಮಂಗಳೇಶನು ಎರಡನೆಯ ಪುಲಕೇಶಿಗೆ ಸಾಮ್ರಾಜ್ಯವನ್ನು ಬಿಟ್ಟುಕೊಡದೆ ಸಂಘರ್ಷಕ್ಕಿಳಿದನು. ಎರಡನೆಯ ಪುಲಿಕೇಶಿಯು ಮಂಗಳೇಶನನ್ನು ಸಂಪೂರ್ಣವಾಗಿ ಹತ್ತಿಕ್ಕಿ ತಾನು ಪಟ್ಟವನ್ನು ವಹಿಸಿಕೊಂಡನು. ಅಷ್ಟೇ ಅಲ್ಲ ಈ ಸಂದರ್ಭವೂ ಕನ್ನಡ ಸಂಸ್ಕೃತಿಗೆ ಒಂದು ಮೆರುಗು ನೀಡಿತು. ಎರಡನೆಯ ಪುಲಕೇಶಿಯ ಕಾಲವು ಕನ್ನಡ ಸಂಸ್ಕೃತಿಯ ಚರಿತ್ರೆಯಲ್ಲಿ ಚಿರಸ್ಮರಣೀಯವಾದ ಯುಗ. ಅವನ ತೇಜಸ್ಸಿನ ಪ್ರಖರತೆ ಉತ್ತರ ಪಥೇಶ್ವರನೆಂಬ ಶ್ರೀಹರ್ಷನನ್ನು ತಾಗಿತು. ಉತ್ತರ ಸಾಮ್ರಾಟನಾದ ಹರ್ಷವರ್ಧನ್ನು ಸೋಲಿಸಿ ಸತ್ಯಾಶ್ರಯ ಬಿರುದಾಂಕಿತನೂ ದಕ್ಷಿಣ ಪಥೇಶ್ವರನೂ ಆದುದು ಪುಲಕೇಶಿಯ ರಾಜಕೀಯ ಜೀವನದ ಬಹುದೊಡ್ಡ ಸಾಧನೆಯೇ ಸರಿ. ಗೋದಾವರಿಯ ದಕ್ಷಿಣಕ್ಕಿರುವ ಭರತಖಂಡವೆಲ್ಲಾ ಈತನ ಆಳ್ವಿಕೆಗೆ ಒಳಪಟ್ಟಿತ್ತು. ದಕ್ಷಿಣ ದೇಶದ ಎಲ್ಲಾ ರಾಜರುಗಳು ಈತನ ಸಾರ್ವಭೌಮತ್ವಕ್ಕೆ ಶರಣಾಗಿದ್ದರು. ಐಹೊಳೆಯ ಶಿಲಾಶಾಸನದಿಂದಲೂ ಮತ್ತು ಆತನರಾಜ್ಯದಲ್ಲಿ ಪ್ರವಾಸವನ್ನು ಕೈಗೊಂಡಿದ್ದ ಚೀನಾ ದೇಶದ ಯಾತ್ರಿಕ ಹ್ಯೂಯೆನ್‌ತ್ಸಾಂಗ್ ಬರವಣಿಗೆಗಳಿಂದಲೂ ಈ ಅಂಶ ಸ್ಪಷ್ಟವಾಗುತ್ತದೆ. ಐಹೊಳೆಯ ಶಿಲಾಶಾಸನವು ಪುಲಕೇಶಿಯ ವೀರ ಜೀವನಕ್ಕೆ ಉಜ್ವಲವಾದ ಸಾಕ್ಷಿಯನ್ನು ನುಡಿಯುತ್ತದೆ. ಈ ಶಾಸನದ ಕರ್ತೃ ರವಿಕೀರ್ತಿ. ಈ ಶಾಸನದಲ್ಲಿ ಹೇಳಿದ ಚಾಲುಕ್ಯ ಸಾಮ್ರಾಜ್ಯದ ಗಡಿಗಳೊಳಗೆ ಕೊಪ್ಪಳವೂ

ಸೇರಿಕೊಂಡಿದೆ. ಬಾದಾಮಿಗೆ ಅನತಿ ದೂರದಲ್ಲಿರುವ ಕೊಪ್ಪಳ ಪ್ರದೇಶ ಚಾಲುಕ್ಯರ ಕಾಲದಲ್ಲೂ ಮಹತ್ವದ ಧಾರ್ಮಿಕ ಕೇಂದ್ರವಾಗಿತ್ತು ಎಂಬುದನ್ನು ಮರೆಯುವಂತಿಲ್ಲ. ಏಕೆಂದರೆ ಕೊಪ್ಪಳದಲ್ಲಿ ಜಿನಮುನಿಗಳು ನೆಲೆಸಿದ್ದರು. ಬೇರೆಬೇರೆ ಪ್ರದೇಶದಲ್ಲಿ ಇದ್ದ ಸರವಣರು ಪವಿತ್ರ ಕೊಪಣಾದ್ರಿಗೆ ಭೇಟಿ ನೀಡುತ್ತಿದ್ದರು. ಚಾಲುಕ್ಯರ ಕಾಲದಲ್ಲಿ ಜೈನಧರ್ಮ ರಾಜಮನ್ನಣೆಯನ್ನು ಪಡೆದುಕೊಂಡಿತ್ತು. ಜೈನ ಕವಿಗಳು ಜೈನ ಬ್ರಾಹ್ಮಣರು ಸಾಂಸ್ಕೃತಿಕ ಕಟ್ಟಾಳುಗಳಾಗಿ ನಾಡಿಗಾಗಿ ಮತ್ತು ಧರ್ಮಕಾರಣಕ್ಕಾಗಿ ದುಡಿಯುತ್ತಿದ್ದರು. ಕನ್ನಡ ಸಂಸ್ಕೃತಿಗೆ ತನ್ಮೂಲಕ ತಮ್ಮದೇ ಆದ ಕಾಣಿಕೆಯನ್ನು ನೀಡಿದರು. ಕೊಪ್ಪಳ ಪ್ರದೇಶದಲ್ಲಿ ಬಾದಾಮಿ ಚಾಲುಕ್ಯರ ಶಿಲಾಶಾಸನಗಳು ಹೆಚ್ಚು ಕಂಡುಬರುತ್ತವೆ.

ಒಂದನೆಯ ಪುಲಕೇಶಿಯು ಬಾದಾಮಿಯ ಗುಡ್ಡದ ಮೇಲೆ ಕಟ್ಟಿಸಿದ ಕಲ್ಲಿನ ಕೋಟೆ ಮತ್ತು ಕೊಪ್ಪಳದ ಕೋಟೆಗೆ ಸಾಮ್ಯತೆಯಿದೆ ಎಂಬುದನ್ನು ವಿದ್ವಾಂಸರು ಗುರುತಿಸಿದ್ದಾರೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ವಿವರಿಸಿರುವಂತೆ ಗಿರಿದುರ್ಗಗಳ ನಿರ್ಮಾಣ ನಡೆದಿರುವುದು ವಿಶೇಷ. ಈ ಗಿರಿದುರ್ಗಗಳು ಹೆಚ್ಚು ಸುರಕ್ಷಿತವಾಗಿರುತ್ತವೆ. ಹಾಗೆಯೇ ಕೋಟೆ ಕಟ್ಟಿದ ಗಿರಿಗಳು ವಿಶಾಲವಾಗಿರುತ್ತವೆ. ಮಹಾದ್ವಾರ ಇಕ್ಕಟ್ಟಾಗಿರುತ್ತದೆ. ವೈರಿಗಳು ಸುಲಭವಾಗಿ ಕೋಟೆಯನ್ನು ಪ್ರವೇಶಿಸಲು ಸಾಧ್ಯವಾಗದು. ಕರ್ನಾಟಕದ ಸಂಸ್ಕೃತಿಯ ಸಂದರ್ಭದಲ್ಲಿ ಒಂದನೆಯ ಪುಲಕೇಶಿಯು ನಿರ್ಮಿಸಿದ ಈ ಗಿರಿದುರ್ಗ ಮೊಟ್ಟಮೊದಲನೆಯದು. ಉಳಿದ ಕಡೆಗಳಲ್ಲಿ ಗಿರಿದುರ್ಗಗಳನ್ನು ನಿರ್ಮಿಸಲು ಇದು ಚರಿತ್ರೆಯಾದ್ಯಂತ ಸ್ಫೂರ್ತಿ ನೀಡಿದೆ. ಕೊಪ್ಪಳ ಮತ್ತು ಕೊಪ್ಪಳ ಪ್ರದೇಶದಲ್ಲಿ ಈ ಗಿರಿದುರ್ಗಗಳನ್ನು ಹೆಚ್ಚಾಗಿ ಕಾಣಬಹುದು. ಅವುಗಳಲ್ಲಿ ಕೊಪ್ಪಳದ ಗಿರಿದುರ್ಗ, ಬಹದ್ದೂರ್ ಬಂಡೆಯ ಗಿರಿದುರ್ಗ, ಇರಕಲ್‌ಗಡದ ಗಿರಿದುರ್ಗ, ಕಮ್ಮತ್ ಗುಡ್ಡದ ಗಿರಿದುರ್ಗಗಳನ್ನು ಮುಖ್ಯವಾಗಿ ಹೆಸರಿಸಬಹುದು. ಆದರೂ ಎಣಿಕೆಗೆ ನಿಲುಕದಷ್ಟು ಗಿರಿಕೋಟೆಗಳು ಕನ್ನಡದ ಸಂದರ್ಭದಲ್ಲಿ ದೊರಕುತ್ತವೆ. ಈ ವಂಶದ ಎರಡನೆಯ ಪುಲಕೇಶಿ ದಕ್ಷಿಣ ಭಾರತದ ಎಲ್ಲಾ ರಾಜ್ಯಗಳನ್ನು ಗೆದ್ದು ದಕ್ಷಿಣ ಪಥೇಶ್ವರ ಎಂಬ ಬಿರುದನ್ನು ಹೊಂದಿದನು. ಇವನ ನಂತರದ ಕಾಲಘಟ್ಟಗಳಲ್ಲಿ ವಿನಯಾದಿತ್ಯನ ಪುತ್ರ ವಿಜಯಾದಿತ್ಯನು ಕ್ರಿ.ಶ.

೬೯೬ರಲ್ಲಿ ಪಟ್ಟಕ್ಕೇರಿದನು ಎಂಬ ಅಂಶವನ್ನು ಕೊಪ್ಪಳದ ಒಂದು ಶಾಸನ ತಿಳಿಸುತ್ತದೆ. ವಿಜಯಾದಿತ್ಯನ ಆಸ್ಥಾನದಲ್ಲಿ ಆಡಳಿತಾತ್ಮಕ ದೃಷ್ಟಿಯಿಂದ ಕೊಪ್ಪಳವನ್ನು ಒಂದು ವಿಭಾಗವಾಗಿ ಗುರುತಿಸಲಾಗಿತ್ತು. ಅಲ್ಲಿ ಓರ್ವ ಮಂತ್ರಿಯು ಕೊಪ್ಪಳದ ರಾಜ್ಯಪಾಲನಾಗಿದ್ದನು. ಗರೋಜ ಎನ್ನುವವನು ಕೊಪ್ಪಳದ ಉಸ್ತುವಾರಿಯನ್ನು ನೋಡಿಕೊಳ್ಳಲು ನೇಮಕವಾಗಿದ್ದನು. ಅಲ್ಲದೆ ಇವನು ವಿಜಯಾದಿತ್ಯನ ಮಂತ್ರಿಮಂಡಲದಲ್ಲಿ ಹಣಕಾಸಿನ ಮಂತ್ರಿಯಾಗಿದ್ದನು. ಇಂದಿನ ಕೊಪ್ಪಳ ಜಿಲ್ಲೆಯ ಹಲಗೇರಿ ಗ್ರಾಮದ ಶಾಸನವು ಈ ವಿಷಯವನ್ನು ತಿಳಿಸುತ್ತದೆ.

೧. ಸ್ವಸ್ತಿ ಶ್ರೀ ವಿಜಯಾದಿತ್ಯ ಸತ್ಯಾ

೨. ಶ್ರಯ ಶ್ರೀ ಪೃಥಿವೀವಲ್ಲಭ ಮ

೩. ಹಾರಾಜಾಧಿರಾಜ ಪರಮೇಶ್ವರ

೪. ಭಟಾರಕ ಪೃಥಿವೀ ರಾಜ್ಯದನ್ದು ಕೊಪ

೫. ಣದಾ ಮೂ(?) ರುಪತಿಯುಂ ಗುತ್ತಿಯೊಡೆಯನುಂ

೬. ಗರೋಜನುಂ ಕರಣಮಾಗೆ ಮದೆವೆಳೆರೆ

ಹೀಗೆ ಬಾದಾಮಿ ಚಾಲುಕ್ಯರ ಸಂದರ್ಭದಲ್ಲಿ ಕೊಪ್ಪಳವು ಪರ್ಯಾಯ ರಾಜಧಾನಿಯಾಗಿತ್ತು. ರಾಜಕೀಯ, ಧಾರ್ಮಿಕ, ವಾಣಿಜ್ಯಕ ಕೇಂದ್ರ ಶಕ್ತಿಯಾಗಿ ಕೊಪ್ಪಳವು ಕಂಡು ಬರುತ್ತದೆ. ಈ ಪ್ರದೇಶವು ರಾಷ್ಟ್ರಕೂಟರ ಕೈವಶವಾಯಿತು.

## ಕಲ್ಯಾಣಿ ಚಾಲುಕ್ಯರು

ಮುಂದೆ ಎರಡು ಶತಮಾನಗಳ ನಂತರ ೮ನೆಯ ಶತಮಾನದಲ್ಲಿ ತಾತ್ಕಾಲಿಕವಾಗಿ ಅಡಗಿದ್ದ ಚಾಲುಕ್ಯ ವಂಶವು ಕರ್ನಾಟಕದಲ್ಲಿ ಮತ್ತೆ ಸಾಮ್ರಾಜ್ಯವನ್ನು ನಿರ್ಮಾಣಮಾಡಿತು. ರಾಷ್ಟ್ರಕೂಟರ ಕಾಲದಲ್ಲಿ ಚಾಲುಕ್ಯರು ಅಲ್ಲಿ ಇಲ್ಲಿ ಸಾಮಂತರಾಗಿ ಉಳಿದುಕೊಂಡಿದ್ದರು. ಈ ಬಗೆಗೆ ಅನೇಕ ಶಾಸನಗಳ

ಉಲ್ಲೇಖವಿದೆ. ಕೊಪ್ಪಳದಲ್ಲಿಯೂ ರಾಷ್ಟ್ರಕೂಟರ ಸಾಮಂತರಾದ ರಾಜರ ಚರಿತ್ರೆಗಳು ಅಲ್ಲಿನ ಶಾಸನಗಳಲ್ಲಿ ದೊರೆಯುತ್ತವೆ. ಕನ್ನಡದ ಆದಿಕವಿ ಪಂಪ ೧೦ನೇ ಶತಮಾನದಲ್ಲಿ ಚಾಲುಕ್ಯ ಸಾಮಂತ ಎರಡನೇ ಅರಿಕೇಸರಿಯ ಆಸ್ಥಾನದಲ್ಲಿದ್ದ. ಆತನ ವಂಶವೃಕ್ಷವನ್ನು ಪಂಪ ಹೀಗೆ ಹೇಳಿದ್ದಾನೆ. ಯುದ್ಧ ಮಲ್ಲನ ಮಗ ಒಂದನೇ ಕೇಸರಿ ಅಲ್ಲಿಂದ ಒಂದನೇ ನರಸಿಂಹ ಒಂದನೇ ದುಗ್ದಮಲ್ಲ, ಬದ್ದೆಗ, ಎರಡನೇ ದುಗ್ದಮಲ್ಲ ಆಗಿಹೋಗಿರುವರೆಂದು ಪಂಪನು ತಿಳಿಸುತ್ತಾನೆ. ಅನಂತರ ಬಂದವನು ಎರಡನೆಯ ನರಸಿಂಹ. ಅವನ ಹೆಂಡತಿ ಜಾಕವ್ವೆ. ಇವರ ಮಗನೇ ಎರಡನೆಯ ಅರಿಕೇಸರಿ. ಇವನು ಪಂಪನಿಗೆ ಆಶ್ರಯದಾತನಾಗಿದ್ದನು. ಪಂಪನ ಅಣ್ಣಿಗೆರೆಯು ಕೊಪ್ಪಳ ಪ್ರದೇಶಕ್ಕೆ ಅನತಿ ದೂರದಲ್ಲಿದೆ. ಇದೇ ಸಂದರ್ಭದಲ್ಲಿ ಕಾಣಿಸಿಕೊಂಡ ಮತ್ತೊಬ್ಬ ಕನ್ನಡದ ರತ್ನ ರನ್ನನು ಕೊಪ್ಪಳದ ಬಗ್ಗೆ ವಿಪುಲವಾದ ಮಾಹಿತಿಯನ್ನೇ ನೀಡುತ್ತಾನೆ. ಕಲ್ಯಾಣಿ ಚಾಲುಕ್ಯರ ಸಂದರ್ಭದಲ್ಲಿ ಅನೇಕ ಶಾಸನಗಳು ಪಂಪನ ರನ್ನನ ಬಗ್ಗೆ ಹಾಗೆಯೇ ಕೊಪ್ಪಳದ ಬಗೆಗೆ ಮಾಹಿತಿಗಳನ್ನು ನೀಡುತ್ತವೆ. ಬಾದಾಮಿ ಚಾಲುಕ್ಯರ ರಾಜ ಎರಡನೇ ವಿಕ್ರಮಾದಿತ್ಯನಿಗೆ ಭೀಮನೆಂಬ ತಮ್ಮನಿದ್ದನೆಂದು, ಅವನ ವಂಶಜ ಕಲ್ಯಾಣದ ಚಾಲುಕ್ಯ ಶಾಖೆಯ ಸ್ಥಾಪನೆಗೆ ಕಾರಣನಾದ ಎರಡನೆಯ ತೈಲಪನೆಂದು ತಿಳಿದುಬರುತ್ತದೆ. ಇವರ ವಂಶವೃಕ್ಷ ಕೊಪ್ಪಳದ ಒಂದು ಶಾಸನದಂತೆ ಹೀಗಿದೆ:

ಒಂದನೇ ಭೀಮ
|
ಮೂರನೇ ಕೀರ್ತಿವರ್ಮ
|
ಒಂದನೇ ತೈಲಪ
|
ಎರಡನೇ ವಿಕ್ರಮಾದಿತ್ಯ
|
ಎರಡನೇ ಭೀಮ
|
ಅಯ್ಯಣ
|
ನಾಲ್ಕನೇ ವಿಕ್ರಮಾದಿತ್ಯ

ಇವನ ಮಗನೇ ಎರಡನೇ ತೈಲಪ. ರಾಷ್ಟ್ರಕೂಟರ ಎರಡನೇ ಕರ್ಕನನ್ನು ಸೋಲಿಸಿ ರಾಜ್ಯಸ್ಥಾಪನೆ ಮಾಡಿದನು. ರಾಷ್ಟ್ರಕೂಟರ ಸುವರ್ಣಯುಗದ ಸುಮಾರು ೨೨೦ ವರ್ಷಗಳ ತರುವಾಯ ಚಾಲುಕ್ಯ ವಂಶ ಮತ್ತೆ ತನ್ನ ಸಾಂಸ್ಕೃತಿಕ ರಾಜ್ಯವನ್ನು ನಿರ್ಮಾಣಮಾಡಿತು. ಎರಡನೆಯ ತೈಲಪನ ನೇತೃತ್ವದಲ್ಲಿ ಅಧಿಕಾರಕ್ಕೆ ಬಂದ ಈ ಚಾಲುಕ್ಯ ವಂಶವು ಕಲ್ಯಾಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡದ್ದರಿಂದ ಈ ಚಾಲುಕ್ಯರಿಗೆ ಕಲ್ಯಾಣಿ ಚಾಲುಕ್ಯರು ಎಂದು ಹೆಸರು ಪ್ರಾಪ್ತವಾಗಿದೆ.

ತೈಲಪನು ಸುಮಾರು ೨೦ವರ್ಷಗಳ ಕಾಲ ಆಳಿದನು. ಆತನಿಗೂ ಮತ್ತು ಆತನ ರಾಣಿಯಾದ ಜಾಕಬ್ಬೆಗೂ ಸತ್ಯಾಶ್ರಯ ಮತ್ತು ದಾಸವರ್ಮ ಎಂಬ ಇಬ್ಬರುಮಕ್ಕಳಿದ್ದರು. ತೈಲಪನ ಅನಂತರ ಸತ್ಯಾಶ್ರಯನು ಪಟ್ಟಾಭಿಷಿಕ್ತನಾದನು. ತೈಲಪನ ಆಸ್ಥಾನವನ್ನು ಅಲಂಕರಿಸಿದ ರನ್ನ ಮಹಾಕವಿ ಈ ಸತ್ಯಾಶ್ರಯನನ್ನೇ ಹೊಗಳಿ ಒಂದು ಕಾವ್ಯವನ್ನೇ ಬರೆದನು. ಅದನ್ನು ಸಾಹಸಭೀಮವಿಜಯ ಎಂದು ಕರೆದನು. ಚಾವುಂಡರಾಯನ ನಂತರ ಅಲ್ಲಿಂದ ಬಂದು ತೈಲಪನ ಬಳಿಯಲ್ಲಿ ರನ್ನ ಆಶ್ರಯವನ್ನು ಪಡೆದುಕೊಂಡು ತೈಲಪ ಮತ್ತು ಸತ್ಯಾಶ್ರಯರ ಹೆಸರನ್ನು ಚಿರಸ್ಥಾಯಿಯನ್ನಾಗಿ ಮಾಡಿದನು. ಕಲ್ಯಾಣಿ ಚಾಲುಕ್ಯರ ಸಾಮ್ರಾಜ್ಯದ ಸ್ಥಾಪನೆಗೆ ಸಂಬಂಧಿಸಿದಂತೆ ತಮ್ಮ ಸಾಮಂತರಾಗಿದ್ದ ಕದಂಬರ ಅರಸರು ಚಾಲುಕ್ಯರ ತೈಲಪನ ಜಯಕ್ಕೆ ಕಾರಣರಾಗಿರುವರು ಎಂಬ ಅಂಶವನ್ನು ಕೋಟೆಯೊಳಗಿರುವ ಮಿಟ್ಟಕೆರಿ ಜಾಮಿಯಾ ಮಸ್‌ಜಿದ್ ಪ್ರಾಂಗಣದಲ್ಲಿರುವ ಶಾಸನವು ನಿಖರವಾಗಿ ಹೇಳುತ್ತದೆ. ಆರನೆಯ ವಿಕ್ರಮಾದಿತ್ಯ ಶಾಸನಗಳು ಕೊಪ್ಪಳ ಪ್ರದೇಶದಲ್ಲಿ ಸುಮಾರು ೭-೮ ಶಾಸನಗಳು ಸಿಗುತ್ತವೆ. ಆರನೆಯ ವಿಕ್ರಮಾದಿತ್ಯನು ಚಾಲುಕ್ಯ ವಂಶದಲ್ಲೆಲ್ಲಾ ಅತ್ಯಂತ ದಕ್ಷನಾದವನು. ತ್ರಿಭುವನಮಲ್ಲ ಎಂಬ ಬಿರುದು ಇವನಿಗಿತ್ತು. ತಾನು ರಾಜನಾದ ಕೂಡಲೆ ಒಂದು ಹೊಸ ಶಕೆಯನ್ನೇ ಈತ ಪ್ರಾರಂಭಿಸಿದನು. ವಿಕ್ರಮಶಕೆ ಎಂದು ಅದು ಪ್ರಸಿದ್ಧವಾಯಿತು ಎಂದು ಸಂಸ್ಕೃತಿಅಧ್ಯಯನ ಮಾಡುವವರು ಗುರುತಿಸುತ್ತಾರೆ. ರಾಜಕೀಯ, ಸಾಹಿತ್ಯ, ಸಂಸ್ಕೃತಿ ಮೊದಲಾದ ಎಲ್ಲಾ ರಂಗಗಳಲ್ಲಿಯೂ ಕರ್ನಾಟಕದ ಹಿರಿಮೆಯನ್ನು ಮತ್ತೊಮ್ಮೆ ಅಖಿಲ ಭಾರತದ ಮಟ್ಟಕ್ಕೆ ಏರಿಸಿದ ದೊರೆ ಈ ಆರನೆಯ ವಿಕ್ರಮಾದಿತ್ಯ. ಇಡೀ ದಕ್ಷಿಣ

ಭಾರತದಲ್ಲೆಲ್ಲಾ ಏಕೈಕ ಚಕ್ರವರ್ತಿಯಾಗಿ ಮೆರೆದ ಸಾಹಸಿಯಾಗಿರುವನು. ಚೋಳರನ್ನು ಅನೇಕ ಬಾರಿ ಸೋಲಿಸಿ ಕಾಂಚಿವರೆಗೆ ನುಗ್ಗಿದ. ಮಾಳವದ ದೊರೆಗೆ ಸಹಾಯ ಮಾಡಿ ಅವನಿಗೆ ರಾಜ್ಯವನ್ನು ಸಂಪಾದಿಸಿಕೊಟ್ಟ. ಉತ್ತರದಲ್ಲಿ ಬಂಗಾಳ, ಅಸ್ಸಾಂ ನೇಪಾಳದವರೆಗೂ, ದಕ್ಷಿಣದಲ್ಲಿ ಸಿಂಹಳ ದ್ವೀಪದವರೆಗೂ ಈತನ ದಿಗ್ವಿಜಯ ಯಾತ್ರೆ ಬೆಳೆದಿತ್ತು. ಇವನ ಕೀರ್ತಿಯನ್ನು ಕೇಳಿ ಕಾಶ್ಮೀರದ ಕವಿ ಬಿಲ್ಹಣನು ಇವನ ಆಸ್ಥಾನಕ್ಕೆ ಬಂದು ನೆಲೆಸಿದ್ದನು. ಅವನು ಸಂಸ್ಕೃತದಲ್ಲಿ ಬರೆದ ವಿಕ್ರಮಾಂಕದೇವ ಚರಿತೆ ಎಂಬ ಐತಿಹಾಸಿಕ ಕಾವ್ಯ ಆರನೆಯ ವಿಕ್ರಮಾದಿತ್ಯನ ಬಗೆಗೆ ಹೆಚ್ಚು ವಿವರಗಳನ್ನು ಕೊಡುತ್ತದೆ. ಅಲ್ಲಿ ಬರುವ ವಿಕ್ರಮನ ಮತ್ತು ಆತನ ರಾಜ್ಯದ ವರ್ಣನೆಯನ್ನು ನೋಡಿದರೆ ಕರ್ನಾಟಕ ಆತನ ಕಾಲದಲ್ಲಿ ಅದೆಂಥಹ ವೈಭವದ ಶಿಖರವನ್ನೇರಿತ್ತೆಂಬುದು ಮನದಟ್ಟಾಗುತ್ತದೆ. ವಿಕ್ರಮನ ದಂಡನಾಯಕನಲ್ಲಿ ಒಬ್ಬನಾದ ಕೊಂಡಗುಳಿ ಕೇಶಿರಾಜನನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬೇಕು. ಕೊಪ್ಪಳಕ್ಕೆ ಹತ್ತಿರವಿರುವ ಸಿಂಧಗಿಗೆ ಸಮೀಪದಲ್ಲಿರುವ ಕೊಂಡಗುಳಿ ಈತನ ಸ್ಥಳ. ಈತ ಮಹಾಭಕ್ತನಾಗಿದ್ದುದಲ್ಲದೆ ಸೂಕ್ಷ್ಮಗ್ರಾಹಿಯೂ ದಕ್ಷನೂ ವಿಚಕ್ಷಣನೂ ನಿಸ್ಪೃಹನೂ ಆಗಿದ್ದುದನ್ನು ಕಂಡುಕೊಂಡು ದಂಡನಾಯಕನನ್ನಾಗಿ ವಿಕ್ರಮ ಈತನನ್ನು ನೇಮಿಸಿಕೊಂಡನೆಂದು ಸಿಂಧಗಿ ಶಾಸನದಿಂದ ತಿಳಿದುಬರುತ್ತದೆ. ಕೇಶಿರಾಜ ಒಂದು ಕಡೆಯಲ್ಲಿ ಶರಣಮಾರ್ಗನಿರತ, ಇನ್ನೊಂದು ಕಡೆಯಲ್ಲಿ ರಾಜಕಾರ್ಯ ದುರಂಧರ. ಇವರೆಡನ್ನೂ ಸಮನ್ವಯಗೊಳಿಸುತ್ತಾ ಜನಹಿತ ಕಾರ್ಯವನ್ನು ಕೈಗೊಂಡುದಲ್ಲದೆ ಕವಿಯಾಗಿ ಅನೇಕ ಕೃತಿಗಳನ್ನು ರಚಿಸಿದನು. ಆರನೆಯ ವಿಕ್ರಮಾದಿತ್ಯನ ಬಗೆಗೆ ಹುಲಿಗಿಯ ಶಾಸನವೊಂದು ವಿಪುಲವಾದ ಮಾಹಿತಿಯನ್ನು ಕೊಡುತ್ತದೆ. ಆ ಶಾಸನದ ಆಶಯವು ಈ ರೀತಿಯಾಗಿದೆ :

ಅದರ ಶಾಸನೋಕ್ತ ಕಾಲವು ವಿಕ್ರಮಶಕ ೧೩ನೆಯ ವಿಭವಸಂವತ್ಸರದ ಚೈತ್ರಮಾಸದ ಶುದ್ಧ ಅಕ್ಷಯ ತೃತೀಯ ಸೋಮವಾರ ಸಂಕ್ರಾಂತಿಯೆಂದಿದ್ದು ಇಲ್ಲಿ ಚೈತ್ರಕ್ಕೆ ಬದಲು ವೈಶಾಖವಾದಲ್ಲಿ ಇದರ ಕಾಲವು ಕ್ರಿ.ಶ. ೨೭-೩-೧೦೮೮ಕ್ಕೆ ಸರಿಹೊಂದುತ್ತದೆ. ಚಾಳುಕ್ಯ ತ್ರಿಭುವನಮಲ್ಲ

(ಆರನೆಯ ವಿಕ್ರಮಾದಿತ್ಯ)ನು ಕಲ್ಯಾಣದ ನೆಲೆವೀಡಿನಿಂದ ಆಳುತ್ತಿದ್ದಾಗ ಕಾಮಕಾಯನ ಗೋತ್ರದ ನಾರಾಯಣ ಭಟ್ಟೋಪಾಧ್ಯಾಯನ ಮಗ ಚೌವೇದಿ ಭಟ್ಟನು ಹುಲಿಗೆಯೆಂಬ ಪುರವನ್ನು ತ್ರೈಳೋಕ್ಯಮಲ್ಲನಿಂದ ಪಡೆದನು. ಇವನು ತುಂಗಾಭದ್ರಾನದಿಯಿಂದ ಸೀಳು ನಾಲೆಯೊಂದನ್ನು ತಂದಂತೆ ಹೇಳಿದೆ. ಈ ಚೌವೇದಿಭಟ್ಟನ ಪತ್ನಿ ಆಚ್ಚಿಕಬ್ಬೆ. ಇವರಿಗೆ ನಾರಣಭಟ್ಟ. ದ್ರೋಣಭಟ್ಟ, ಸೋಮನಾಥ, ಮಾರಯ್ಯಭಟ್ಟ ಮತ್ತು ರುದ್ರಾದಿತ ಎಂಬ ಐವರು ಮಕ್ಕಳಾದರು. ಅವರಲ್ಲಿ ಸೋಮನಾಥನು ರುದ್ರಸದ್ಮವನ್ನು (ಶಿವದೇವಾಲಯ) ಮಾಡಿಸಿದ. ಈ ಊರಿಗೆ ಪೂರ್ವಕ್ಕೆ ರಿಷ್ಯಮೂಕಾಚಲ, ದಕ್ಷಿಣಕ್ಕೆ ಗಂಧಮಾದನ, ಪಶ್ಚಿಮಕ್ಕೆ ಶ್ರೀಕೂಟ, ಉತ್ತರಕ್ಕೆ ಕಿಷ್ಕಿಂಧಪರ್ವತಗಳಿದ್ದು, ಇವುಗಳ ಮಧ್ಯೆ ಇರುವ ಸುಂದರ ಪ್ರದೇಶದಲ್ಲಿ ಸೋಮೇಶನಿಗೆ ಪುಲಿಗೆಯೂರಿನ ಒಡೆಯನಾದ ಸೋಮನಾಥನು ದೇವಾಲಯವನ್ನು ಮಾಡಿಸಿದನೆಂದಿದೆ. ಈ ಸೋಮನಾಥನ ಪತ್ನಿ ಮಂಚಿಕಬ್ಬೆ. ಈ ದಂಪತಿಗಳಿಬ್ಬರೂ ಕೂಡಿ ತಾವು ಪ್ರತಿಷ್ಠೆ ಮಾಡಿಸಿದ ಸೋಮೇಶ್ವರದೇವರಿಗೆ ಊರಿನ ಪೂರ್ವಕ್ಕೆ ಗುಯ್ಯಲ ತೋಟ, ಪರಿನೀರ ತೋಟವನ್ನು ಚತುಸ್ಸೀಮಾ ಸಮೇತನಾಗಿ ನೀಡುತ್ತಾರೆ. ಇದಲ್ಲದೆ ಮನೆಗಳನ್ನು ಭೃತ್ಯ ದಾಸಿವರ್ಗ ಸಹಿತವಾಗಿ ಧಾರಾಪೂರ್ವಕವಾಗಿ ನೀಡುತ್ತಾನೆ.

ದೇವರ ಪ್ರತಿಷ್ಠಾಕಾಲದಲ್ಲಿ ಊರಿನ ೫೩ ಮಹಾಜನರು ೨೦೦ ಕಮ್ಮ ತೋಟ, ನಾಲ್ಕು ಮತ್ತರು ಹೊಲ ಒಂದು ಹೂವಿನ ತೋಟವನ್ನು ಬಿಡುತ್ತಾರೆ. ಈ ದೇವರ ಭೂಮಿಯಲ್ಲಿ ಬರುವ ಉತ್ಪತ್ತಿಯಲ್ಲಿ, ತ್ರಿಕಾಲದಲ್ಲಿ ಪೂಜಿಸುವ ಆಚಾರ್ಯನಿಗೆ ಆರು ಗದ್ಯಾಣ, ದೇವರ ಪರಿಚಾರಕ ವರ್ಗಕ್ಕೆ ಸಂಬಳವಾಗಿ ಆರು ಗದ್ಯಾಣ, ಶಿವಧರ್ಮಪುರಾಣವನ್ನು ಹೇಳುವ ಭಟ್ಟನಿಗೆ ವರ್ಷಕ್ಕೆ ನಾಲ್ಕು ಗದ್ಯಾಣ, ದೇವರ ನಿವೇದ್ಯಕ್ಕೆ ರಾಜಾನ್ನದ ಅನ್ನ ಒಂದು ಕೊಳಗ, ಒಂದು ಮಾನ ಹೆಸರು, ಒಂದು ಮಾನ ತುಪ್ಪ, ೧೨ ಅಡಿಕೆ, ೨೪ ಎಲೆ, ಒಂದು ನಂದಾದೀವಿಗೆ ನಡೆಯಬೇಕೆಂದು ವಿಧಿಸಿದ್ದಾನೆ. ಉಳಿದ ಹಣದಲ್ಲಿ ದೇವಾಲಯದ ಕಲ್ಲಕೆಲಸ, ೧೨ ಜನಕ್ಕೆ ಛತ್ರ ನಡೆಯಬೇಕೆಂದಿದೆ.

ಶಾಸನದಲ್ಲಿ ತುಂಗಭದ್ರಾ ನದಿಯನ್ನು ದಕ್ಷಿಣ ಗಂಗೆ ಎಂದು ಕರೆದಿದೆ. ಪರಾಭವ ಸಂವತ್ಸರದ ಸಂಕ್ರಮಣದಂದು ಆವಂಚಿಗೆಯ ದೋಣಮರಸನ ತಮ್ಮ ಬಾಚರಸನು ಪುಲ್ಲವಿಗೆಯ ತನ್ನ ಸಿದ್ದಾಯದಲ್ಲಿ ದೇವರ ದೀಪದ ಎಣ್ಣೆಗಾಗಿ೫ ಪಣವನ್ನು ಬಿಡುತ್ತಾನೆ. (ಕೊಪ್ಪಳ ಜಿಲ್ಲೆಯ ಶಾಸನಗಳು-ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ ೧೪೫-೧೪೬)

ಇವನ ಮಗ ಮೂರನೇ ಸೋಮೇಶ್ವರ ಒಂದು ರೀತಿಯಲ್ಲಿ ವಿಶಿಷ್ಟನಾದವನೇ. ಇವನಿಗೆ ಭೂಲೋಕ, ತ್ರಿಭುವನಮಲ್ಲ ಎಂಬ ಬಿರುದುಗಳಿದ್ದವು. ಮಾನಸೋಲ್ಲಾಸ ಅಥವಾ ಅಭಿಲಾಷಿತಾರ್ಥ ಚಿಂತಾಮಣಿ ಎಂಬ ಬೃಹತ್ ಗ್ರಂಥವು ಈತನ ಹೆಸರಿನಲ್ಲಿದೆ. ಅನೇಕ ರೀತಿಯ ವಿಷಯಗಳ ವಿವೇಚನೆ ಈ ಗ್ರಂಥದಲ್ಲಿ ಚರ್ಚೆಯಾಗಿದೆ. ತರ್ಕ, ಕಾವ್ಯ, ವ್ಯಾಕರಣ, ಸಂಗೀತ, ರಾಜನೀತಿ, ಜ್ಯೋತಿಷ, ವೈದ್ಯ, ಆನೆಗಳ ಶಿಕ್ಷಣ ಮತ್ತು ಹುಂಜಗಳನ್ನು ಕಾದಿಸುವವರೆಗೆ ನೂರಾರು ವಿಷಯಗಳು ಇಲ್ಲಿ ಸಮಾವೇಶಗೊಂಡಿವೆ. ಇದೊಂದು ವಿಶ್ವಕೋಶದಂತಿದೆ. ಇವನ ನಂತರ ಇವನ ಇಬ್ಬರು ಮಕ್ಕಳಾದ ಎರಡನೇ ಜಗದೇಕಮಲ್ಲ ಮತ್ತು ಮೂರನೇ ತೈಲಪರು ಕ್ರಮವಾಗಿ ರಾಜರಾದರು. ಈ ಸಂದರ್ಭದಲ್ಲಿ ಕಲಚೂರರು ಆಗಲೇ ತಮ್ಮ ಉನ್ನತಿಯನ್ನು ತೋರಿಸುತ್ತಿದ್ದರು. ಕಣ್ಣಮನಿಂದ ಸ್ಥಾಪಿತವಾಗಿದ್ದ ಕಳಚೂರ್ಯರು ಸಾಮಂತರಾಗಿ ಮಂಗವೇಡೆಯನ್ನು ಆಳುತ್ತಿದ್ದರು. ಈ ವಂಶದ ಪೆರ್ಮಾಡಿ ಅಥವಾ ಹೆಮ್ಮಡಿ ಎಂಬುವವನ ಮಗನೇ ಬಿಜ್ಜಳ. ಇವನು ತೈಲಪನ ಬಳಿಯಲ್ಲಿ ಆಶ್ರಿತನಾಗಿದ್ದ. ಇವರ ಚರಿತ್ರೆಗಳ ಬಗೆಗೆ ಕೊಪ್ಪಳ ಪ್ರದೇಶಗಳಲ್ಲಿ ದೊರೆಯುವ ಶಾಸನಗಳು ಸಾಂಸ್ಕೃತಿಕ ವಿವರಗಳನ್ನು ನೀಡುತ್ತವೆ. ಈ ಕೊಪ್ಪಳದ ಬೆಳ್ವೊಲ ನಾಡು ಯರದೊಡೆ ನಾಡುಗಳೊಂದಿಗೆ ಮತ್ತೆ ಕಲ್ಯಾಣ ಚಾಲುಕ್ಯರ ರಾಜ್ಯಕ್ಕೆ ಸೇರಿತು. ಈ ಚಾಲುಕ್ಯರ ವಂಶದ ಸಾಮಂತ ದೇವಗಿರಿಯ ಅರಸು ಐದನೆಯ ಬಿಲ್ಲಮನು ಮತ್ತು ಅರಸ ನಾಲ್ಕನೆಯ ಸೋಮೇಶ್ವರನು ಬನವಾಸಿಯತ್ತ ಸೈನ್ಯದತ್ತ ತೆರಳಿದ ಸಮಯಾವಕಾಶವನ್ನು ಕಲ್ಯಾಣವನ್ನು ಓಡಿದುಕೊಂಡು ಕಲಚೂರ್ಯರು ಸ್ವತಂತ್ರ ರಾಜರೆಂದು ಸಾರಿಕೊಂಡರು. ಕಿಸುಕಾಡು, ಬೆಳ್ವೊಲ, ಯರದೊಡೆ ನಾಡು ದೇವಗಿರಿಯ ಸೇವುಣರಿಗೆ ಸೇರ್ಪಡೆಯಾದವು. ಅನಂತರ ಕಲಚೂರ್ಯರು

ಯರದೊಡೆ ನಾಡನ್ನು ಆಕ್ರಮಿಸಿಕೊಂಡರು. ಈ ಸಂದರ್ಭದಲ್ಲಿ ಕೊಪ್ಪಳವು ಕಲಚೂರಿಗಳಿಗೆ ಸೇರಿಕೊಂಡಿತು.

## ೪. ೭. ಶಿಲಾಹಾರರು

ಚಾಲುಕ್ಯ ಮತ್ತು ಸೇವುಣ ಅರಸರ ಕಾಲದಲ್ಲಿ ಅನೇಕ ಸಾಮಂತರು ಈ ಕೊಪ್ಪಳದ ಮೇಲೆ ಪ್ರಭುತ್ವವನ್ನು ನಡೆಯಿಸಿರುವರು. ಇವರುಗಳಲ್ಲಿ ಶಿಲಾಹಾರರೇ ಪ್ರಮುಖರು. ಅನೇಕ ಶಾಸನಗಳು ಈ ಶಿಲಾಹಾರರು 'ಕೊಪಣಪುರವಾಧೀಶ್ವರ'ರೆಂದು ಬಿರುದಾಂಕಿತರಾಗಿದ್ದರು ಎಂದು ತಿಳಿಸುತ್ತವೆ. ಬಿಜಾಪುರ ಮತ್ತು ಕಲಬುರ್ಗಿ ಜಿಲ್ಲೆಗಳ ಪ್ರದೇಶಗಳಲ್ಲಿ ಪ್ರಭುತ್ವ ನಡೆಸಿದ್ದರೆಂಬುದನ್ನು ಶಿಲಾಹಾರರ ಶಾಸನಗಳು ತಿಳಿಸುತ್ತವೆ. ಶಿಲಾಹಾರರು ಜಿಮೂತವಾಹನ ವಂಶದವರೆಂದು ತಿಳಿಸಿದುಬಂದಿದೆ. ಜಿಮೂತವಾಹನನ ವಂಶವಾದ 'ಕಂಚಿಗ' ಕೊಪ್ಪಣದವನೇ ಆಗಿದ್ದಾನೆ. ಶಿಲಾಹಾರರ ಕುಲಕ್ಕೆ ಇವನು ತಿಲಕದಂತಿದ್ದಾನೆ. ಚರಿತ್ರೆಕಾರ ಫ್ಲೀಟರು ಹೇಳಿರುವಂತೆ '' In and about 10th Centuary A.D. the place appears to have been the head quarters of the brnach of the silahar family. An undated inscription from Salotagi in Indi Taluka of the Bijapur Dist. ascribed by Fle, to about A.D. 945, refers benefactions of 'Kanchiga' who was the native of Kopanapura and members of the Silahar family.' ಶಿಲಾಹಾರರ ಸಮಯ ವಿಷಮ ಪರಿಸ್ಥಿತಿಯಿಂದ ಕೂಡಿದೆ. ಏಕೆಂದರೆ ಶಿಲಾಹಾರರು ಆಳ್ವಿಕೆ ನಡೆಸುತ್ತಿರುವಾಗ ದೆಹಲಿಯ ಸುಲ್ತಾನರ ದಂಗೆಗಳು ಏರ್ಪಟ್ಟವು. ಅಲ್ಲಾವುದ್ದೀನ್ ಖಿಲ್ಜಿ ತನ್ನ ದಂಡನಾಯಕ ಮಲ್ಲಿಕಾಫೂರನ ನೇತೃತ್ವದಲ್ಲಿ ದಕ್ಷಿಣದ ಮೇಲೆ ಪ್ರಪ್ರಥಮಬಾರಿಗೆ ದಾಳಿ ನಡೆಸಿದನು. ಈ ಸಂದರ್ಭದಲ್ಲಿ ಶಿಲಾಹಾರರು ಸಂಪೂರ್ಣವಾಗಿ ನಾಶವಾಗಿ ಹೋದರು ಎಂದು ತಿಳಿದುಬರುತ್ತದೆ.

## ೪. ೮. ಸೇವುಣರು

ದೇವಗಿರಿ ಮತ್ತು ಅದರ ಸುತ್ತಮುತ್ತಲಿನ ಪ್ರದೇಶವನ್ನು ಒಂದು ಕಾಲಕ್ಕೆ ಆಳಿಕೊಂಡಿದ್ದ ದೇವಗಿರಿಯ ಸೇವುಣರು ಕೊಪ್ಪಳದ ಚಾರಿತ್ರಿಕ ವಿಷಯದ ಮೇಲೆ ಮಹತ್ವಪೂರ್ಣ ಪಾತ್ರವನ್ನು ವಹಿಸಿದ್ದಾರೆ. ಕೊಪ್ಪಳ ಬೆಳ್ವೊಲನಾಡು ಯರದೊಡೆ, ಈ ಪ್ರದೇಶಗಳನ್ನುದೇವಗಿರಿಯ ಬಿಲ್ಲಮನು ಆಳುತ್ತಿದ್ದನು. ಈ ಯರದೊಡೆ ನಾಡಿನಲ್ಲಿ ಕೊಪ್ಪಳ ಪ್ರದೇಶವೂ ಇದ್ದಿತು. ಕಲ್ಯಾಣದ ನಾಲ್ಕನೇ ಸೋಮೇಶ್ವರನು ಈ ಸ್ಥಳಗಳನ್ನು ವಶಪಡಿಸಿಕೊಂಡನು ಎಂಬುದರ ಬಗೆಗೆ ಕೊಪ್ಪಳ ಪ್ರದೇಶದಲ್ಲಿ ದೊರೆತ ಒಂದು ಶಾಸನ ತಿಳಿಸುತ್ತದೆ.

## ೪. ೯. ಕಲ್ಯಾಣದ ಕಲಚೂರಿಗಳು

ಕಲ್ಯಾಣದ ಕ್ರಾಂತಿ ಕಲಚೂರಿಗಳನ್ನು ಸಂಸ್ಕೃತಿಯ ಪ್ರಧಾನಧಾರೆಗೆ ಎಳೆದು ತರುತ್ತದೆ. ಅವರ ಆಳ್ವಿಕೆಯ ಕಾಲಘಟ್ಟ ಕಿರಿದಾಗಿದ್ದರೂ ಅಲ್ಲಿ ನಡೆದ ಪ್ರಯೋಗಗಳು ಕನ್ನಡ ನಾಡನ್ನು ಸಾಂಸ್ಕೃತಿಕವಾಗಿ ಪರಿವರ್ತನೆಗೊಳಪಡಿಸಿದವು. ಧರ್ಮ, ಸಮಾಜ, ಆರ್ಥಿಕ ಚಟುವಟಿಕೆಗಳು ಮಾನವ ಜೀವನದ ನೈತಿಕ ನೆಲೆಗಟ್ಟುಗಳು ಇತ್ಯಾದಿ ವಿಷಯಗಳಲ್ಲಿ ಇವರ ಕಾಲಘಟ್ಟದಲ್ಲಿ ನಡೆದ ಚರ್ಚೆಗಳು ಮಹತ್ವಪೂರ್ಣವಾಗಿವೆ. ಸಾಹಿತ್ಯಕವಾಗಿ ಮತ್ತು ಸಾಮಾಜಿಕವಾಗಿ ಪ್ರಪಂಚ ಕಾಣದಂತಹ ಕ್ರಾಂತಿಯನ್ನು ಕಾಣಬಹುದು. ಕಲ್ಯಾಣದ ಕ್ರಾಂತಿ ಎಂದರೆ ಕೇವಲ ವಚನಪ್ರಕಾರದ ಸೇರ್ಪಡೆಯಲ್ಲ; ಮಾನವನ ಬಹು ಮಹತ್ವದ ಜೀವನದಲ್ಲಾದ ಪರಿವರ್ತನೆ ಎಂದೇ ಗುರುತಿಸಿರುವರು. ವಿಶ್ವದಲ್ಲಿ ಪ್ರಪ್ರಥಮಬಾರಿಗೆ ಮಾನವೀಯತೆಯ ನೆಲೆಗಟ್ಟಿನಮೇರೆಗೆ ಸಮಾನತೆಯ ತತ್ವಕ್ಕಾಗಿ ಅಲ್ಲಿ ಕ್ರಾಂತಿ ಆರಂಭವಾಗಿದೆ. ಇದಕ್ಕೆ ಕಾರಣ ಕಲಚೂರಿ ಅರಸರು ಒದಗಿಸಿಕೊಟ್ಟ ಬೌದ್ಧಿಕ ಪರಿಸರ ಎಂಬುದನ್ನು ಮರೆಯುವಂತಿಲ್ಲ. ಕರ್ನಾಟಕದಲ್ಲಿ ಮನೆಮಾತಾಗಿರುವ ವಚನ ಸಾಹಿತ್ಯವು ಕೇವಲ ಸಾಹಿತ್ಯದ ಓಣ್ನೆಲೆಯಲ್ಲಿ ಬೆಳೆಯಲಿಲ್ಲ. ಬೌದ್ಧಿಕ ಆಧ್ಯಾತ್ಮಿಕ, ಆರ್ಥಿಕ, ನೈತಿಕ, ಸಾಮಾಜಿಕ, ಶೈಕ್ಷಣಿಕ ಮುಂತಾದ ಮತ್ತು ಹಲವು ಕ್ಷೇತ್ರಗಳಲ್ಲಿ

ಉತ್ಕ್ರಾಂತಿಯನ್ನು ತರುವ ನಿಟ್ಟಿನಲ್ಲಿ ಇದು ಕೆಲಸ ಮಾಡಿತು. ಆದುದರಿಂದ ಇದನ್ನು ಫ್ರೆಂಚ್ ಕ್ರಾಂತಿಯ ಸಂದರ್ಭಕ್ಕೆ ಹೋಲಿಸಿ ನೋಡುತ್ತಾರೆ. ಫ್ರೆಂಚ್ ಕ್ರಾಂತಿಯ ಸಂದರ್ಭದಲ್ಲಿ ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವಕ್ಕಾಗಿ ಹೋರಾಟ ನಡೆದಿದೆ. ಆದರೆ ಭಾರತೀಯ ಪರಿಸರದಲ್ಲಿ ಈಗ್ಗೆ ಸುಮಾರು ಎಂಟುನೂರು ವರ್ಷಗಳ ಹಿಂದೆ ಈ ವಿಷಯಗಳಿಗಾಗಿ ಕ್ರಾಂತಿಯಾಯಿತು. ಅದನ್ನು ಕಲ್ಯಾಣದ ಕ್ರಾಂತಿ ಎಂದು ಬೇರೆ ಹೇಳಬೇಕಾಗಿಲ್ಲ. ಕಾಯಕತತ್ವ, ಮೋಕ್ಷತತ್ವ ಮತ್ತು ಜೀವನ ತತ್ವಗಳಲ್ಲಿ ಭಾರತೀಯ ಪರಿಸರದಲ್ಲಿ ಮೊದಲ ಬೆಳವಣಿಗೆಯಾಯಿತು. ಯಂತ್ರ, ಮಂತ್ರ, ಜಪ, ತಪ, ಯಜ್ಞ ಮುಂತಾದ ಪರಿಭಾಷೆಗಳಿಂದ ಧರ್ಮ ಹೊರಬಂದಿತು. ಕಾಯಕವನ್ನೇ ತನ್ನ ಮಂತ್ರವಾಗಿ ರೂಢಿಸಿಕೊಂಡಿತು. ಕಾಯಕ ಮಾಡುತ್ತಾ ಪ್ರಾಣಬಿಟ್ಟಲ್ಲಿ ಅದನ್ನು ಮೋಕ್ಷವೆಂದಿತು. ಜೀವನದಲ್ಲಿ ಅನುಭಾವವನ್ನು ಹೊಂದಿದಲ್ಲಿ ಅದನ್ನು ಜೀವನತತ್ವ ಎಂದಿತು. ಭಾರತೀಯ ವೇದ ವೇದಾಂಗಗಳ ಉಪನಿಷತ್ತುಗಳ ಸಾರಸರ್ವಸ್ವವನ್ನೆಲ್ಲಾ ಈ ಮೂರು ತತ್ವಗಳಲ್ಲಿ ಮೇಳೈಸಿ ಅದನ್ನು ಅನುಷ್ಠಾನದತ್ತ ಯೋಚಿಸಿದ ಪ್ರಥಮ ಮನಸ್ಸುಗಳು ಕಲ್ಯಾಣದ ಕಲಚೂರಿ ಅರಸರುಗಳ ಆಸ್ಥಾನದಲ್ಲಿದ್ದವು ಎಂಬುದನ್ನು ಮನಗಾಣಬಹುದು.

ಕಲ್ಯಾಣದ ಕಲಚೂರಿಗಳು ವಲಸೆ ಬಂದವರು. ಪೆರ್ಮಾಡಿಯ ವಿಕ್ರಮಾದಿತ್ಯನ ನಂತರ ಅಧಿಕಾರಕ್ಕೆ ಬಂದ ಮೂರನೇ ಸೋಮೇಶ್ವರನ ಆಳ್ವಿಕೆಯಲ್ಲಿ ಪ್ರಬಲ ಮಾಂಡಲಿಕರಾಗಿ ಕಲಚೂರಿಗಳು ಕಾರ್ಯನಿರ್ವಹಿಸಿದರು. ಕ್ರಿ.ಶ. ೧೧೧೮ ರಿಂದ ೧೧೪೦ರ ವರೆಗೆ ಸೋಮೇಶ್ವರನು ಮಾಂಡಲಿಕನಾಗಿ ಕೊಪ್ಪಳ ಮುಂತಾದ ಪ್ರದೇಶವನ್ನು ಆಳುತ್ತಿದ್ದನು. ಪೆರುಮಾಡಿಯ ನಂತರ ಆತನ ಮಗನಾದ ಬಿಜ್ಜಳನು ಚಾಲುಕ್ಯರ ಮಾಂಡಲಿಕನಾಗಿ ಆಳ್ವಿಕೆ ನಡೆಸುತ್ತಿದ್ದನು. ಕ್ರಿ.ಶ. ೧೧೫೭ರ ವೇಳೆಗೆ ಮೂರನೇ ಸೋಮೇಶ್ವರನ ಮಗನಾದ ಮೂರನೇ ತೈಲಪನು ಕಲ್ಯಾಣಿ ಚಾಲುಕ್ಯರ ಅರಸನಾದನು. ಕ್ರಿ.ಶ. ೧೧೫೪-೫೫ರಲ್ಲಿ ಮೂರನೇ ತೈಲಪ ಕಾಕತೀಯರ ಮೇಲೆ ದಂಡೆತ್ತಿ ಹೋಗಿ ಸೋಲನ್ನು ಅನುಭವಿಸಿದನು. ಈ ಸುದ್ದಿ ತಿಳಿದು ಶಿಲಾಹಾರ ವಿಜಯಾದಿತ್ಯನು ಬನವಾಸಿಯ ನಾಯಕ ರೇಚನರ ಸಹಾಯದಿಂದ ಚಾಲುಕ್ಯ ಸಿಂಹಾಸನವನ್ನು ವಶಪಡಿಸಿಕೊಂಡನು. ಈ ಸುದ್ದಿ ತಿಳಿದು ಬಿಜ್ಜಳನು

ಧಾರವಾಡದಿಂದ ಕಲ್ಯಾಣಕ್ಕೆ ಆಗಮಿಸಿದನು ಎಂಬ ವಿವರಗಳು ಕೊಪ್ಪಳ ಪ್ರದೇಶದ ಒಂದು ಶಾಸನದಲ್ಲಿ ತಿಳಿದುಬರುತ್ತದೆ. ಬಿಜ್ಜಳನಿಗೆ ಭುಜಬಲ ಚಕ್ರವರ್ತಿ, ಕಲಚೂರಿ ಚಕ್ರವರ್ತಿ, ತ್ರಿಭುವನಮಲ್ಲ, ಶನಿವಾರಸಿದ್ಧಿ, ಗಿರಿದುರ್ಗಮಲ್ಲ, ಮಹಾರಾಜಾಧಿರಾಜ ಮುಂತಾದ ಬಿರುದುಗಳಿದ್ದವು. ಕೊಪ್ಪಳ ಪ್ರದೇಶವನ್ನು ಶಿಲಾಹಾರರಿಂದ ವಶಪಡಿಸಿಕೊಂಡುದರಿಂದ ಅವನಿಗೆ ಗಿರಿದುರ್ಗಮಲ್ಲ ಎಂಬ ಬಿರುದು ಪ್ರಾಪ್ತವಾಯಿತೆಂದು ಕೊಪ್ಪಳದ ಶಾಸನವು ತಿಳಿಸುತ್ತದೆ. ಅದೇ ಶಾಸನದಲ್ಲಿ ತಿಳಿದುಬರುವಂತೆ ಕ್ರಿ.ಶ. ೧೧೬೨ರಲ್ಲಿ ಹಾನಗಲ್ಲು, ಉಚ್ಚಂಗಿದುರ್ಗ ಪಟ್ಟಣಗಳನ್ನು ವಶಪಡಿಸಿಕೊಂಡನು.

ಬಿಜ್ಜಳನ ಆಳ್ವಿಕೆಯ ಕಾಲ ಶೈವಧರ್ಮದ ಪುನರುತ್ಥಾನಕ್ಕೆ ಅತ್ಯಂತ ಪ್ರಸಿದ್ಧವಾಗಿದೆ. ಈ ಧಾರ್ಮಿಕ ಚಳುವಳಿಯ ನಾಯಕರೆಂದರೆ ಬಿಜ್ಜಳನ ಮಂತ್ರಿಯಾಗಿದ್ದ ಬಸವಣ್ಣ. ಬಸವಣ್ಣ ಮತ್ತು ಬಿಜ್ಜಳರಲ್ಲಿ ಧಾರ್ಮಿಕ ವಿಷಯಗಳಲ್ಲಿ ಸಂಘರ್ಷಗಳು ಕಂಡುಬಂದರೂ ಆಡಳಿತಾತ್ಮಕ ವಿಷಯಗಳಲ್ಲಿ ಬಸವಣ್ಣ ಬಿಜ್ಜಳರಲ್ಲಿ ಸಹಮತವೇರ್ಪಡುತ್ತಿತ್ತು. ಬಿಜ್ಜಳನು ಸಂಪೂರ್ಣವಾಗಿ ಧಾರ್ಮಿಕ ಸ್ವಾತಂತ್ರ್ಯವನ್ನು ಪ್ರಜೆಗಳಿಗೆ ನೀಡುವಲ್ಲಿ ಬಸವಣ್ಣನವರ ನೀತಿಗಳನ್ನೇ ಅನುಸರಿಸಿದ್ದನು. ಈ ಉದಾರ ನೀತಿಯಿಂದಾಗಿ ಕಲ್ಯಾಣದಲ್ಲಿ ಸಮಾನತೆ, ಸಹಕಾರ ತತ್ವಗಳು ಅನುಭಾವದ ಪ್ರಣಾಳಿಯಲ್ಲಿ ಬರತೊಡಗಿದವು. ಇದರಿಂದಾಗಿ ಅನುಭವಮಂಟಪ ಎನ್ನುವ ಅನುಭಾವದ ಮಹಾಮನೆ ಮೂರ್ತಗೊಂಡಿತು. ಅಲ್ಲಿ ನಡೆದ ಪ್ರಯೋಗಗಳು ಅನಂತರದ ಕರ್ನಾಟಕದ ಚರಿತ್ರೆಯ ಮೇಲೆ ಪೂರ್ಣ ಪ್ರಮಾಣದಲ್ಲಿ ಪ್ರಭಾವ ಬೀರಿದವು. ಕರ್ನಾಟಕದ ರಾಜಕೀಯ ಅರಸುಮನೆತನಗಳು ಅಂದಿನಿಂದ ವೀರಶೈವಧರ್ಮಕ್ಕೆ ರಾಜಮನ್ನಣೆಯನ್ನು ನೀಡಿದವು. ಶಿವಾಗಮಗಳು ಕನ್ನಡದಲ್ಲಿ ವಚನರೂಪದಲ್ಲಿ ಹೊರಬಂದವು. ಪಂಚಾಚಾರ, ಅಷ್ಟಾವರಣ, ಷಟ್‌ಸ್ಥಲ ತತ್ವಗಳ ಮೇಲೆ ನಿಂತ ಧರ್ಮವೊಂದು ಕರ್ನಾಟಕದಲ್ಲಿ ನೆಲೆಗೊಂಡಿದ್ದು ಈ ಕಾಲಘಟ್ಟದಿಂದಲೇ. ಕೇವಲ ಧಾರ್ಮಿಕವಾಗಿ ಮಾತ್ರವಲ್ಲ ವಚನ ಸಾಹಿತ್ಯವು ಬೌದ್ಧಿಕವಾಗಿ, ಸಾಮಾಜಿಕವಾಗಿ ಬದಲಾವಣೆಗಳನ್ನು ತಂದಿತು. ಬೌದ್ಧಿಕ ಸ್ವಾತಂತ್ರ್ಯ,

ಸಾಮಾಜಿಕ ಸ್ವಾತಂತ್ರ್ಯ, ಧಾರ್ಮಿಕ ಸ್ವಾತಂತ್ರ್ಯ ಮತ್ತು ಶೈಕ್ಷಣಿಕ ಸ್ವಾತಂತ್ರ್ಯವನ್ನು ಅನಂತರದ ಕರ್ನಾಟಕದಲ್ಲಿ ಇದರ ಪ್ರಭಾವವಾಗಿ ಕಾಣಬಹುದು.

ಈ ಕಾರಣದಿಂದಲೇ ಒಂದು ಕಾಲದಲ್ಲಿ ಬೌದ್ಧ ಕೇಂದ್ರವಾಗಿದ್ದ ಅನಂತರದಲ್ಲಿ ಜೈನ ಕೇಂದ್ರವಾಗಿ ಮೆರೆದ ಕೊಪ್ಪಳವು ಇಂದು ವೀರಶೈವರ ಕೇಂದ್ರವಾಗಿದೆ. ಧರ್ಮ ಮತ್ತು ರಾಜನೀತಿಗಳನ್ನು ಏಕಕಾಲಕ್ಕೆ ವಚನಗಳು ಸಾರಿದ ಹಿನ್ನೆಲೆಯಲ್ಲಿ ಈ ಪರಿವರ್ತನೆ ಕರ್ನಾಟಕದಲ್ಲಿ ಅನಿವಾರ್ಯವಾಯಿತು. ಉತ್ತರ ಕರ್ನಾಟಕದಲ್ಲಂತೂ ವಚನ ತತ್ವಗಳು ಜನರ ಮನದಲ್ಲಿ ನಾಟಿದವು. ಜೊತೆಗೆ ಮಾದಾರರು, ಕಮ್ಮಾರರು ಮುಂತಾದ ಕನಿಷ್ಠ ಜಾತಿಗಳು ಲಿಂಗವಂತ ಧರ್ಮವನ್ನು ಅನುಸರಿಸತೊಡಗಿದವು. ಇದು ಸಮಾನತೆಯನ್ನು ಪ್ರತಿಪಾದಿಸುವ ಮತವೆಂಬುದನ್ನು ಜನರು ಮನಗಂಡಿದ್ದರು. ಈ ಹಿನ್ನೆಲೆಯಲ್ಲಿ ಕೊಪ್ಪಳ ಪ್ರದೇಶದಲ್ಲಿ ಜನರು ವೀರಶೈವ ಮತಕ್ಕೆ ಪರಿವರ್ತನೆಯಾದರು.

## ೪. ೧೦. ಹೊಸಮಲೆದುರ್ಗದ ಅರಸರು

ಕಂಪಿಲರಾಯನು ಕ್ರಿ.ಶ. ೧೩೨೦ರಲ್ಲಿ ಸ್ವತಂತ್ರನಾದನು. ದೇವಗಿರಿಯ ಸೇವುಣರ ರಾಜ್ಯವು ಮಲ್ಲಿಕಾಫೂರನ ದಾಳಿಗೆ ತುತ್ತಾಗಿ ನಾಶವಾಯಿತು. ಮಲ್ಲಿಕಾಪುರನು ದ್ವಾರಸಮುದ್ರ ಮತ್ತು ದೇವಗಿರಿಗಳನ್ನು ಕೊಳ್ಳೆ ಹೊಡೆದುಕೊಂಡು ಹೋದನು. ಸೇವುಣರ ಸಾಮಂತ ಅರಸನಾಗಿದ್ದ ಕಂಪಿಲರಾಯ ಮಲ್ಲಿಕಾಫೂರ್ ಅತ್ತ ಹೋಗುತ್ತಲೇ ಇತ್ತ ಸ್ವತಂತ್ರನೆಂದು ಸಾರಿಕೊಂಡ. ಕಂಪಿಲರಾಯನ ರಾಜಧಾನಿ ಹೊಸಮಲೆದುರ್ಗ. ಕೊಪ್ಪಳದಿಂದ ಅನತಿದೂರದಲ್ಲಿದೆ. ಶಾಸನಗಳು ಸಿಗುವ ಪೂರ್ವದಲ್ಲಿ ಆನೆಗುಂದಿ ಮತ್ತು ಕಂಪಲಿ ಕಂಪಿಲನ ರಾಜಧಾನಿಗಳೆಂದು ನಂಬಲಾಗಿತ್ತು. ಆದರೆ ಕೊಪ್ಪಳದಲ್ಲಿ ದೊರೆತ ಒಂದು ಶಾಸನದಲ್ಲಿ ಕಂಪಿಲರಾಯನು ಪನೇಯ, ಹೊಸಮಲೆದುರ್ಗ, ಕುಮ್ಮಟ ಈ ಮೂರು ಊರುಗಳನ್ನು ರಾಜಧಾನಿಗಳನ್ನಾಗಿ ಮಾಡಿಕೊಂಡಿದ್ದನು ಎಂಬುದು ತಿಳಿದುಬರುತ್ತದೆ. ಹೊಸಮಲೆದುರ್ಗ ಈಗಿನ ಸಂಡೂರು ಪ್ರದೇಶದಲ್ಲಿ ಕಂಡುಬರುತ್ತದೆ. ಆದರೆ ಕುಮ್ಮಟದುರ್ಗವು

ಕೊಪ್ಪಳಕ್ಕೆ ೧೨ ಕಿಲೋಮಿಟರ್ ವ್ಯಾಪ್ತಿಯ ದೂರದಲ್ಲಿದೆ. ಇತ್ತೀಚೆಗೆ ಉದಯಿಸಿದ ಕೊಪ್ಪಳ ಜಿಲ್ಲೆಯ ಕೊಪ್ಪಳ ತಾಲ್ಲೂಕಿನ ಕಸಬಾ ಹೋಬಳಿಯ ಏಳುಗುಡ್ಡದ ಪ್ರದೇಶದಲ್ಲಿದೆ. ಈ ಸಮಯದಲ್ಲಿ ದಿಲ್ಲಿಯ ಅರಸೊತ್ತಿಗೆಯಲ್ಲಿ ಮಹಮ್ಮದ್ ಬಿನ್ ತುಘಲಕ್‌ನು ಅಧಿಕಾರವನ್ನು ವಹಿಸಿಕೊಂಡಿದ್ದನು. ಕುಮಾರ ರಾಮನ ಬಲದಿಂದ ಕಂಪಿಲರಾಯನು ತುಘಲಕ್‌ನನ್ನು ತನ್ನ ಪ್ರದೇಶಕ್ಕೆ ಬರದಂತೆ ತಡೆಯೊಡ್ಡಿದ್ದನು. ಅನಂತರ ತುಘಲಕ್ ಆಡಳಿತಕ್ಕೆ ಸಗರ ಪ್ರದೇಶವು ಒಳಪಟ್ಟಿತು. ಈ ಪ್ರದೇಶವನ್ನು ತುಘಲಕ್‌ನ ಸೋದರತ್ತೆಯ ಮಗ ಬಹಾವುದ್ದೀನನು ನೋಡಿಕೊಳ್ಳುತ್ತಿದ್ದನು. ಈ ಸಗರ ಪ್ರದೇಶ ಕಂಪಿಲರಾಯನ ರಾಜ್ಯದ ಉತ್ತರದ ಗಡಿಯಾಚೆ ಇದ್ದುದರಿಂದ ಇಬ್ಬರಲ್ಲಿಯೂ ಸ್ನೇಹ ಬೆಳೆಯಿತು. ತುಘಲಕ್‌ನು ಏರ್ಪಡಿಸಿದ ಸ್ಪರ್ಧೆಯೊಂದರಲ್ಲಿ ಬಹಾವುದ್ದೀನನು ವಿಜೇತನಾದುದರಿಂದ ಬಹದ್ದೂರ್‌ಖಾನ್ ಎಂಬ ಬಿರುದನ್ನು ತುಘಲಕ್‌ನು ನೀಡಿದನು. ಇದನ್ನು ಕಂಡು ಅಸೂಯೆಗೊಂಡ ಉಳಿದ ಹಲವು ಪ್ರಾಂತಾಧಿಕಾರಿಗಳು ಬಹದ್ದೂರ್ ಖಾನ್‌ನನ್ನು ಕಂಪಿಲರಾಯನ ಸ್ನೇಹ ಬೆಳೆಸಿಕೊಂಡಿರುವನೆಂದು ಕಂಪಿಲರಾಯನಿಗೆ ಪ್ರೋತ್ಸಾಹ ಕೊಡುತ್ತಾನೆಂಬ ಕಾರಣವನ್ನು ಹೇಳಿ ರಾಜನ ಮುಂದೆ ಇಕ್ಕಟ್ಟಿಗೆ ಎಳೆತಂದರು. ಈ ಹಿನ್ನೆಲೆಯಲ್ಲಿ ಬಹದ್ದೂರ್ ಖಾನ್‌ನನ್ನು ಸೆರೆಹಿಡಿಯಲು ಆಜ್ಞಾಪಿಸಿದನು. ಇದನ್ನರಿತ ಬಹದ್ದೂರ್ ಖಾನ್‌ನು ದಕ್ಷಿಣಕ್ಕೆ ಪ್ರಯಾಣ ಬೆಳೆಸಿದನು. ಮತ್ತು ಸ್ನೇಹಿತ ಕಂಪಿಲರಾಯನಲ್ಲಿ ಆಶ್ರಯಪಡೆದನು.

ಕಂಪಿಲರಾಯನ ಮಗ ಕುಮಾರ ರಾಮನು ಹಂಪೆಯ ದಕ್ಷಿಣಕ್ಕೆ ಇರುವ ಗುಡ್ಡದ ಸಾಲುಗಳಲ್ಲಿ ಗುಮ್ಮಟದಂತಿರುವ ಗುಡ್ಡದ ಮೇಲೆ ದುರ್ಗವನ್ನು ಕಟ್ಟಿಸಿದನು. ಇದುವೇ ಕುಮ್ಮಟ ದುರ್ಗ. ಕಂಪಿಲರಾಯನ ಆಶ್ರಯದಲ್ಲಿದ್ದ ಬಹದ್ದೂರ್ ಖಾನ್‌ನನ್ನು ಸೆರೆಹಿಡಿಯಲು ತುಘಲಕ್‌ನು ತನ್ನ ಸೇನಾಪತಿಯಾದ ನೇಮಿಖಾನ್‌ನನ್ನು ಕಳಿಸಿದನು. ನೇಮಿಖಾನ್‌ನು ಕುಮ್ಮಟ ದುರ್ಗದ ಯುದ್ಧದಲ್ಲಿ ಸೋತು ಹಿಂದಿರುಗಿದನು. ಸೋಲನ್ನು ಸಹಿಸದ ತುಘಲಕ್‌ನು ಮಾತಂಗಿ ಆಧಿಪತ್ಯದಲ್ಲಿ ಅಪಾರ ಸೈನ್ಯ ಕೊಟ್ಟು ಕುಮ್ಮಟ ದುರ್ಗಕ್ಕೆ ಕಳಿಸಿದನು. ಈ ಅಪಾರ ಸೈನ್ಯವು ಕುಮ್ಮಟ ದುರ್ಗವನ್ನು ಮುತ್ತಿಗೆ ಹಾಕಿತು.

ಕಂಪಿಲರಾಯನ ಜೊತೆಗೆ ಕಂಪಿಲರಾಯನ ಮಹಾಮಾಂಡಲಿಕನಾಗಿದ್ದ ತಿಮ್ಮರಾಜನು ಯುದ್ಧದಲ್ಲಿ ಸಹಾಯ ಮಾಡಿದನು. ಈ ಸಂದರ್ಭದಲ್ಲಿ ಕೊಪ್ಪಳವನ್ನು ತಿಮ್ಮರಾಜನು ನೋಡಿಕೊಳ್ಳುತ್ತಿದ್ದನು. ಕ್ರಿ.ಶ. ೧೨೨೭ರಲ್ಲಿ ಕಂಪಿಲರಾಯನು ಸೋಲುವುದರೊಡನೆ ಕೊಪ್ಪಳವು ದೆಹಲಿ ರಾಜರ ಕೈವಶವಾಯಿತು. ಸ್ವಾಭಿಮಾನಿಗಳಾದ ಕೊಪ್ಪಳದ ಜನತೆ ಇದನ್ನು ಸಹಿಸದಾದರು. ಚಾಲುಕ್ಯ ವಂಶದ ಸೋಮದೇವನ ನೇತೃತ್ವದಲ್ಲಿ ಸಿಡಿದೆದ್ದು ತುಘಲಕ್‌ನ ಅಧೀನದಲ್ಲಿದ್ದ ಕೊಪ್ಪಳವನ್ನು ಕ್ರಿ.ಶ. ೧೩೩೧ರಲ್ಲಿ ಅವನಿಂದ ಕಿತ್ತುಕೊಂಡಿತು. ಕ್ರಿ.ಶ. ೧೩೩೩ರಲ್ಲಿ ಹಂಪೆಯಲ್ಲಿ ಅವತರಿಸಿದ ವಿಜಯನಗರ ಸಾಮ್ರಾಜ್ಯ ಕೊಪ್ಪಳವನ್ನು ತನ್ನೆಡೆಗೆ ಸೆಳೆದುಕೊಂಡಿತು. ಹಿರೇಸಿಂಧೋಗಿಯ ಶಾಸನವು ಕೊಪ್ಪಳ ಪ್ರದೇಶವು ವಿಜಯನಗರ ಸಾಮ್ರಾಜ್ಯಕ್ಕೆ ಸೇರ್ಪಡೆಯಾದ ವಿವರಗಳನ್ನು ಒದಗಿಸುತ್ತದೆ. ಹಿರೇಸಿಂದೋಗಿಯ ಶಾಸನದ ಪಾಠ ಹೀಗಿದೆ :

ಶುಭಮಸ್ತು ಸ್ವಸ್ತಿ ಶ್ರೀಜಯಾಬ್ಬುದಯ ಶಾ
ಲಿವಾಹನ ಶಕವರುಷ ೧೪೪೩ನೆಯ ಉರುಶು
ಸಂವತ್ಸರದ ವಹಿಶಾಖ ಶು ೧ ಲೂ ಶ್ರೀಮನ್ಮ
ಹಾರಾಜಾಧಿರಾಜ ರಾಜಪರಮೇಶ್ವರ ಶ್ರೀವೀರ ಕ್ರುಷ್ಣ
ರಾಯ ಮಹಾರಾಯರು ಪ್ರುಥ್ವೀರಾಜ್ಯಂಗ್ಯ್ಯತ್ತಂ ಯಿರಲೂ
ಭಂಡಾರದ ಅಪ್ಪರಸಯ್ಯನವರ ಮಕ್ಕಳು ಭಂಡಾರದ ತಿ(ಂ)ಮ್ಮ
(ಪ್ಪ)ಯ್ಯನವರು ಕೊಪಣದ ಚೆ(ಂ)ನ್ನಕೇಶವದೇವರಿಗೆ ಸಮರ್ಪ್ಪಿಸಿದ ಗ್ರಾ
ಮದ ಧರ್ಮ್ಮ ಶಾಸನದ ಕ್ರಮವೆಂತೆಂದರೆ ನಮಗೆ ಕ್ರುಷ್ಣರಾಯ ಮಹಾ
ರಾಯರು ನಯಕತನಕೆ ಪಾಲಿಸಿದ ಕೊಪಣದ ಸೀಮೆ ಒಳಗ
ಣ ಹಿರಿಯ (ಸಿಮ್ದೋಗಿ) ಗ್ರಾಮವನು ದೇವರ ಅಮೃತಪಡಿ ಅಂಗ
ರಂಗವೈಭೋಗ ಮಾಸೋಚ್ಛಾಹ ಮುಂತಾದ ದೇವರ ಸೇವೆಗೆ ಹಿರಿಯ
ಸಿಂದೋಗಿಯ ಗ್ರಾಮವನು ಸಮರ್ಪ್ಪಿಸಿದೆವಗಿ ಆ ಸಿಂದೋಗಿಯ ಗ್ರಾ

ಮಕೆ ಆವರೊಬರು ತಪ್ಪಿದವರು ತಂಮ ಮಾತ್ರು ಪಿತ್ರುಗಳನು ವಾರಣಾ
ಸಿಯಲ್ಲಿ ವಧೆಯ ಮಾಡಿದ ಪಾತಕಕ್ಕೆ ಹೋಹರೂ ಸಹಸ್ರ ಕಪಿಲೆಯ
ನು ವಧೆಯ ಮಾಡಿದ ಪಾತಕೆ ಹೋಹರು ಎಂದು ಕೊಟ್ಟ ಸಿಂದೋಗಿಯ
ಗ್ರಾಮಧರ್ಮಶಾಸನ ॥ ದಾನಪಾಲನಂ ............. ಮಧ್ಯೆದಾನಾಬ್ರಹ್ಮ
ನ್ರುಪಾಲನಂದಾತಗಮವಾ ........................... ತಿಪಾಲನಾದಚ್ಯುತ
ಸ್ವದತ್ತಂ ದ್ವಿಗುಣಂ ಪರದತ್ತಂ
ಹಾರೇಣ ಸ್ವದತ್ತಂ ನಿ ............................................... ನಿ
ನಿಳೆದವಾಯ .................................. ...................
(ತ್ರುಟಿತ)

(ಶಾಲಿವಾಹನ ಶಕ ೧೪೪೩, ಉರುಶು (ವೃಷ) ವಯಿಶಾಖ, ಶು. ೧ ರಲ್ಲಿ ಅಂದರೆ ಕ್ರಿ.ಶ. ೮-೪-೧೫೨೧ರಂದು ಕೃಷ್ಣರಾಯಮಹಾರಾಯನು ರಾಜ್ಯಭಾರ ಮಾಡುತ್ತಿದ್ದಾಗ ಭಂಡಾರದ ಅಪ್ಪರಸಯ್ಯನ ಮಗ ಭಂಡಾರದ ತಿಮ್ಮಪ್ಪಯ್ಯನು ಕೊಪಣದ ಚೆನ್ನಕೇಶವ ದೇವರಿಗೆ ಹಿರಿಯಸಿನ್ದೋಗಿ ಗ್ರಾಮವನ್ನು ಸಮರ್ಪಿಸುತ್ತಾನೆ. ಈ ಗ್ರಾಮವು ಕೃಷ್ಣರಾಯನು ಇವರಿಗೆ ಪಾಲಿಸಿದ ಕೊಪಣದ ಸೀಮೆಯಲ್ಲಿತ್ತು. ಈ ಗ್ರಾಮದ ಆದಾಯವನ್ನು ದೇವರ ಅಮೃತಪಡಿ, ಅಂಗರಂಗವೈಭವ, ಮಾಸೋತ್ಸವ ಮುಂತಾದವುಗಳಿಗೆ ವ್ಯಯಿಸಬೇಕೆಂದಿದೆ. (ಕೊಪ್ಪಳ ಜಿಲ್ಲೆಯ ಶಾಸನಗಳು - ಕನ್ನಡ ವಿಶ್ವವಿದ್ಯಾಲಯ, ಹಂಪಿ ಪುಟ- ೪೩)

## ೪. ೧೧. ವಿಜಯನಗರದ ಅರಸರು

ವಿಜಯನಗರ ಸಾಮ್ರಾಜ್ಯದ ಸ್ಥಾಪನೆ ದಕ್ಷಿಣ ಭಾರತದ ಸಂಸ್ಕೃತಿ ಚರಿತ್ರೆಯಲ್ಲಿ ಅದ್ವಿತೀಯವಾದ ಘಟನೆ. ಇಲ್ಲಿನ ರಾಜಕೀಯ ಧಾರ್ಮಿಕ ಜೀವನದ ಸಂದಿಗ್ಧ ಪರಿಸ್ಥಿತಿಯಲ್ಲಿ ಈ ಸಾಮ್ರಾಜ್ಯವು ಹುಟ್ಟಿಕೊಂಡಿತು. ಈ ವೇಳೆಗಾಗಲೇ ಉತ್ತರ ಭಾರತವು ಸಂಪೂರ್ಣವಾಗಿ ಮುಸ್ಲಿಮರ

ಆಳ್ವಿಕೆಗೆ ಒಳಪಟ್ಟಿತ್ತು. ಜೊತೆಗೆ ಆ ಮುಸ್ಲಿಮರ ಹಿಡಿತ ದಕ್ಷಿಣದ ಕಡೆಗೆ ವ್ಯಾಪಿಸತೊಡಗಿತ್ತು. ಹೊಯ್ಸಳ ಸಾಮ್ರಾಜ್ಯದ ಅವನತಿ ಆಗಲೇ ನಿರ್ಧಾರವಾಗಿತ್ತು. ಮಲ್ಲಿಕಾಫೂರ್ ದಕ್ಷಿಣದ ಕಡೆಗೆ ದಂಡೆತ್ತಿ ಬಂದು ವಿಜಯ ದುಂದುಭಿಯನ್ನು ಬಾರಿಸತೊಡಗಿದನು. ದೆಹಲಿಯ ಸುಲ್ತಾನ್ ಮಹಮ್ಮದ್ ಬಿನ್ ತುಘಲಕ್‌ನ ಕಾಲದಲ್ಲಿ ಈ ಭೀತಿ ಇನ್ನೂ ಹೆಚ್ಚಿತು. ದೇಶವೆಲ್ಲಾ ಅವ್ಯವಸ್ಥಿತವಾಯಿತು. ಅತ್ಯಂತ ಸುಸಂಘಟಿತವೂ ಸುಸಜ್ಜಿತವಾದ ರೀತಿಯಲ್ಲಿ ಮಹಮ್ಮದ್ ಬಿನ್ ತುಘಲಕ್‌ನ ದಾಳಿಗಳನ್ನು ಎದುರಿಸದೇ ಹೋಗಿದ್ದರೆ ದಕ್ಷಿಣ ಭಾರತವು ಮುಹಮ್ಮದೀಯರ ವಶವಾಗುತ್ತಿದ್ದುದರಲ್ಲಿ ಸಂದೇಹವೇ ಇಲ್ಲ. ಈ ಅಪಾಯವನ್ನರಿತು ಅದನ್ನು ಎದುರಿಸಲು ಹಿಂದೂ ಸಾಮ್ರಾಜ್ಯವೊಂದರ ಅಗತ್ಯ ಅನಿವಾರ್ಯವಾಯಿತು. ಈ ಸಾಂದರ್ಭಿಕ ಬಿಕ್ಕಟ್ಟನ್ನು ನಿವಾರಿಸುವಲ್ಲಿ ವಿಜಯನಗರ ಸಾಮ್ರಾಜ್ಯದ ಸ್ಥಾಪನೆ ಯಶಸ್ವಿಯಾಯಿತು. ವಿದ್ಯಾರಣ್ಯರ ನಿರ್ದೇಶನದಲ್ಲಿ ಹಿಂದೂಗಳ ಸಾಮ್ರಾಜ್ಯ ಶಾಹಿ ಧೋರಣೆ ಟಿಸಿಲೊಡೆಯಿತು. ತನ್ಮೂಲಕ ದಕ್ಷಿಣ ಭಾರತದ ಸಾರಸಂಕೇತವಾಗಿ ಬೃಹದಾಕಾರವಾಗಿ ಬೆಳೆಯತೊಡಗಿತು. ಹಿಂದೂ ರಾಜ್ಯವನ್ನು ಅದರಲ್ಲೂ ಧರ್ಮಸಾಮ್ರಾಜ್ಯವನ್ನು ಕಟ್ಟುವ ತವಕ ವಿಜಯನಗರದ ಅರಸರಲ್ಲಿ ಕೊನೆಯ ಕ್ಷಣದವರೆಗೂ ಕಂಡುಬರುತ್ತಿತ್ತು.

ಸಂಗಮನ ಮಕ್ಕಳಾದ ಹರಿಹರ ಮತ್ತು ಬುಕ್ಕರು ವಿಜಯನಗರ ಸಾಮ್ರಾಜ್ಯವು ಹುಟ್ಟಿಕೊಳ್ಳಲು ನೇರವಾಗಿ ಕಾರಣರಾದರು. ರಾಬರ್ಟ್ ಸಿವೆಲ್ ಅವರು ಹೇಳುವಂತೆ ಹರಿಹರ ಮತ್ತು ಬುಕ್ಕ ಸಹೋದರರು ಓರಂಗಲ್‌ನ ಪ್ರತಾಪರುದ್ರದೇವನ ಬಳಿಯಲ್ಲಿದ್ದರು. ಮುಸ್ಲಿಮರ ದಾಳಿಯಿಂದ ಓರಂಗಲ್ ನಾಶವಾದಮೇಲೆ ಆನೆಗುಂದಿಗೆ ಬಂದು ಅಲ್ಲಿ ಆಶ್ರಯವನ್ನು ಪಡೆದರು. ಮುಸ್ಲಿಂ ದೊರೆಗಳ ಅತ್ಯಾಚಾರದಿಂದ ಅವರ ಮನಸ್ಸು ನೊಂದಿತ್ತು. ದೇಶ ಮತ್ತು ಧರ್ಮರಕ್ಷಣೆಗೆ ಪ್ರತಿಜ್ಞೆ ಮಾಡಿದ್ದರು. ಆನೆಗುಂದಿಗೆ ಬಂದು ಅಲ್ಲಿ ಕಂಪಿಲರಾಜನ ಬಳಿಯಲ್ಲಿ ಮಂತ್ರಿ ಮತ್ತು ಭಂಡಾರದ ಅಧಿಕಾರಿಗಳಾಗಿ ಸ್ಥಾನವನ್ನು ಪಡೆದರು. ಸುಮಾರು ೧೩೩೪ರಲ್ಲಿ ಬಹಾವುದ್ದೀನನಿಗೆ ಆಶ್ರಯವನ್ನು ಕೊಟ್ಟ ಕಾರಣಕ್ಕಾಗಿ ತುಘಲಕ್‌ನು ಆನೆಗುಂದಿಯನ್ನು ಮತ್ತು ಕಂಪಿಲದುರ್ಗವನ್ನು ಮುತ್ತಿ ಕಂಪಿಲರಾಯನನ್ನು ಸೋಲಿಸಿ

ಅವುಗಳನ್ನು ವಶಪಡಿಸಿಕೊಂಡನು. ಅಲ್ಲಿ ತನ್ನ ಪ್ರತಿನಿಧಿಯನ್ನಾಗಿ ಮಲ್ಲಿಕ್ ಮಹಮ್ಮದ್‌ನನ್ನು ನೇಮಿಸಿ ದೆಹಲಿಗೆ ಹಿಂತಿರುಗಿದನು. ಮಹಮ್ಮದ್‌ನಿಗೆ ಅಲ್ಲಿನ ಜನರನ್ನು ವಶದಲ್ಲಿಟ್ಟುಕೊಂಡು ಆಳುವುದು ಕಷ್ಟವಾಯಿತು. ರಾಜ್ಯವನ್ನು ಅವರಿಗೇ ಕೊಡಲು ಉದ್ದೇಶಿಸಿ ಹರಿಹರನನ್ನು ರಾಜನನ್ನಾಗಿಯೂ ಬುಕ್ಕನನ್ನು ಮಂತ್ರಿಯನ್ನಾಗಿಯೂ ಮಾಡಿ ಹೊರಟು ಹೋದನು. ಈ ಸಹೋದರರಿಂದಲೇ ಮುಂದೆ ವಿಜಯನಗರ ಸ್ಥಾಪಿತವಾಯಿತು. ಈ ಕಾರಣವನ್ನು ರಾಬರ್ಟ್ ಸಿವೆಲ್ ಅವರು ತುಂಬಾ ವಿಷದವಾಗಿ ಚರ್ಚಿಸಿದ್ದಾರೆ. ಕಂಪಿಲರಾಯ ಮತ್ತು ಅವನ ಮಗ ಕುಮಾರರಾಮ ಇವರ ಪಾತ್ರವು ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಲ್ಲಿ ಮಹತ್ವಪೂರ್ಣದ್ದಾಗಿಯೇ ಕಾಣುತ್ತದೆ ಎಂದು ರಾಬರ್ಟ್ ಸಿವೆಲ್ ಅಭಿಪ್ರಾಯಪಡುತ್ತಾರೆ. ಅದೇನೇ ಅಭಿಪ್ರಾಯವಿದ್ದರೂ ಕನ್ನಡ ವಂಶದ ಸಂಗಮನ ಮಕ್ಕಳಾದ ಹರಿಹರ - ಬುಕ್ಕರು ವಿಜಯನಗರ ಸ್ಥಾಪಕರು ಎಂಬುದರಲ್ಲಿ ಸಂದೇಹವಿಲ್ಲ. ಅವರ ಈ ಕಾರ್ಯದಲ್ಲಿ ಅನೇಕ ಶಕ್ತಿಗಳು ನೆರವಾಗಿವೆ. ಪ್ರದೇಶದ ಸಂದಿಗ್ಧ ಪರಿಸ್ಥಿತಿಯನ್ನು ಎದುರಿಸಲು ಎಲ್ಲ ಸತ್ವಶಕ್ತಿಗಳು ಒಟ್ಟುಗೂಡಿ ವಿಜಯನಗರ ಸಾಮ್ರಾಜ್ಯ ಮೈವೆತ್ತಿತ್ತು ಎನ್ನುವುದು ಮಾತ್ರ ನಿರ್ವಿವಾದ.

ಹಿರೇ ಸಿಂಧೋಗಿಯ ಶಾಸನವು ಕೊಪ್ಪಳ ಪ್ರದೇಶವು ಕ್ರಿ.ಶ. ೧೫೩೮ರಲ್ಲಿ ವಿಜಯನಗರ ಸಾಮ್ರಾಜ್ಯಕ್ಕೆ ಸೇರ್ಪಡೆಯಾಗಿತ್ತೆಂದು ಸ್ಪಷ್ಟವಾಗಿ ತಿಳಿಸುತ್ತದೆ. ಹಿರೇ ಸಿಂಧೋಗಿಯ ಶಾಸನದ ಪೂರ್ಣಪಾಠವು ಹೀಗಿದೆ :

1. Subham=astu(1*) Svasti(1*) Sri-Jay-abhdhudaya-sa.
2. Livahana-ska-varsha 1443-neya Urusu
3. Samvatsarada Vayisakha su 1-lu Srima (m) n-ma-
4. garajadhiraja raja-paramesvara Sri-vira-Krushana
5. raya-maharayaru pruthvi-rajayam gyai (vu) t tai yiralu
6. Bhamdarada Apparasayyanavara makkaly Bhamdarada Ti (m mma.

7. (ppa) yyanavaru Kopanada Che(m) nna-Kesavadevarige samarppisirays maha.
8. mada dharma-sasanada kramav=emtemdare(1*) namage Krushnarayamaha.
9. rayapu nayakatanake paliside kopanada sime-olaga
10. na HIRIYA (SIMDO) gi -gramavanu devara amrutapadi amga.

ಕೊಪ್ಪಳ ಪ್ರದೇಶವು ಬಹಮುನಿ ಸುಲ್ತಾನರ ಮತ್ತು ವಿಜಯನಗರ ಸಾಮ್ರಾಜ್ಯದರಸರ ಕಾಲದಲ್ಲಿ ತೂಗುಯ್ಯಾಲೆಯಾಟವಾಡಿದೆ. ಕೃಷ್ಣಾ ಮತ್ತು ತುಂಗಭದ್ರಾ ಪ್ರದೇಶದ ನಡುವಿನ ದೋ-ಆಬ್ ಪ್ರದೇಶವೆಂದು ಗುರುತಿಸಿಕೊಂಡಿದೆ. ದೋ-ಆಬ್ ಎಂದರೆ ಫಲವತ್ತುಳ್ಳದ್ದು ಎಂದು ಅರ್ಥವಾಗುತ್ತದೆ. ವಿಜಯನಗರ ಮತ್ತು ಬಹಮುನಿ ಸುಲ್ತಾನರ ಅರಸರಿಗೆ ಈ ದೋ-ಆಬ್ ಪ್ರಾಂತ್ಯದ ಕಾರಣಕ್ಕಾಗಿ ಹಲವಾರು ಬಾರಿ ಯುದ್ಧಗಳು ನಡೆದಿವೆ. ರಾಯಚೂರು ಮುದಗಲ್, ಕೊಪ್ಪಳ ಈ ಪ್ರದೇಶಗಳಿಗಾಗಿ ಹಲವು ಬಾರಿ ಯುದ್ಧಗಳು ನಡೆದಿವೆ. ಕೆಲವೊಮ್ಮೆ ವಿಜಯನಗರದ ಅರಸರು ವಿಜಯಶಾಲಿಗಳಾಗಿದ್ದರೆ ಮತ್ತೆ ಕೆಲವು ಬಾರಿ ಬಹಮುನಿ ಸುಲ್ತಾನರ ಅರಸುಗಳು ವಿಜಯ ಶಾಲಿಗಳಾಗಿದ್ದರೆ. ಕೊಪ್ಪಳವು ವಿಜಯನಗರದ ರಾಜಧಾನಿಯಾದ ಹಂಪೆಗೆ ಅತ್ಯಂತ ಕಡಿಮೆ ದೂರದಲ್ಲಿದ್ದರೂ ಎರಡು ಮೂರು ಬಾರಿ ವಿಜಯನಗರದ ಸಾಮ್ರಾಜ್ಯವನ್ನು ಬಿಟ್ಟು ಬಹಮುನಿ ಸಾಮ್ರಾಜ್ಯವನ್ನು ಸೇರಿಕೊಂಡಿದೆ. ಆದರೆ ವಿಜಯನಗರದ ಅರಸರ ಅಂತ್ಯದವರೆಗೂ ಹೆಚ್ಚು ದಿನಗಳ ಕಾಲ ವಿಜಯನಗರದ ಅರಸರ ಕೈಯಲ್ಲಿದೆ. ಹಂಪೆಗೆ ಸುಮಾರು ೪೦ ಕಿ.ಮೀ ಗಳ ಅಂತರದಲ್ಲಿರುವ ಕೊಪ್ಪಳವು ವಿಜಯನಗರದ ಅರಸರ ಸಂದರ್ಭದಲ್ಲಿ ಹಲವು ಏರುಪೇರುಗಳನ್ನು ಕಂಡುಂಡಿದೆ. ಕೊಪ್ಪಳ ಪ್ರದೇಶದಲ್ಲಿ ಜೈನರು ಹೆಚ್ಚಾಗಿದ್ದುದರಿಂದ ಎರಡು ಮೂರು ಬಸದಿಗಳನ್ನು ಕಟ್ಟಿಸಿದರೆಂದು ಶಾಸನವೊಂದರ ಉಲ್ಲೇಖವಿದೆ. ಜೊತೆಜೊತೆಗೆ ಹಿಂದೂ ದೇವಾಲಯಗಳು ಅಲ್ಲಿ ಹುಟ್ಟಿಕೊಂಡಿವೆ. ಹುಲಿಗೆಯ ಸೋಮನಾಥ ದೇವಾಲಯ ಪ್ರೌಢದೇವರಾಯನ ಕಾಲದಲ್ಲಿ ಅಭಿವೃದ್ಧಿಗೊಂಡುದರ ಬಗೆಗೆ

ಸೋಮನಾಥ ದೇವಾಲಯದ ಮುಂಬದಿಯಲ್ಲಿರುವ ಶಾಸನವು ತಿಳಿಸುತ್ತದೆ. ಹುಲಿಗಿಯು ಕೊಪ್ಪಳಕ್ಕೆ ತೀರ ಸಮೀಪದ ಊರಾಗಿದೆ.

## ೪. ೧೨. ಬಹಮನಿ ಸುಲ್ತಾನರು

ಮಹಮ್ಮದ್ ಬಿನ್ ತುಘಲಕ್‌ನ ಆಡಳಿತದ ಕೊನೆಯಲ್ಲಿ ದಿಲ್ಲಿಯಲ್ಲಿ ಒಡಕುಂಟಾಯಿತು. ತುಘಲಕ್‌ನು ದಕ್ಷಿಣಭಾರತದ ಪ್ರಬಲ ಸುಬೇದಾರ್ ಅಮೀರ್ ಸಾದಹ್‌ನು ಮಹಮ್ಮದ್ ಬಿನ್ ತುಘಲಕ್‌ನ ವಿರುದ್ಧ ತಿರುಗಿ ಬಿದ್ದನು. ಅವನ ದಕ್ಷಿಣದ ರಾಜಧಾನಿ ದೌಲತಾಬಾದನ್ನು ಹಿಡಿದುಕೊಂಡನು. ಇಳಿ ವಯಸ್ಸಿನಲ್ಲಿ ವಿಶ್ರಾಂತಿಯನ್ನು ಬಯಸಿದ್ದ ಸಾದಹ್ ತಾನಾಗಿಯೇ ಸಿಂಹಾಸನವನ್ನು ತ್ಯಜಿಸಿ ತನ್ನ ಮಗನಾದ ಹಸನ್ನನಿಗೆ ಸಿಂಹಾಸನವನ್ನು ಬಿಟ್ಟುಕೊಟ್ಟನು. ಸಕಲ ಸರದಾರರು ಇದಕ್ಕೆ ಬೆಂಬಲವನ್ನು ನೀಡಿದರು. ಹಸನ್ನನು ೩ನೇ ಆಗಸ್ಟ್ ೧೩೪೭ರಲ್ಲಿ ಸಿಂಹಾಸನವನ್ನೇರಿ ತನ್ನ ಮನೆತನದ ಬಹುಮನ್ ಹೆಸರಿನಿಂದ ಆಡಳಿತ ಪ್ರಾರಂಭಿಸಿದನು. ಅಂದಿನಿಂದ ಇದಕ್ಕೆ ಬಹಮನ್ ರಾಜ್ಯವೆಂದು ಗುರುತಿಸಲ್ಪಟ್ಟಿದೆ. ಹಸನ್‌ಗಂಗೂ ಬಹಮನ್ ಶಾ ದಕ್ಷಿಣದಲ್ಲಿ ಪ್ರಥಮಬಾರಿಗೆ ಇಸ್ಲಾಂ ಸಾಮ್ರಾಜ್ಯವನ್ನು ಕಟ್ಟಿದನು. ದೌಲತಾಬಾದ್ ಮೊದಲು ರಾಜಧಾನಿಯಾಗಿತ್ತಾದರೂ ಸುರಕ್ಷತೆಯ ದೃಷ್ಟಿಯಿಂದ ಕಲಬುರ್ಗಿಗೆ ರಾಜಧಾನಿಯನ್ನು ಸ್ಥಳಾಂತರಿಸಿದನು.

ಬಹಮನಿ ರಾಜ್ಯ ಮಹಮ್ಮದ್ ಷಾ ನ ಕಾಲದಲಿ ಕ್ರಿ.ಶ. ೧೪೯೦ರಲ್ಲಿ ಒಡೆದುಹೋಯಿತು. ಅಹಮ್ಮದ್ ನಗರದ ಸುಬೇದಾರ ಮಲಿಕ್ ಅಹಮದ್ ಬಿರಾರ್‌ನ ಸುಬೇದಾರ ತತ್ವೊದಿಲ್ಲಾ ಬಿಜಾಪುರದ ಸುಬೇದಾರ ಯೂಸಿಫ್ ಆದಿಲ್ ಷಾ ಸ್ವತಂತ್ರರಾದರು. ಬಿಜಾಪುರದ ಅರಸರು ತರ್ದವಾಡಿ ಎಡದೊರೆಯ ನಾಡುಗಳ ಕೆಲ ಪ್ರದೇಶಗಳ ಒಡೆಯರಾಗಿದ್ದರು. ಬಿಜಾಪುರದ ಅರಸರಿಗೂ ವಿಜಯನಗರ ಈ ಅರಸರಿಗೂ ದೋ ಆಬ್ ಪ್ರದೇಶಕ್ಕಾಗಿ (ಕೃಷ್ಣಾ ಮತ್ತು ತುಂಗಭದ್ರಾ ನಡುವಣ ಪ್ರದೇಶ)ಕ್ಕಾಗಿ ಆಗಾಗ್ಗೆ ಸಂಘರ್ಷಗಳು ಏರ್ಪಡುತ್ತಿದ್ದವು. ಈ ಮೊದಲು ಕೊಪ್ಪಳವು ಇದ್ದಿದ್ದ ರಾಯಚೂರು

ಜಿಲ್ಲೆಯಲ್ಲಿ ಈ ಕಾಳಗಗಳೇರ್ಪಡುತ್ತಿದ್ದವು. ವಿಜಯನಗರದ ಆಡಳಿತದಲ್ಲಿದ್ದ ಕೊಪ್ಪಳಕ್ಕೆ ಈ ಯುದ್ಧಗಳ ಬಿಸಿ ತಟ್ಟುತ್ತಲೇ ಇತ್ತು. ಆದಿಲ್ ಷಾನ ಮನೆತನದ ಎರಡನೆಯ ಇಬ್ರಾಹಿಂ ಬಲಾಢ್ಯನಾಗಿದ್ದನು ಮತ್ತು ಪರಾಕ್ರಮಿಯಾಗಿದ್ದನು. ಉಳಿದ ಪ್ರಾಂತ್ಯಗಳ ಅರಸರುಗಳನ್ನು ಒಗ್ಗೂಡಿಸಿಕೊಂಡು ವಿಜಯನಗರದ ಅರಸ ರಾಮರಾಯನನ್ನು ಕೃಷ್ಣಾನದಿಯ ದಂಡೆಯ ಮೇಲಿರುವ ರಕ್ಕಸತಂಗಡಿಯಲ್ಲಿ ಸೋಲಿಸಿದನು. ಕ್ರಿ.ಶ. ೧೫೬೫ರಲ್ಲಿ ನಡೆದ ಈ ಕಾಳಗ ಕೊಪ್ಪಳದ ಪಾಲಿಗೆ ಆಘಾತಕಾರಿ ಪರಿಣಾಮವನ್ನೇ ಉಂಟುಮಾಡಿತು. ಈವರೆಗೆ ಕೊಪ್ಪಳ ಪ್ರದೇಶವು ಹಿಂದೂ ಅರಸರಿಂದ ಆಳಿಸಿಕೊಳ್ಳುತ್ತಿತ್ತು. ಕ್ರಿ.ಶ. ೧೫೬೫ರ ಈ ದುರಂತದ ನಂತರ ಕೊಪ್ಪಳದ ಚರಿತ್ರೆಯು ಹೊಸದೊಂದು ಸಾಂಸ್ಕೃತಿಕ ಆಯಾಮವನ್ನು ಪಡೆದುಕೊಂಡಿತು. ತುಂಗಭದ್ರಾ ನದಿಯ ದಂಡೆಯ ಉತ್ತರದ ಪ್ರದೇಶಗಳನ್ನು ಎರಡನೆಯ ಇಬ್ರಾಹಿಂ ಆದಿಲ್ ಷಾ ತನ್ನ ಆಡಳಿತಕ್ಕೆ ಸೇರಿಸಿಕೊಂಡನು. ಆ ತರುವಾಯ ಕೊಪ್ಪಳವು ವಿಜಾಪುರ ಅರಸರ ಕೈವಶವಾಯಿತು ಎಂದು ಇಂಡೋ ಇಸ್ಲಾಮಿಕ್ ಶಾಸನವು ತಿಳಿಸುತ್ತದೆ. ಕೊಪ್ಪಳದ ಕೋಟೆಯನ್ನು ಇಬ್ರಾಹಿಂ ಅದಿಲ್‌ಷಹಾನೇ ಕಟ್ಟಿಸಿರುವನೆಂಬ ಬಲವಾದ ಶಂಕೆಯನ್ನು ಫ್ಲೀಟ್ ಅಭಿಪ್ರಾಯಪಡುತ್ತಾರೆ. ಅವರ ಈ ಅಭಿಪ್ರಾಯವು ಇದೇ ಶಾಸನವನ್ನು ಅವಲಂಬಿಸಿದೆ. ಆ ಶಾಸನದ ಆಶಯ ಈ ತೆರನಾಗಿದೆ :

"During the reign of the king, the refuge of the world, Ibrahim Adili Shah II (May/God perpetuate his Kingdom;) and during the period of influence of the exalted Khan, Yaqut Khan (may god preserve his glory;) Ghazi Khan, the Commandant of the Fort of Koppal build this mosque............

## ೪. ೧೩. ಮರಾಠರು

ಕ್ರಿ.ಶ. ೧೫೨೬ ರಿಂದ ೧೬೫೮ರ ವರೆಗೆ ದೆಹಲಿಯ ಗದ್ದುಗೆಯಲ್ಲಿದ್ದ ಮೊಗಲ್ ಆಳರಸರ ಕೊನೆಯ ಘಟ್ಟದಲ್ಲಿ ಕೊಪ್ಪಳವು ಅವರ ಆಳ್ವಿಕೆಗೆ ಒಳಪಟ್ಟಿತು. ಆದರೆ ಶಿವಾಜಿ ಔರಂಗಜೇಬನನ್ನು ಸೋಲಿಸುವುದರ ಮೂಲಕ ಕೊಪ್ಪಳವನ್ನು ತನ್ನ ವಶಕ್ಕೆ ತೆಗೆದುಕೊಂಡನು. ಮಹಾರಾಷ್ಟ್ರದಲ್ಲಿ ರಾಜ್ಯವನ್ನು ಕಟ್ಟಿದ ಶಿವಾಜಿ ಎಲ್ಲರ ಅಪೇಕ್ಷೆಯಂತೆ ಛತ್ರಪತಿ ಬಿರುದನ್ನು ಹೊಂದಿದ್ದನು. ಶಿವಾಜಿಯು ತನ್ನ ದಕ್ಷಿಣ ಭಾರತದ ದಿಗ್ವಿಜಯದಲ್ಲಿ ಕೊಪ್ಪಳದಲ್ಲಿ ಗೆದ್ದು ತನ್ನ ತಮ್ಮ ವೆಂಕೋಜಿಗೆ ಬಿಟ್ಟುಕೊಟ್ಟನು. ಕಾಲಾನಂತರ ಬಿಜಾಪುರದ ಅರಸರು ಇದನ್ನು ತಮ್ಮ ರಾಜ್ಯಕ್ಕೆ ಸೇರಿಸಿಕೊಂಡರು. ಮರಾಠರು ಬಿಜಾಪುರದ ಅರಸರಿಂದ ಗೆದ್ದುಕೊಂಡ ಈ ಕೊಪ್ಪಳವನ್ನು ಅಬ್ದುಲ್ ರಹೀಮ್ ಉರುಫ್ ಒಂದನೆಯ ಬಹಲೋಲ್‌ನಿಗೆ ಜಹಗೀರನ್ನಾಗಿ ಕೊಟ್ಟರು. ಈ ಬಹಲಾಲಿಯು ತನ್ನ ಸಂಬಂಧಿ ಹುಸೇನ್‌ನಿಗೆ ಇದರ ಆಡಳಿತವನ್ನು ವಹಿಸಿಕೊಟ್ಟನು. ಛತ್ರಪತಿ ಶಿವಾಜಿಯ ಆದೇಶದಂತೆ ಶಿವಾಜಿಯ ದಳಪತಿಯಾದ ಹಂಬೀರರಾವ್ ನೇತೃತ್ವದಲ್ಲಿ ಕೊಪ್ಪಳಕ್ಕೆ ಮುತ್ತಿಗೆ ಹಾಕಲಾಯಿತು. ಜನವರಿ ೧೬೭೭ರಲ್ಲಿ ಯರಂಬರಿಯಲ್ಲಿ (ಯಲಬುರ್ಗಾ) ಯುದ್ಧ ನಡೆಯಿತು. ಹುಸೇನ್‌ನು ಸೋಲನ್ನು ಅನುಭವಿಸಬೇಕಾಯಿತು. ಕೊಪ್ಪಳ ಕೋಟೆ ಹಂಬೀರರಾವ್‌ನ ವಶವಾಯಿತು. ಇದನ್ನು ಗೆದ್ದುಕೊಂಡ ಹಿನ್ನೆಲೆಯಲ್ಲಿ ಶಿವಾಜಿಯು ತನ್ನ ಆರಾಧ್ಯ ದೇವತೆ ಭವಾನಿಯನ್ನು ಕೊಪ್ಪಳದ ಗಿರಿದುರ್ಗದ ಮುಂದೆ ತಂದು ಪ್ರತಿಷ್ಠಾಪಿಸಿದನು. ಈ ಭವಾನಿ ಗುಡಿ ಇರುವ ಕೊಪ್ಪಳವು ಶಿವಾಜಿಯ ಸಾಮ್ರಾಜ್ಯಕ್ಕೆ ಸೇರ್ಪಡೆಯಾಯಿತು. ಆದರೆ ಇದು ಬಹುದಿನಗಳವರೆಗೆ ಅವರ ಕೈಯಲ್ಲಿ ಇರಲಿಲ್ಲ. ಕೆಲವೇ ವರ್ಷಗಳಲ್ಲಿ ಬಿಜಾಪುರದ ಅರಸು ಈ ಕೊಪ್ಪಳವನ್ನು ಮತ್ತೆ ಸ್ವಾಧೀನಕ್ಕೆ ತೆಗೆದುಕೊಂಡನು.

## ೪. ೧೪. ಹೈದರಾಬಾದಿನ ನಿಜಾಮರ ಆಡಳಿತ ಮತ್ತು ಕೊಪ್ಪಳದಲ್ಲಿ ಸ್ವಾತಂತ್ರ್ಯ ಸಂಗ್ರಾಮ

ಮೊಘಲರ ಅರಸು ಮಹಮ್ಮದ್ ಶಾನು ಕ್ರಿ.ಶ. ೧೭೧೯ರಲ್ಲಿ ದಿಲ್ಲಿ ಸಿಂಹಾಸನವೇರಿದನು. ಈ ಅರಸು ಅಶಫ್‌ಜಾಹ ವಂಶದ ಮೀರಕಮರುದ್ದೀನನನ್ನು ಮುಘಲರ ದಕ್ಷಿಣ ಭಾರತದ ಸುಬೇದಾರನೆಂದು ನಿಯಮಿಸಿ ಅವರ ಸುಬಾ ಔರಂಗಬಾದಿಗೆ ಕಳುಹಿಸಿದನು. ಮಹಮ್ಮದ್ ಶಾಹನ ವಿಲಾಸಿ ಜೀವನ ಮತ್ತು ರಾಜ್ಯದ ವ್ಯವಹಾರದಲ್ಲಿ ಅಲಕ್ಷತನ, ಅರಾಜಕತೆಗೆ ಎಡೆಮಾಡಿದವು. ಅರಸು ಮಹಮ್ಮದ್‌ನ ಅಜ್ಞೆಯಂತೆ ದಿಲ್ಲಿಗೆ ಮೀರಕಮರುದ್ದೀನನು ಬಂದು ಕ್ರಿ.ಶ. ೧೭೨೨ರಲ್ಲಿ ಅವನ ಪ್ರಧಾನಿಯಾದನು. ಇತ್ತು ಸುಬಾದಲ್ಲಿ ದಂಗೆ ಏಳಲು ಔರಂಗಾಬಾದಿಗೆ ಕಮರುದ್ದೀನನನು ಮರಳಿ ದಂಗೆಗಳನ್ನು ಹತ್ತಿಕ್ಕಿ ಶಾಂತಿ ನೆಲೆಸುವಂತೆ ಮಾಡಿದನು. ಮೊಘಲ ಸುಬಾ ಬೆಂಗಾಲದ ಸುಬೇದಾರ ಅಲೀವರ್ದಿಖಾನ್ ಸ್ವತಂತ್ರನಾದನು. ಔಂಧದ (ಅಯೋಧ್ಯಾ) ಸುಬೇದಾರ, ಸಾದತ್‌ಖಾನನು ಸ್ವತಂತ್ರನಾದನು. ಅಂತೆಯೇ ಮೀರ ಕಮರುದ್ದೀನ್ ನಿಜಾಮ್ ಉಲ್-ಮುಲ್ಕ್ ಎಂದು ಕ್ರಿ.ಶ. ೧೭೨೪ರಲ್ಲಿ ಸ್ವತಂತ್ರ ರಾಜನೆಂದು ಸಾರಿದನು.

**ನಿಜಾಮು ಅರಸರ ವಂಶವೃಕ್ಷ**

(೧೭೨೪ ರಿಂದ ೧೯೪೮ ಸೆಪ್ಟೆಂಬರ್)

೧. ಮೀರ ಕಮರುದ್ದೀನ ನಿಜಾಮ- ಉಲ್-ಮುಲ್ಕ್ ೧೭೨೪-೧೯೪೮
↓
೨. ನಿಜಾಮ್ ಅಲಿಖಾನ್ ೧೭೬೨-೧೮೦೩
↓
೩. ಮೀರ ಅಕ್ಬರ್ ಅಲಿಖಾನ್ ಸಿಕಂದರ್ ಬಹಾದ್ದೂರ್ ೧೮೦೩-೧೮೨೯
↓
೪. ಮೀರ ಅಲಿಖಾನ ನಾಸೀರುದ್ದಾರಾ ಬಹಾದ್ದೂರ್ ೧೮೨೯-೧೮೫೭
↓
೫. ಮೀರ ಅಲಿಖಾನ ಅಫ್‌ಜಲುದ್ದಾರ್ ಬಹಾದ್ದೂರ ೧೮೫೭-೧೮೬೩

೬. ಮೀರ ಮೆಹಬೂಬ ಅಲಿಖಾನ ಬಹಾದ್ದೂರ ೧೮೬೯-೧೯೧೧

೭. ಮೀರ ಉಸ್ಮಾನ ಅಲಿಖಾನ ಬಹದ್ದೂರ ೧೯೧೧-೧೯೪೮

ಹೈದರಾಬಾದ್ ಸಂಸ್ಥಾನದ ಅಶಫ್ ಜಹಾ ವಂಶದ ಅರಸರನ್ನು ಸಕಲರೂ ಅಲಾ ಹಜರತರೆಂದು ಗೌರವ ಸಲ್ಲಿಸುತ್ತಿದ್ದರು. ಈ ಅರಸರು ಪ್ರತಿಷ್ಠಿತ ಮುಸಲ್ಮಾನರಿಗೆ ನವಾಬ ಎಂದು ಪದವಿ ನೀಡಿ ಗೌರವಿಸುತ್ತಿದ್ದರು. ಈ ನವಾಬರಷ್ಟೇ ಅರಮನೆಯ ಧಾರ್ಮಿಕ, ಸಾಮಾಜಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಮತ್ತು ಅರಸು ಮನೆತನದೊಂದಿಗೆ ಬಾಂಧವ್ಯ ಬೆಳೆಸಲು ಅರ್ಹರಾಗುತ್ತಿದ್ದರು.

ನಿಜಾಮ್- ದೊರೆಯ ಮರಣದ (೧೭೪೮) ಮತ್ತು ನಿಜಾಮ ಅಲಿಖಾನ್ (೧೭೬೨) ಈ ಅವಧಿಯಲ್ಲಿ ಭಾರತೀಯ ರಾಜಕೀಯದಲ್ಲಿ ಅನೇಕ ಘಟನೆಗಳು ಘಟಿಸಿದವು. ದಕ್ಷಿಣ ಭಾರತದಲ್ಲಿ ವ್ಯಾಪಾರದಲ್ಲಿ ಪ್ರಬಲವಾದ ಈಸ್ಟ್ ಇಂಡಿಯಾ ಕಂಪನಿ ರಾಜಕೀಯದಲ್ಲೂ ಸಾಕಷ್ಟು ಪ್ರಬಲವಾಯಿತು. ಅರಬಸ್ಥಾನದಿಂದ ಬಂದು ಕೋಲಾರದಲ್ಲಿ ನೆಲೆಸಿದ ಮಹಮ್ಮದ್ ಅಲಿಯ ಮಗ ಹೈದರ ಅಲಿ ಮೈಸೂರು ಅರಸು ಕೃಷ್ಣರಾಜ ಒಡೆಯರ ಸೈನ್ಯದಲ್ಲಿ ಸಾಮಾನ್ಯ ಸೈನಿಕನಾಗಿ ಸೇರಿದನು. ಕಾಲಾನಂತರದಲ್ಲಿ ಈತನ ಧೈರ್ಯ, ಚತುರತನ ಮತ್ತು ಸ್ವಾಮಿನಿಷ್ಠೆಗೆ ಮೆಚ್ಚಿದ ಕೃಷ್ಣರಾಜ ಒಡೆಯರು ಸೈನ್ಯದ ದಂಡನಾಯಕನನ್ನಾಗಿ ನಿಯಮಿಸಿದರು. ಮೈಸೂರು ರಾಜಕೀಯದಲ್ಲಿ ಅನಿರೀಕ್ಷಿತವಾಗಿ ಉದ್ಭವಿಸಿದ ಘಟನೆಗಳಿಗೆ ಮಣಿದು ಮೈಸೂರು ಅರಸರು ಹೈದರ್ ಅಲಿಯನ್ನು ಕ್ರಿ.ಶ. ೧೭೬೧ರಲ್ಲಿ ಮೈಸೂರು ರಾಜ್ಯದ ಸರ್ವಾಧಿಕಾರಿ ಎಂದು ಘೋಷಿಸಿದರು.

ನಿಜಾಮ ಅಲಿಖಾನ್ ಕ್ರಿ.ಶ. ೧೭೬೨ರಲ್ಲಿ ಸಂಸ್ಥಾನದ ಸಿಂಹಾಸನವನ್ನೇರಿದನು. ಎರಡನೆಯ ದೊರೆ ನಿಜಾಮ ಅಲಿಖಾನನು ರಾಜಧಾನಿಯನ್ನು ಔರಂಗಾಬಾದಿನಿಂದ ಹೈದರಾಬಾದಿಗೆ ಕ್ರಿ.ಶ. ೧೯೬೯ರಲ್ಲಿ ಸ್ಥಳಾಂತರಿಸಿದನು. ಅಂದಿನಿಂದ ಅದು ಹೈದರಾಬಾದ ಸಂಸ್ಥಾನವೆಂದು ಪ್ರತೀತಿ ಪಡೆದಿದೆ. (ಡಾ. ಅಶ್ರಿತ ರಾಮಾಚಾರಿ ಹೈದರಾಬಾದ್ ಇವರ ಟಿಪ್ಪಣಿ ಪ್ರಕಾರ ದಿನಾಂಕ :

೧೭-೪-೨೦೦೦). ದಕ್ಷಿಣ ಭಾರತದಲ್ಲಿ ಅರಸರ ಒಳ ಆಡಳಿತದಲ್ಲಿ ಕಂಪನಿ ಪ್ರವೇಶಿಸುವುದನ್ನು ಸಹಿಸದ ನಾನಾಫಡ್ನಮೀಸ್, ಬೋನ್ಸ್ಲೆ, ನಿಜಾಮ ಮತ್ತು ಹೈದರಾಲಿ ಒಗ್ಗೂಡಿ ಈಸ್ಟ್ ಇಂಡಿಯಾ ಕಂಪನಿಯನ್ನು ಭಾರತದಿಂದ ಹೊರದಬ್ಬಲು ನಿರ್ಧರಿಸಿದರು. ಹೈದರಾಲಿ ಮೈಸೂರು ರಾಜ್ಯವನ್ನು ಮದ್ರಾಸದತ್ತ ವಿಸ್ತರಿಸಿದನು. ಇದನ್ನರಿತ ನಿಜಾಮ ಅಲಿಖಾನನು ಅಂತರಂಗದಲ್ಲಿ ಭಯಭೀತನಾಗಿ ತನ್ನ ನೆರವಿಗೆಂದು ಈಸ್ಟ್ ಇಂಡಿಯಾ ಕಂಪನಿಯೊಂದಿಗೆ ಸ್ನೇಹ ಬೆಳೆಸಿದನು. ಇದರಿಂದ ಸಿಟ್ಟಿಗೆದ್ದ ಹೈದರಾಲಿ ಧಾರವಾಡದತ್ತ ಸಾಗಿ ಯಾವ ವಿರೋಧವಿಲ್ಲದೆ ಅದನ್ನು ಕ್ರಿ.ಶ. ೧೭೭೮ರಲ್ಲಿ ಹಿಡಿದುಕೊಂಡನು. ನಂತರ ದಕ್ಷಿಣಕ್ಕೆ ಸಾಗಿ ನಿಜಾಮ ಅಲಿಖಾನನ ಆಡಳಿತದಲ್ಲಿದ್ದ ಕೊಪ್ಪಳ ಮತ್ತು ಬಹದ್ದೂರ ಬಂಡಾ ಗಿರಿಕೋಟೆಗಳನ್ನು ಎಪ್ರಿಲ್ ೧೭೭೮ರಲ್ಲಿ ತನ್ನ ಸ್ವಾಧೀನಕ್ಕೆ ತೆಗೆದುಕೊಂಡು ಇವುಗಳ ನಾಯಕನೆಂದು ಕೋಲಾರದ ಉಸ್ಮಾನನನ್ನು ನಿಯಮಿಸಿ, ಆನೆಗುಂದಿಯಲ್ಲಿ ಹರಿಗೋಲಿನಿಂದ ತುಂಗಭದ್ರೆಯನ್ನು ದಾಟಿ ಮೈಸೂರಿಗೆ ಮರಳಿದನು.

ಹೈದರಾಲಿಯ ಪ್ರತಿನಿಧಿ ಉಸ್ಮಾನನು ಎಂಟು ವರುಷಗಳ ಕಾಲ ಈ ಕೊಪ್ಪಳ ಕೋಟೆಯ ನಾಯಕನಾಗಿದ್ದನು. ಈ ಸಮಯದಲ್ಲಿ ಕೊಪ್ಪಳ ಕೋಟೆಯನ್ನು ಬಲಪಡಿಸಿದನು. ಸ್ಥಳೀಯರು ಕರೆಯುವ ಗಚ್ಚಿನಕೋಟೆಯ ದಕ್ಷಿಣ ಭಾಗದಲ್ಲಿ ಸ್ಥಳೀಯರು ಕರೆಯುವ ದಿಡ್ಡಿ ಕೇರಿ ಪಶ್ಚಿಮ ಭಾಗಕ್ಕೆ ಕೋಟೆಯ ಮೇಲಿರುವ ಇಸ್ಲಾಂ ಧರ್ಮ ಸೂಚಿಸುವ ತೆನೆಗಳು, ಇದೇ ಭಾಗದಲ್ಲಿಯ ಯುರೋಪಿಯನ್ ಮಾದರಿಯಲ್ಲಿರುವ ಪೂರ್ವದ ದಿಡ್ಡಿ ಇದರ ದಕ್ಷಿಣಕ್ಕೆ ನಿಯಮಿತಾಕಾರದ ಕಲ್ಲುಗಳಿಂದ ಕಟ್ಟಿದ ಬುರುಜು ತಿಳಿಸುತ್ತವೆ.

ಗಿರಿಕೋಟೆಯ ಪಶ್ಚಿಮಕ್ಕೆ ಗಿರಿಗೆ ಹತ್ತಿದ ಹಿಂದಿನ ಅರಸರು ಕೆರೆಯನ್ನು ಕಟ್ಟಿಸಿರುವರು. ಗಚ್ಚಿನ ಕೋಟೆಗೆ ಹತ್ತಿದ ಕಂದಕಕ್ಕೆ ನೀರಿನ ಕೊರತೆಯಾದಾಗ ಕಾಲುವೆ ಮುಖಾಂತರ ಕೆರೆಯಿಂದ ನೀರನ್ನು ಬಿಟ್ಟುಕೊಳ್ಳುತ್ತಿದ್ದರು. ಸ್ಥಳೀಯರು ಕರೆಯುವ ಹುಲಿಕೆರೆಗೆ ಹೋಗುವ ಮಾರ್ಗದಲ್ಲಿ ಕಾಲುವೆ ಇದ್ದ ಗುರುತು ಕಾಣಬಹುದು. ಇದೇ ಕಾಲುವೆಯಿಂದ ಗಚ್ಚಿನ ಕೋಟೆಯಲ್ಲಿ ಅಂದೇ ನಿರ್ಮಿಸಿದ ಮೋರೆ

ದ್ವಾರದಿಂದ ಕಾಲುವೆ ಮುಖಾಂತರ ಕೋಟೆಯೊಳಗೆ ಹರಿಸಿ, ಬಾವಿಗೆ ನೀರು ಸುರಿಸಿರುವನು. ಈ ಮೋರೆ ಈ ಭಾವಿಯ ದಕ್ಷಿಣದಡದಲ್ಲಿ ಇಂದಿಗೂ ಇದೆ. ಇದಕ್ಕೆ ರೂಢಿಯಲ್ಲಿ ಹಾಲುಕೋಟೆ ಬಾವಿ ಎಂದು ಕರೆಯಲಾಗುತ್ತಿದೆ.

ಗಿರಿಕೋಟೆಯ ನಾಲ್ಕನೇ ಬಾಗಿಲು ತಲುಪುವ ಪೂರ್ವದಲ್ಲಿ ಅದಕ್ಕೆ ಸನಿಹದಲ್ಲಿ ಕೋಟೆಯ ಗೋಡೆಯಲ್ಲಿ ಪಶ್ಚಿಮಕ್ಕೆ ಅಭಿಮುಖವಾಗಿ ಬಾಗಿಲನ್ನು ಕಟ್ಟಿಸಿದ್ದನು, ಹಿಂದೆ ಇರುವ ಶಾಸನ ಇದನ್ನು ತಿಳಿಸುತ್ತದೆ.

ಈ ಬಾಗಿಲಿನಲ್ಲಿ ನಿಂತು ಪಶ್ಚಿಮಕ್ಕೆ ನೋಡಿದರೆ ಪಶ್ಚಿಮ ದಿಕ್ಕು ಆಕಾಶದಿಂದ ಭೂತಲದವರೆಗೂ ನಿಚ್ಚಳವಾಗಿ ಕಾಣುತ್ತದೆ.

ಗಿರಿಕೋಟೆಯ ಮೇಲ್ಭಾಗದಲ್ಲಿರುವ ಎತ್ತರದ ಗುಂಡಿನ ಮೇಲ್ಭಾಗದಲ್ಲಿ ಉರ್ದು ಲಿಪಿಯಲ್ಲಿ ಸುಂದರವಾಗಿ '**ಉಸ್ಮಾನ್**' ಎಂದು ಕೆತ್ತಿರುವುದನ್ನು ಕಾಣುತ್ತೇವೆ. ಇದು ಕೋಟೆಯ ನಾಯಕ ಉಸ್ಮಾನನೆಂದು ತಿಳಿಸುತ್ತದೆ. ಅನೇಕ ಕಟ್ಟಡಗಳನ್ನು ಈತ ಕಟ್ಟಿಸಿದ ಬಗ್ಗೆ ಶಾಸನವೊಂದು ತಿಳಿಸುತ್ತದೆ. ತಂದೆ ಹೈದರಾಲಿಯ ಜೊತೆಯಲ್ಲಿ ಯುದ್ಧಗಳಲ್ಲಿ ಜಯಗಳಿಸಿ ನುರಿತ ಹೈದರಾಲಿಯ ಮಗ ಟಿಪ್ಪು ಸುಲ್ತಾನನು ಹೈದರಾಲಿಯ (೧೭೮೨) ಮರಣಾನಂತರ ಮೈಸೂರು ರಾಜ್ಯದ ಸರ್ವಾಧಿಕಾರಿಯಾದನು. ಮೈಸೂರು ಅರಸರ ವಶದಲ್ಲಿದ್ದ ಕೊಪ್ಪಳದ ಕೋಟೆಯನ್ನು ಇಲ್ಲಿನ ಸಮಾನ ಪಾಳೆಯಗಾರರು ಒಗ್ಗೂಡಿ ಉಸ್ಮಾನನ ಕೋಟೆಯನ್ನು ಕಿತ್ತುಕೊಂಡರು. ಅದನ್ನರಿತ ಟಿಪ್ಪುಸುಲ್ತಾನನು ಸೈನ್ಯದೊಂದಿಗೆ ಕುರುಗೋಡು ಮಾರ್ಗವಾಗಿ ಚಲಿಸಿ ಆನೆಗುಂದಿಯಲ್ಲಿ ಹರಿಗೋಲಿನಿಂದ ತುಂಗಭದ್ರೆಯನ್ನು ದಾಟಿ ಕೊಪ್ಪಳದತ್ತ ಸಾಗಿದನು. ಸುಲ್ತಾನನ ಅಪಾರ ಸೈನ್ಯವನ್ನೆದುರಿಸುವುದು ಅಸಾಧ್ಯವೆಂದರಿತ ಪಾಳೆಯಗಾರರು ಕೋಟೆಯಿಂದ ಚದುರಿದರು. ಕೋಟೆ ಮತ್ತೆ ಟಿಪ್ಪುವಿನ ವಶವಾಯಿತು. ಟಿಪ್ಪುಸುಲ್ತಾನನು ಮಹಮ್ಮದಖಾನ್ ಬಹಲ್ಲಮಿಯನ್ನು ಕೋಟೆಯ ನಾಯಕನನ್ನಾಗಿ ಮಾಡಿ

ಆನೆಗೊಂದಿ ಮಾರ್ಗವಾಗಿ ಶ್ರೀರಂಗಪಟ್ಟಣಕ್ಕೆ ಮರಳಿದನು. ಬಹಲ್ಲಮಿ ಆಯತಾಕಾರದ ಗಿರಿಕೋಟೆಯ ಮಹಾದ್ವಾರದ ಮುಂಭಾಗದ ದ್ವಾರದ ಮೇಲ್ಭಾಗದಲ್ಲಿ ಫಲಕವನ್ನಿರಿಸಿರುವನು.

ಅಂದಿನಿಂದ ಈ ಗಿರಿಕೋಟೆಯ ಮಹಾದ್ವಾರವು 'ಸುಲ್ತಾನ ದರವಾಜಾ' ಎಂಬ ಹೆಸರಿನಿಂದ ಕರೆಯಲ್ಪಡುತ್ತಿದೆ. ಇತ್ತ ಮೈಸೂರು ಅರಸರ ಸರ್ವಾಧಿಕಾರಿಯ ವಿರೋಧ ಮತ್ತು ಅತ್ತ ಮರಾಠರ ವಿರಸ, ಈ ಎರಡು ಸಂಗತಿಗಳು ನಿಜಾಮ ಅಲಿಖಾನನು ಬದುಕಲು ಈಸ್ಟ್ ಇಂಡಿಯಾ ಕಂಪನಿಯ ಮೊರೆಹೋಗುವಂತೆ ಮಾಡಿದವು. ಸಹಾಯ ಹಸ್ತ ಚಾಚಿದ ಕಂಪನಿ ನುರಿತ ಮಹಾ ದಂಡನಾಯಕ ಸರಜಾನ್ ಮಾಲ್ಕಂನನ್ನು ಕೊಪ್ಪಳಕ್ಕೆ ಕಳಿಸಿತು. ಹೈದರಾಬಾದಿನಿಂದ ಬಂದ ನಿಜಾಮ ತನ್ನ ಸೈನ್ಯದ ಶಕ್ತಿಯನ್ನು ಇನ್ನಷ್ಟು ಬಲಪಡಿಸಿದನು. ಒಳಗಿನ ಕೋವಿಗಳು ಹೊರಗಿನ ಕೋವಿಗಳಿಗೆ ಉತ್ತರಿಸಿದವು; ತೋಪುಗಳಿಗೆ ತೋಪುಗಳು ಉತ್ತರಿಸಿದವು. ಟಿಪ್ಪು ಸುಲ್ತಾನನಿಂದ ಬಹಲ್ಲುಮಿಗೆ ನೆರವು ಬರಲಿಲ್ಲ. ವಿಶ್ವಾಸ ದ್ರೋಹ ಬಗೆದ ವೈರಿಗಳು ಕೋಟೆಯೊಳಗೆ ನುಗ್ಗಿದರು. ಕ್ರಿ.ಶ. ೧೭೯೦ರಲ್ಲಿ ಕೋಟೆ ಮಾಲ್ಕಂನ ವಶವಾಯಿತು. ನಂತರದ ಕಾಲದಲ್ಲಿ ಕಂಪನಿ ಕೊಪ್ಪಳದ ಕೋಟೆಯನ್ನು ಹೈದರಾಬಾದಿನ ಅರಸ ನಿಜಾಮನಿಗೆ ಹಿಂತಿರುಗಿಸಿತು. ಮಧುರ ಮೈತ್ರಿ ಮುಂದುವರೆಯಿತು. (ತೋಪುಗಳು ಜೋಗಿ ಬಂಡೆಯಲ್ಲೊಂದು ಮತ್ತು ಕೋಟೆಯ ಮೇಲ್ಭಾಗದ ಹೊಂಡದಲ್ಲೊಂದು ಕಾಣಸಿಗುತ್ತವೆ.)

ನಿಜಾಮ ಅಲಿಖಾನ್ ಪ್ರಧಾನಿ ಮೀರ ಆಲಂ ಬಹಾದ್ದೂರನು ತನ್ನ ರಾಜ್ಯದಲ್ಲಿ ಸಂಚರಿಸುತ್ತಾ ಪ್ರಜೆಗಳಿಗೆ ಸಂದರ್ಶನವೀಯುತ್ತಾ ಗಣ್ಯರಿಗೆ, ಕಲಾವಿದರಿಗೆ, ದಕ್ಷ ಆಡಳಿತಗಾರರಿಗೆ ವಿದ್ವಾಂಸರಿಗೆ ಸಂಭಾವನೆ ನೀಡತೊಡಗಿದನು. ಕೊಪ್ಪಳಕ್ಕೆ ಆಗಮಿಸಲು ಕೊಪ್ಪಳ ಭಾಗದ ಸಕಲ ಜನತೆ ಸಂಭ್ರಮದಿಂದ ಸ್ವಾಗತಿಸಿತು. ಶ್ರೀ ಗವಿಮಠಕ್ಕೆ ಸಾಗಿ ಗುರುಗಳ ದರ್ಶನ ಪಡೆದು ಸಂತುಷ್ಟರಾಗಿ ಶ್ರೀ ಗವಿಮಠಕ್ಕೆ ಹಿರೇಬಗನಾಳ ಮತ್ತು ಚಿಕ್ಕ ಬಗನಾಳ ಗ್ರಾಮಗಳನ್ನು ಜಹಗೀರು ಹಾಕಿಕೊಟ್ಟನು. ಈ ಪವಿತ್ರ ಕ್ಷೇತ್ರಕ್ಕೆ ಬಾಗಸವಾರ ದರ್ಗಾಕ್ಕೆ ಜಮೀನುಗಳನ್ನು ಹಾಕಿಕೊಟ್ಟನು. ಕೋಟೆಯನ್ನು ಮತ್ತೆ ಮತ್ತೆ ಕಣ್ತುಂಬ ನೋಡಿ ಸಂತಸಪಟ್ಟು ಸಕಲ ಸಿಬ್ಬಂದಿಯೊಂದಿಗೆ ಹೈದರಾಬಾದಿಗೆ ಹಿಂತಿರುಗಿದನು. ಇಂದು

ಭಾರತ ಸರ್ಕಾರದ ಆದೇಶಗಳನ್ವಯ ಇಲ್ಲಿನ ಅಧಿಕಾರಿಗಳು ಜಹಗೀರು ಮತ್ತು ಜಮೀನುಗಳನ್ನು ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡಿದ್ದಾರೆ.

ನಿಜಾಮು ಅಲಿಖಾನ್ ಮರಣದ ನಂತರ ಇವನ ಮಗ ಮೀರ್ ಅಕ್ಬರ್ ಅಲಿಖಾನ್ ಸಿಖಂದರ್‌ಜಾಹ್ ಬಹಾದ್ದೂರನು ಕ್ರಿ.ಶ. ೧೮೦೩ರಲ್ಲಿ ಪಟ್ಟವೇರಿದನು. ಕೆಲ ವರ್ಷಗಳ ನಂತರ ಜಮಿನ್‌ದಾರ ವೀರಪ್ಪನು ತನ್ನ ಸಹೋದರ ಮತ್ತು ಸ್ವಾಭಿಮಾನಿಗಳಾದ ವೀರ ಯೋಧರ ಬಲದಿಂದ ಕೊಪ್ಪಳದ ಕೋಟೆಯನ್ನು ಕ್ರಿ.ಶ. ೧೮೧೯ರಲ್ಲಿ ಹಿಡಿದುಕೊಂಡನು. ಈ ಸಮಯದಲ್ಲಿ ಅರಸು ಅಷಜಹಾನ್ ಸೈನ್ಯವಿದ್ದುದರಿಂದ ಕೊಪ್ಪಳದ ಕೋಟೆ ಅಂದು ಸುಭದ್ರವಾಗಿತ್ತು. ಹೈದರಾಬಾದ್ ಅರಸರ ಪರಮಮಿತ್ರ ಮತ್ತು ಹಿತೈಷಿ ಕಂಪನಿ ಮಣಿಯಲ್ಲಿದ್ದ ತಮ್ಮ ದಂಡನಾಯಕ ಫ್ಲಿಜಿಲಿಯನಿರಿಗೆ ಕೊಪ್ಪಳಕ್ಕೆ ಹೋಗಲು ಆದೇಶ ನೀಡಿತು. ಮಣಿಯಿಂದ ಹೊರಟ ಕಂಪನಿ ಸೈನ್ಯ ಅಳವಂಡಿ ತಲುಪಿ ಅಲ್ಲಿ ಬೀಡುಬಿಟ್ಟಿತು. ವೀರಪ್ಪನು ಸಂಧಿಗಾಗಿ ಸಹೋದರರನ್ನು ಅಳವಂಡಿಗೆ ಕಳಿಸಿದನು. ಆದರೆ ರಾಯಭಾರ ಸಫಲವಾಗಲಿಲ್ಲ. ಹೈದರಾಬಾದಿನಿಂದ ಬಂದ ನಿಜಾಮನ ಸೈನ್ಯ ಕೊಪ್ಪಳ ತಲುಪಿತು. ಫಿಜಲೀಯನ ಆದೇಶದಂತೆ ಸೈನ್ಯ ಕೋಟೆಗೆ ಮುತ್ತಿಗೆ ಹಾಕಿತು. ಮುತ್ತಿಗೆ ೬ ದಿನಗಳವರೆಗೆ ಮುಂದುವರೆದರೂ ಕೋಟೆ ಜಗ್ಗಲಿಲ್ಲ. ಒಳಗಿನ ಬಲ ಸಾಲದಾಯಿತು. ವೀರಪ್ಪ ಸಹೋದರರು ವೀರಯೋಧರು ಕೋಟೆಯ ಬಾಗಿಲು ತೆರೆದು ಸಾಗರದಂತಿದ್ದ ವೈರಿಗಳ ಸೈನ್ಯದೊಡನೆ ಕಲಿತನದಿಂದ ಕಾದಿ ವೀರ ಸ್ವರ್ಗವೇರಿದರು. ನಂತರ ಕಂಪನಿ ಕೋಟೆಯನ್ನು ಹೈದರಾಬಾದ್ ಅರಸು ಸಿಕಂದರಶಾಹ ಬಹಾದ್ದುರನಿಗೆ ಹಿಂತಿರುಗಿಸಿತು.

ಈತನ ಮರಣದ ನಂತರ ಈತನ ಮಗ ಮೀರ ನಾಶರುದ್ದಾಲಾ ಕ್ರಿ.ಶ. ೧೮೨೯ರಲ್ಲಿ ಸಿಂಹಾಸನವನ್ನೇರಿದನು. ಈ ಅರಸರ ಆಳ್ವಿಕೆಯ ಕಾಲದಲ್ಲಿ ಅನಿರೀಕ್ಷಿತ ಘಟನೆಗಳು ಘಟಿಸಿದವು. ದಕ್ಷಿಣ ಭಾರತದ ರಾಜಕೀಯದಲ್ಲಿ ಸಾಕಷ್ಟು ಪ್ರಬಲವಾದ ಕಂಪನಿ ಉತ್ತರಭಾರತದಲ್ಲಿ ಪ್ಲಾಸಿ ಮತ್ತು ಬಕ್ಸಾರ್ ಕಾಳಗಗಳಲ್ಲಿ ಜಯ ಸಾಧಿಸಿ ಉತ್ತರ ಭಾರತದ ರಾಜಕೀಯದಲ್ಲೂ ಪ್ರಬಲವಾಯಿತು. ಮುಘಲರ ಕೊನೆಯ ಅರಸರಲ್ಲಿ ಒಡಕಾಗಿ ಅಶಕ್ತರಾದುದನರಿತ ಕಂಪನಿ ದ್ವಿತೀಯ ಬಹಾದ್ದೂರ್ ಶಹಾನನ್ನು ದಿಲ್ಲಿ

ಸಿಂಹಾಸನದಿಂದ ಪದಚ್ಯುತಿಗೊಳಿಸಿ ಅವನನ್ನು ಸೆರೆಹಿಡಿದು ಕೆಂಪು ಕೋಟೆಯ ಮೇಲೆ ತಮ್ಮ ರಾಷ್ಟ್ರಧ್ವಜ ಯುನಿಯನಜಾಕ ಕ್ರಿ.ಶ. ೧೮೫೭ರಲ್ಲಿ ಹಾರಿಸಿ, ಬಹಾದ್ದೂರ ಶಹಾನನ್ನು ರಂಗೂನಿನ ಸೆರೆಮನೆಗೆ ಸೇರಿಸಿತು.

ಜಾತಿ, ಮತ, ಪಂಥ ಮರೆತು ಭಾರತೀಯ ಸ್ವಾತಂತ್ರ್ಯಾಭಿಮಾನಿ ವೀರ ಯೋಧರು ಸಂಸ್ಥಾನಿಕರಿಂದ ಕೈಬಿಟ್ಟುಹೋದ ಭಾರತದ ಸ್ವಾತಂತ್ರ್ಯವನ್ನು ಮರಳಿ ಪಡೆಯಲು ಹೋರಾಟ ನಡೆಯಿಸಿದರು. ಈ ಹೋರಾಟ ಕ್ರಿ.ಶ. ೧೮೫೭ ರಿಂದ ೧೮೫೮ರ ವರೆಗೂ ಮುಂದುವರೆಯಿತು. ಉತ್ತರದಲ್ಲಿ ಝಾನ್ಸಿ ಲಕ್ಷ್ಮಿಬಾಯಿ ಹೋಳೆಕರು ದಕ್ಷಿಣ ಭಾರತದ ಕನ್ನಡ ನೆಲದಲ್ಲಿ ನರಗುಂದ ಬಾಬಾ ಸಾಹೇಬ ಸುರಪುರದ ವೆಂಕಟಪ್ಪನಾಯಕ, ಮುಂಡರಗಿ ವಿಭಾಗದಲ್ಲಿ ವೀರ ಯೋಧ ಭೀಮರಾಯ ಹಮ್ಮಿಗೆಯ ಕೆಚ್ಚೆದೆಯ ಕೆಂಚನಗೌಡ ಮುಂತಾದ ವೀರಯೋಧರು ಭಾರತ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿದರು. ಬಾಬಾಸಾಹೇಬ ಮತ್ತು ಸುರಪುರದ ವೆಂಕಟಪ್ಪ ನಾಯಕನನ್ನು ಬಗ್ಗುಬಡಿದು, ಭೀಮರಾಯ ಕೆಂಚನಗೌಡ ಇವರನ್ನು ಬಗ್ಗುಬಡಿಯಲು ಕಂಪನಿ ತನ್ನ ಶಕ್ತಿಯನ್ನು ಒಗ್ಗೂಡಿಸಿತು. ಈ ಸಮಯದಲ್ಲಿ ಹೈದರಾಬಾದ್ ಅರಸು ನಾಸಿರುದ್ದೌಲ ಬಹಾದ್ದೂರ ಮರಣ ಹೊಂದಲು ಈತನ ಮಗ ಅಫ್ಜಲ್ಲುದ್ದಾಲಾ ಬಹಾದ್ದೂರ್ ಕ್ರಿ.ಶ. ೧೮೫೭ರಲ್ಲಿ ಪಟ್ಟವೇರಿದನು.

ಕೆಂಚನಗೌಡ ಮತ್ತು ಭೀಮರಾಯ ಸ್ಥಳೀಯ ಯೋಧರು ಒಂದುಗೂಡಿ ಮುಂಡರಗಿ ವಿಭಾಗದಲ್ಲಿ ಕ್ರಾಂತಿಯ ಕಿಡಿಯನ್ನು ಉಜ್ವಲಗೊಳಿಸಿ, ಡಂಬಳದ ಪೋಲೀಸ್ ಠಾಣೆಗೆ ಮುತ್ತಿಗೆ ಹಾಕಿ ಅವರಲ್ಲಿದ್ದ ಕಾಡತುಸು ಬಂದೂಕುಗಳನ್ನು ಕಸಿದುಕೊಂಡು ಕತ್ತಲಲ್ಲಿ ಕರಗಿದರು. ಮತ್ತು ತಮ್ಮ ಕಾರ್ಯಕ್ಷೇತ್ರವನ್ನು ಹೈದರಾಬಾದಿನತ್ತ ಬೆಳೆಸಿದರು. ಹೈದರಾಬಾದ್ ಅರಸು ಅಫ್ಜಲ್ಲುದ್ದಾಲಾ ಬಹಾದ್ದೂರನ ಆಡಳಿತದಲ್ಲಿದ್ದ ಕೊಪ್ಪಳದ ಕೋಟೆಯನ್ನು ಕ್ರಿ.ಶ. ೧೮೫೮ರಲ್ಲಿ ಭೀಮರಾಯನು ಕೆಂಚನಗೌಡ ವೀರಯೋಧರು ಸ್ಥಳೀಯ ಯೋಧರೊಡಗೂಡಿ ಹಿಡಿದುಕೊಂಡು ಗಿರಿಕೋಟೆಯ

ಬಾಗಿಲನ್ನು ಭದ್ರವಾಗಿ ಮುಚ್ಚಿಸಿದನು? ಕೊಪ್ಪಳದ ವೀರ ಯೋಧ ಮಗ್ದುಂ ಮೋಯಿದ್ದೀನ್ ನಪಾತ್ರ ಈ ನಿಟ್ಟಿನಲ್ಲಿ ಹಿರಿದಾಗಿದೆ. ಆ ಸಯಮದಲ್ಲೂ ಕೂಡ ಕೊಪ್ಪಳದ ಕೋಟೆ ಭದ್ರವಾಗಿತ್ತು.

ಭೀಮರಾಯನ ಚಟುವಟಿಕೆಗಳ ಕುರಿತು ಧಾರವಾಡ ಜಿಲ್ಲಾ ಕಲೆಕ್ಟರನು ಬಳ್ಳಾರಿ ಜಿಲ್ಲಾ ಕಲೆಕ್ಟರ್ ಪೀಜಾಫರನಿಗೆ ತಿಳಿಸಿದನು. ಕಂಪನಿ ಆದೇಶದಂತೆ ಬಳ್ಳಾರಿ ಜಿಲ್ಲಾ ಕಲೆಕ್ಟರ್ ಫಿಜಾನು ಕಂಪನಿ ಮಹಾದಂಡನಾಯಕ ಹ್ಯೂಜಸ್ಸನಿಗೆ ಕೊಪ್ಪಳದತ್ತ ಸಾಗಲು ಆದೇಶ ನೀಡಿದನು. ರಾಯಚೂರು ಜಿಲ್ಲಾ ಕಲೆಕ್ಟರ್ ಟೇಲರನು ತಮ್ಮ ಸೈನಿಕ ಠಾಣೆ ಲಿಂಗಸೂಗೂರಿನಿಂದ ಸೈನ್ಯಸಮೇತ ಕೊಪ್ಪಳಕ್ಕೆ ಆಗಮಿಸಿದನು. ಈ ತ್ರಿಕೂಟ ಸೈನ್ಯ ಟೇಲರನ ಮುಂದಾಳುತನದಲ್ಲಿ ದಿನಾಂಕ ೩-೫-೧೮೫೮ರಲ್ಲಿ ಬೆಳಗಿನ ಜಾವ ಕೋಟೆಗೆ ಮುತ್ತಿಗೆ ಹಾಕಿತು. ಕೋಟೆ ಎಲ್ಲೂ ಮಿಸುಕಾಡಲಿಲ್ಲ. ಹಿಂದಿನಿಂದ ಬಂದ ತೋಪಿನ ದಳದ ಬಲದಿಂದ ಗಿರಿಕೋಟೆಯ ಉತ್ತರದ ಗುಡ್ಡಕ್ಕೆ ಹತ್ತಿದೆ. ಕೋಟೆ ಮಣ್ಣಿನಿಂದ ಕಟ್ಟಿದುದನ್ನರಿತು ಅ ಭಾಗವನ್ನು ತೋಪಿನಿಂದ ಹಾರಿಸಿದನು. ಗುಂಡಿನ ಹೊಡೆತಕ್ಕೆ ಕೋಟೆಯ ಕಲ್ಲುಗಳು ತುಂಡು ತುಂಡಾಗಿ ಬಿದ್ದು ಕೋಟೆ ಒಡೆಯಿತು. ಕೋಟೆಯೊಳಗೆ ವೈರಿಗಳು ಹಾರಿದರು, ಗುಂಡಿಗೆ ಗುಂಡು ಉತ್ತರಿಸಿದವು, ಕತ್ತಿಗಳು ತಾಕಲಾಡಿದವು, ರುಂಡಗಳು ಮುಂಡಗಳಿಂದ ಬೇರಾದವು. ಭೀಮರಾಯ, ಕೆಂಚನಗೌಡ ಮುಂತಾದ ವೀರ ಯೋಧರು ಕಲಿತನದಿಂದ ಕಾದಾಡಿ ವೀರ ಮರಣವನ್ನಪ್ಪಿದರು. ಕೋಟೆಯಲ್ಲಿ ಬಿಸಿರಕ್ತ ಮಡುವುಗಟ್ಟಿತು. ಕೋಟೆಯ ಮೇಲ್ಭಾಗದಲ್ಲಿದ್ದ ವೀರ ಯೋಧರನ್ನು ಕಂಪನಿ ಸೈನ್ಯ ಸೆರೆಹಿಡಿಯಿತು. ಕಂಪನಿ ನ್ಯಾಯಾಲಯದ ತೀರ್ಪಿನಂತೆ ೭೭ ಮಂದಿ ವೀರ ಯೋಧರನ್ನು ತಮ್ಮ ಬಿಡಾರದ ಮುಂದೆ ಗುಂಡಿಟ್ಟು ಕೊಂದರು. ಕಠಿಣ ಶಿಕ್ಷೆಗೆ ಒಳಪಡಿಸಿದ ೬೦ ಮಂದಿ ವೀರ ಯೋಧರನ್ನು ರಾಯಚೂರು ಜೈಲಿಗೆ ಕಳಿಸಿದರು. ಕೊಪ್ಪಳದವನೇ ಆದ ವೀರ ಯೋಧ ಮಗ್ದುಂ ಮಾಯುದ್ದೀನ್‌ನನ್ನು ಗಲ್ಲಿಗೇರಿಸಿದರು. ಇವರೆಲ್ಲರ ಆಸ್ತಿಯನ್ನು ಕಂಪನಿ ಸರಕಾರ ತನ್ನ ವಶಕ್ಕೆ ತೆಗೆದುಕೊಂಡಿತು. ನಂತರ ಹೈದರಾಬಾದ್ ಅರಸು ಅಪ್ಜುಲ್ಲುದ್ದೌಲಾ ಬಹಾದ್ದೂರನಿಗೆ ಕೋಟೆಯನ್ನು ಕಂಪನಿ ಹಿಂತಿರುಗಿಸಿ ಕೊಟ್ಟಿತು.

ಈಸ್ಟ್ ಇಂಡಿಯಾ ಕಂಪನಿ ತನ್ನ ಆಡಳಿತದಲ್ಲಿದ್ದ ಪ್ರದೇಶಗಳಲ್ಲಿ ತಲೆಯೆತ್ತಿದ ಸ್ವಾತಂತ್ರ್ಯ ಪ್ರೇಮಿಗಳ ಹೋರಾಟವನ್ನು ಬಲವಾಗಿ ಹತ್ತಿಕ್ಕಿದ್ದರಿಂದ ಕೆಲ ಹೋರಾಟಗಾರರು ಹೈದರಾಬಾದ್ ಸಂಸ್ಥಾನದಲ್ಲಿ ನುಸುಳಿದರು. ಹೈದರಾಬಾದ್ ಅರಸು ಅಫ್ಜುಲ್ಲುದ್ದೌಲಾ ಬಹಾದ್ದೂರನ ಚತುರ ಮುತ್ಸದ್ದಿ ಪ್ರಧಾನಿ ಮೀರ ತುರಾಬಲಿ ಖಾನನು ನುಸುಳಿದ ಹೋರಾಟಗಾರರನ್ನು ಬಂಧಿಸಿ ಹೈದರಾಬಾದಿನಲ್ಲಿದ್ದ ಕಂಪನಿ ಏಜೆಂಟನಿಗೆ ಅವರನ್ನು ಒಪ್ಪಿಸಿದನು ಮತ್ತು ಭಾರತ ಸ್ವಾತಂತ್ರ್ಯದ ಕೂಗು ಹಾಕಿದ ಹೈದರಾಬಾದ್ ಪ್ರಜೆಗಳನ್ನು ಕಂಡಲ್ಲಿ ಗುಂಡಿಟ್ಟು ಕೊಲ್ಲಲು ತನ್ನ ಅಧಿಕಾರಿಗಳಿಗೆ ಆದೇಶ ನೀಡಿದನು. ಹೋರಾಟದ ಸದ್ದಡಗಿ ಎಲ್ಲೆಡೆ ಶಾಂತಿ ನೆಲೆಸಿತು. ಪ್ರಧಾನಿಯ ಕ್ರಮದಿಂದ ಕಂಪನಿ ಸಂತಸಪಟ್ಟಿತು. ಅದೇ ಸಮಯದಲ್ಲಿ ಕಂಪನಿಯಲ್ಲಿ ವಿರಸ ತಲೆದೋರಿತು. ಅನೇಕ ವಾದ ವಿವಾದಗಳ ನಂತರ ಬ್ರಿಟಿಷ್ ಸರಕಾರವು ಇಂಡಿಯಾದಲ್ಲಿದ್ದ ಈಸ್ಟ್ ಇಂಡಿಯಾ ಕಂಪನಿಯು ಭಾರತದ ಆಡಳಿತವನ್ನು ಕ್ರಿ.ಶ. ೧೮೫೮ರಲ್ಲಿ ವಹಿಸಿಕೊಂಡಿತು. ವಿವಿಧ ಹುದ್ದೆಗಳಲ್ಲಿ ಸೇವೆ ಸಲ್ಲಿಸುತ್ತಿದ್ದ ಕಂಪನಿ ಅಧಿಕಾರಿಗಳ ಸೇವೆಯನ್ನು ಬ್ರಿಟಿಷ್ ಸರಕಾರ ಮುಂದುವರೆಸಿತು. ದಕ್ಷಿಣ ಭಾರತದ ದಂಡನಾಯಕ ಮೇಜರ್ ಜನರಲ್ 'ಹಿಲ್' ಇಂಗ್ಲೆಂಡಿನ ರಾಣಿಗೆ ಪತ್ರ ಬರೆದನು. ಅದರ ಪಾಠ ಹೀಗಿದೆ:

These energitic Measures "writes Hill" saved South, and it is but to this disting wished man, that the people of England should be informed, how entirely the stability of British Rule in South India was owing to the wise and energitic measures adopted at this crises by Salar Jung." 'ಹಿಲ್'ನ ಪತ್ರದಿಂದ ಸಂತುಷ್ಟಳಾದ ಇಂಗ್ಲೆಂಡಿನ ರಾಣಿ ಹೈದರಾಬಾದ್ ಮತ್ತು ಇಂಗ್ಲೆಂಡ್ ಸರ್ಕಾರದ ಕ್ರಿ.ಶ. ೧೮೫೯ರ ಒಪ್ಪಂದದ ಪ್ರಕಾರ ಹೈದರಾಬಾದ್ ಅರಸು ಅಫ್ಜುಲ್ಲುದ್ದೌಲಾ ಬಹಾದ್ದೂರನಿಂದ ಬರಬೇಕಾದ ೫೦ ಲಕ್ಷ ರೂಪಾಯಿಗಳನ್ನು ಬಿಟ್ಟುಬಿಟ್ಟಳು. ದೋ-ಆಬ್ ಪ್ರದೇಶದ ಕೃಷ್ಣ, ತುಂಗಭದ್ರೆ ನಡುವಣ ನಾಡು ಇನ್ನುಳಿದ ಪ್ರದೇಶಗಳನ್ನು ಬಿಟ್ಟುಕೊಟ್ಟಳು ಮತ್ತು ಧನ್ಯವಾದಗಳನ್ನು ಕಳಿಸಿದಳು. ಇದರಿಂದ ಸಂಪ್ರೀತನಾದ ಅರಸು ತನ್ನ ಪ್ರಧಾನಿಗೆ ಮೀರ ತುರಾಬ ಅಲಿ ಖಾನನಿಗೆ ನವಾಬ ಎಂದು ಪದವಿ ನೀಡಿ

ರಾಯಚೂರು ಜಿಲ್ಲೆಯ ಕೊಪ್ಪಳ ಮತ್ತು ಯಲಬುರ್ಗಾ ತಾಲ್ಲೂಕುಗಳನ್ನು ಕ್ರಿ.ಶ.೧೮೬೧ರಲ್ಲಿ ಜಹಗೀರು ಹಾಕಿಕೊಟ್ಟು ಆಂತರಿಕ ಸ್ವಾಯತ್ತತೆ ನೀಡಿದನು. ನವಾಜಿಸಾಲಾರಜಂಗನು ಇವೆರಡು ತಾಲ್ಲೂಕುಗಳನ್ನು ಸೇರಿಸಿ ಜಿಲ್ಲೆಯಾಗಿಸಿದನು. ಇದರ ಮುಖ್ಯಸ್ಥಳ 'ಕೊಪ್ಪಳ'ವೇ ಆಯಿತು. ೧೮೬೧ರಿಂದ ಈ ಸಾಲಾರ ಜಂಗನು ಜಹಗೀರ ಎಂದು ರೂಢಿಯಲ್ಲಿ ಮತ್ತು ಕೊಪ್ಪಳ, ಕುಪ್ಪಲೆ ಎಂದು ಪರಿವರ್ತಿಸಲ್ಪಟ್ಟಿತು. ದಾಖಲಾತಿಗಳಲ್ಲಿ ಕುಪ್ಪಲೆ ಜಿಲ್ಲೆ, ಕುಪ್ಪಲೆ ತಾಲ್ಲೂಕು ಜಿಲ್ಲಾ ಸ್ಥಳ ಕುಪ್ಪಲ್ ಎಂದು ನಮೂದಿಸಲ್ಪಟ್ಟಿದೆ. ಆದರೆ ಜನಸಾಮಾನ್ಯರ ಬಾಯಿಯಲ್ಲಿ ಅದು ಕೊಪ್ಪಳವೆಂದೇ ಕರೆಯಲ್ಪಡುತ್ತಿತ್ತು.

## ನವಾಜಿ ಸಾಲಾರಜಂಗನ ಆಡಳಿತ

ಸಾಲಾರಜಂಗನಿಗೆ ಕ್ರಿ.ಶ. ೧೮೬೧ರಲ್ಲಿ ಜಹಗೀರು ದೊರೆತು ಎಷ್ಟೋ ವರ್ಷಗಳವರೆಗೆ ತನ್ನ ಜಹಗೀರು ನಿರೀಕ್ಷಿತ ಪ್ರಗತಿ ಸಾಧಿಸದಿದ್ದುದನ್ನು ಕಂಡ ನವಾಬ ಸಾಲಾರಜಂಗನು ಹೈದರಾಬಾದ್ ಸರ್ಕಾರದ ವಿವಿಧ ಹುದ್ದೆಗಳಲ್ಲಿ ಸೇವೆ ಸಲ್ಲಿಸಿದ ಅನುಭವಿ, ಚತುರ ಮತ್ತು ಕರ್ತವ್ಯ ನಿಷ್ಠೆಗೆ ಹೆಸರಾದ ಹೈದರಾಬಾದಿನ ನರಸಿಂಹರಾಯನನ್ನು ಹೈದರಾಬಾದ್ ಸರ್ಕಾರದ ಸೇವೆಯಿಂದ ಜಹಗೀರ ಸರಕಾರದ ಸೇವೆಗೆ ವರ್ಗಾಯಿಸಿ ಕೊಪ್ಪಳಕ್ಕೆ ಕಳುಹಿಸಲ್ಪಟ್ಟನು. ಕುಪ್ಪಳಕ್ಕೆ ಬಂದನಂತರ ಅನೇಕ ವಿದಾಯಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಈ ಕುಪ್ಪಲ ಜಿಲ್ಲೆಯನ್ನು ಸಂಪದ್ಭರಿತ ಜಿಲ್ಲೆಯನ್ನಾಗಿಸಿದನು.

## ನಿಜಾಮರ ಕಾಲದ ಕಂದಾಯ ವ್ಯವಸ್ಥೆ

ಜಹಗೀರ ರೈತರು ಸಾಗುವಳಿ ಮಾಡುತ್ತಿದ್ದ ಜಮೀನುಗಳನ್ನು ಅಳತೆ ಮಾಡಿಸಿ ಕುಬಾಲಾ (ಪು.೭) ಕೊಟ್ಟು ಅವುಗಳಿಗೆ ಕಂದಾಯವನ್ನು ನಿಗದಿಪಡಿಸಿದನು. ಕೌಲುಬಿಂದಿ ಕರಾರಿನ ಮೇಲೆ ಸರಕಾರಿ ಜಮೀನುಗಳನ್ನು ಸಾಗುವಳಿ ಮಾಡಲು ರೈತರಿಗೆ ನೀಡಿದನು. ಇದರಿಂದ ಬೊಕ್ಕಸಕ್ಕೆ ಹೆಚ್ಚಿನ ಹಣ ಸಂದಾಯವಾಯಿತು. ತುಂಗಭದ್ರಾ ನದಿಗೆ ಕೋರಗಲ್ಲಿಗೆ ಹತ್ತಿರ ದಿಡುಗಿನಿಂದ ಜನಗೀರಸಲ್ಲಿ

ಹರಿದಿರುವ ಕಾಲುವೆಯ ಅಗಲವನ್ನು ೩.೦ ಅಡಿಗೆ ಹೆಚ್ಚಿಸಿದನು ಮತ್ತು ೧೮ ಮೈಲುಗಳವರೆಗೆ ಬೆಳೆಯಿಸಿದನು. ಇದರಿಂದ ಜಹಗೀರು ರೈತನಿಗೆ ಹೆಚ್ಚು ನೀರು ಸಿಕ್ಕು ಹೆಚ್ಚಿನ ಸರಕಾರಿ ಜಮೀನನ್ನು ಸಾಗುವಳಿ ಮಾಡಿದ್ದರಿಂದ ಆ ರೈತರಿಂದ ಕಂದಾಯ ಹೆಚ್ಚಿತು. ಅಬಕಾರಿ ಇಲಾಖೆಯಲ್ಲಿ ಸೋರುವಿಕೆಯನ್ನು ತಡೆಗಟ್ಟಿದ್ದರಿಂದ ಜಹಗೀರ ಬೊಕ್ಕಸಕ್ಕೆ ಹಣಸಂದಾಯವಾಯಿತು. ಇದರಿಂದ ಜಹಗೀರನ ಆದಾಯ ಗಣನೀಯವಾಗಿ ಹೆಚ್ಚಿತು.

## ನಿಜಾಮರ ಕಾಲದಲ್ಲಿ ಆಡಳಿತ

ಗಾಮಜಿ ನರಸಿಂಹರಾಯನು ಕುಪ್ಪಲಕ್ಕೆ ಬರುವ ಪೂರ್ವದಲ್ಲಿ ಜಹಗೀರನ ಎಲ್ಲಾ ಅಧಿಕಾರಿಗಳು ಓರ್ವ ಅಮಲ್ದಾರನಲ್ಲಿ ಕೇಂದ್ರೀಕೃತವಾಗಿದ್ದವು. ಇದರಿಂದ ಆಡಳಿತ ಮಂದಗತಿಯಲ್ಲಿ ಸಾಗಿತ್ತು. ನರಸಿಂಹರಾಯ ತಾಲ್ಲೂಕುದಾರ (ಜಿಲ್ಲಾಧಿಕಾರಿ) ತಹಶೀಲ್ದಾರ ಮೊತಮೀಮ್ (ಸುಪರಿಂಟೆಂಡೆಂಟ್) ತಾಮಿರಾತ್ (ಲೋಕೋಪಯೋಗಿ) ಅದಾಲತ್ (ನ್ಯಾಯಾಲಯ) ತಾಲಿಮಾತ (ಶಿಕ್ಷಣ) ಹೀಗೆ ಇಲಾಖೆಗಳನ್ನು ವಿಭಾಗಿಸಿದನು. ತಹಶೀಲ್ದಾರನ ಅಧೀನದಲ್ಲಿದ್ದ ನಗರ ಆಡಳಿತದ ಭಾಗವನ್ನು ಪ್ರತ್ಯೇಕಿಸಿ ಅದಕ್ಕೆ ಲೋಕಲ್ ಫರಡೆ ಖಾತೆ ರಚಿಸಿದನು. ಅದಕ್ಕೆ ಕಾರ್ಯದರ್ಶಿಯನ್ನು ನಿಯಮಿಸಿದನು. ಆದರೆ ಕೊನೆಯ ಅಧಿಕಾರ ತಹಶೀಲ್ದಾರನಿಗಿತ್ತು. ಇವೆಲ್ಲಾ ಇಲಾಖೆಗಳಿಗೆ ಕಛೇರಿ ಒಂದೇ ಆಗಿದ್ದರೂ ಅದರಲ್ಲಿ ಪ್ರತ್ಯೇಕ ಕಟ್ಟಡಗಳನ್ನು ನಿರ್ಮಿಸಲಾಗಿತ್ತು.

## ನಿಜಾಮರ ಕಾಲದಲ್ಲಿ ಕುಪ್ಪಲ್ ನಗರದ ಸುಧಾರಣೆ

ಗಿರಿಕೋಟೆಯ ಮುಂದಿನ ಬಯಲಿನಲ್ಲಿ ಪ್ರಜೆಗಳ ನಿವಾಸಕ್ಕೆ ಅಂದು ಎರಡು ಕೋಟೆಗಳನ್ನು ನಿರ್ಮಿಸಿದ್ದರು. ಅವುಗಳಲ್ಲಿ ಒಂದು ಗಚ್ಚಿನಿಂದ ಮತ್ತು ಇನ್ನೊಂದು ಮಣ್ಣಿನಿಂದ ಕಟ್ಟಲಾಗಿತ್ತು. ಸ್ಥಳೀಯರು ಗಚ್ಚಿನಿಂದ ಕಟ್ಟಿಸಿದ ಕೋಟೆಗೆ ಗಚ್ಚಿನ ಕೋಟೆ ಎಂದೂ ಮಣ್ಣಿನಿಂದ ಕಟ್ಟಿದ

ಕೋಟೆಗೆ ಮಣ್ಣಿನ ಕೋಟೆ ಎಂದೂ ಕರೆಯುತ್ತಿದ್ದರು. ಇಂದೂ ಅದೇ ಹೆಸರು ಚಾಲ್ತಿಯಲ್ಲಿದೆ. ಕೋಟೆಯೊಳಗಿನ ಪ್ರದೇಶ ಜನನಿಬಿಡವಾಗಿದ್ದರಿಂದ ಮಣ್ಣಿನ ಕೋಟೆಯ ಮುಂದಿನ ಬಯಲನ್ನು ನಿವೇಶನಗಳಿಗೆ ಮತ್ತು ವ್ಯಾಪಾರದ ಮಳಿಗೆಗಳಿಗೆ ನರಸಿಂಹರಾಯನು ಗುರುತಿಸಿದನು. ಚೌಬೀದಿಗಳ ಕೂಟದಲ್ಲಿ ಅದನ್ನು ಕಟ್ಟಿಸಿ ಅದಕ್ಕೆ ಗುಲ್ಜಾರ ಹೌದು ಎಂದು ನಾಮಕರಣ ಮಾಡಿದನು. ಈ ಕೂಟದಿಂದ ಸಮಾನ ಅಂತರದಲ್ಲಿ ನಾಲ್ಕು ದಿಕ್ಕುಗಳಲ್ಲಿ ಕಲ್ಲಿನಿಂದ ಅಗಸಿಗಳನ್ನು ಕಟ್ಟಿಸಿದನು. ಈ ಅಗಸಿಗಳು ಇಂದೂ ಕೊಪ್ಪಳದ ಸಂದರ್ಶಕರಿಗೆ 'ಬನ್ನಿ' ಎಂದು ಸ್ವಾಗತ ನೀಡುತ್ತಿವೆ. ಗುಲ್ಜಾರ ಹೌದು ಇದ್ದ ತಾಣದಲ್ಲಿ ಈಗ ಸ್ತಂಭ ನಿಂತಿದೆ. ಈ ಬೀದಿಗೆ ಜಹಾಗೀರನ ಒಡೆಯ ನವಾಬಸಾಲಾರಜಂಗ್ ಮುಕ್ತಾರ ಉಲ್ ಮುಲ್ಕ್ ಎಂಬ ಹೆಸರಿನಲ್ಲಿ ಮುಕ್ತಾದ ಗಂಜ್ ಎಂದು ಹೆಸರಿಸಿದನು. ನಂತರದಲ್ಲಿ ಉತ್ತರದ ಬೀದಿಯನ್ನು ಬೆಳೆಯಿಸಿ ಅದಕ್ಕೆ ಸಾಲಾರಜಂಗನ ಮಗ ಮೀರ ಲಾಯಿಕ್ ಅಲಿ- ಇಮದನ್ ಅವನ ಹೆಸರಿನಲ್ಲಿ ಇಮದನ್ ಗಂಜ್ ಎಂದು ಹೆಸರಿಸಿದನು. ಮೂರನೆಯ ಸಾಲಾರಜಂಗನ ಕಾಲದಲ್ಲಿ ಉತ್ತರದ ಬೀದಿಯನ್ನು ಬೆಳೆಯಿಸಿ ಅದಕ್ಕೆ ಯಸೂಫಿಯಾ ಬಜಾರ್ ಎಂದು ಹೆಸರಿಸಿದನು. ಇಂದು ಈ ಬೀದಿಗೆ ಜವಹರಬೀದಿಯೆಂಬ ಹೆಸರಿನಿಂದ ಕರೆಯಲಾಗುತ್ತಿದೆ.

## ನಿಜಾಮರ ಕಾಲದ ಲೋಕೋಪಯೋಗಿ ಕಾರ್ಯಕ್ರಮಗಳು

ಬೀದಿಯ ಒಂದು ಬದಿಯಲ್ಲಿ ಬೀದಿ ಕಂಬಗಳನ್ನು ನಿಲ್ಲಿಸಿದನು. ಈ ಕಂಬದ ಮೇಲ್ಭಾಗದಲ್ಲಿ ನಾಲ್ಕು ಬದಿಗೂ ಗಾಜಿನ ಕಪಾಟು ಜೋಡಿಸಿದ ಪೆಟ್ಟಿಗೆಯನ್ನಿಡುವನು. ಅದರಲ್ಲಿ ದೀಪವನ್ನಿಡಿಸುತ್ತಿದ್ದನು. ಅದು ಬೀದಿಗೆ ಬೆಳಕು ನೀಡುತ್ತಿತ್ತು. ಬೆಳಗಿನ ಜಾವ ಜವಾನನು ಬಂದು ಆ ದೀಪವನ್ನು ಒಯ್ದು ಕಛೇರಿಯಲ್ಲಿಡುತ್ತಿದ್ದನು.

ನರಸಿಂಹರಾಯನು ಕುಪ್ಪಲಕ್ಕೆ ಬರುವ ಪೂರ್ವದಲ್ಲಿ ಊರಿನವರು ಕುಡಿಯಲು ಮತ್ತು ಬಳಸಲು ನೀರನ್ನು ಮೆಟ್ಟಿಲು ಬಾವಿಗಳಿಂದ ಮತ್ತು ಕೆರೆಗಳಿಂದ ಬರುತ್ತಿದ್ದರು. ಸಾಂಕ್ರಾಮಿಕ ರೋಗಗಳು

ಹಬ್ಬಲು ಇದರಿಂದ ಸಾಧ್ಯತೆಯಿತ್ತು. ಆದಕಾರಣ ಈ ಮೊದಲೇ ಗಿರಿಕೋಟೆಯ ಪಶ್ಚಿಮಕ್ಕೆ ಇದ್ದ ಕೆರೆಗೆ ಹೆಚ್ಚಿನ ನೀರು ಸಂಗ್ರಹವಾಗಿದಯೆಂಬುದನ್ನು ತಿಳಿದು ಕೆರೆಯ ಉತ್ತರ ಮತ್ತು ದಕ್ಷಿಣ ಗುಡ್ಡಗಳಲ್ಲಿ ಸುಮಾರು ಎರಡು ಅಡಿಯಷ್ಟು ಎತ್ತರದ ಗೋಡೆ ಕಟ್ಟಿಸಿ ಮಳೆಯ ನೀರು ಕೆರೆಗೆ ಬೀಳುವಂತೆ ಮಾಡಿದನು. ಇದರಿಂದ ಕೆರೆಯ ನೀರಿನ ಸಂಗ್ರ ಹೆಚ್ಚಿತು. ಕೆರೆಯ ಅಂಗಳದಲ್ಲಿ ಕಟ್ಟಿಸಿದ ನೀರನ ಹೌಜಿಗೆ (ಹಾದಿಗೆ) ನೀರನ್ನು ಬೀಳಿಸಿ, ನಂತರ ಕೋಟೆಯೊಳಗಿಂದ ಕಬ್ಬಿಣದ ಕೊಳವೆಯ ಮೂಲಕ ಊರಿಗೆ ಕುಡಿಯುವ ನೀರನ್ನು ಪೂರೈಸಿದನು. ಬೀದಿಯ ಮಧ್ಯದಲ್ಲಿದ್ದ ಗುಲ್ಜಾರ ಹಾದಿಗೆ ಕೊಳವೆಯಿಂದ ನೀರನ್ನು ಬಿಡಲು ಅದು ೧೬ ಅಡಿ ಎತ್ತರ ನೀರನ್ನು ಹಾರಿಸಿ ಜನರಿಗೆ ಮನರಂಜನೆ ನೀಡಿತು. ಈಗ ಇಲ್ಲಿ ಸ್ತಂಭ ಮಾತ್ರ ನಿಂತಿದೆ. ಬ್ರಿಟಿಷ್ ಸರ್ಕಾರ ಕ್ರಿ.ಶ. ೧೮೮೪ರಲ್ಲಿ ಧಾರವಾಡದಿಂದ ಬಳ್ಳಾರಿಯವರೆಗೂ ರೈಲ್ವೆ ಮಾರ್ಗವನ್ನು ವಿಸ್ತರಿಸಿತು. ಕೊಪ್ಪಳ ರೈಲ್ವೆ ನಿಲ್ದಾಣವಾಯಿತು. ಜನಸಂಚಾರಕ್ಕೆ ಸರಕು ಸಾಗಾಣಿಕೆಗೆ ರೈಲ್ವೆ ಮಾರ್ಗ ಮಾಧ್ಯಮವಾಯಿತು. ಊರಿನ ವಿವಿಧ ಭಾಗಗಳಿಂದ ರಸ್ತೆಗಳನ್ನು ಬೆಳೆಸಿ ರೈಲ್ವೆ ನಿಲ್ದಾಣಕ್ಕೆ ಜೋಡಿಸಿದನು. ಈ ಭಾಗದಲ್ಲಿ ಉನ್ನತ ಅಧಿಕಾರಿಗಳಿಗೆ ನಿವೇಶನಗಳನ್ನು ಕಟ್ಟಿಸಿದನು. ಇದರಿಂದ ಸಂತುಷ್ಟನಾದ ನವಾಬ ಸಾಲಾರ ಜಂಗನು ನರಸಿಂಹರಾಯನನ್ನು ತಾಲೂಕದಾರ ಹುದ್ದೆಗೆ ಏರಿಸಿದನು. ಕುಪ್ಪಲೆ ಸಾಕಷ್ಟು ವಿಸ್ತಾರವಾಯಿತು. ಅಫ್ಜಲ್ಲುದ್ದೌಲಾ ಬಹಾದ್ದೂರನ ಮರಣದ ನಂತರ ಮೀರ ಮೆಹಬೂಬ ಅಲಿಖಾನ ಬಹಾದ್ದೂರ ಕ್ರಿ.ಶ. ೧೮೬೯ರಲ್ಲಿ ಪಟ್ಟವೇರಿದನು.

ದಯಾನಂದ ಸರಸ್ವತಿ ಕ್ರಿ.ಶ. ೧೮೭೫ರಲ್ಲಿ ಆರ್ಯ ಸಮಾಜ ಸಂಸ್ಥೆಯನ್ನು ಸ್ಥಾಪಿಸಿದನು. ವೇದಗಳೇ ಹಿಂದೂ ಧರ್ಮದ ಮೂಲಾಧಾರಗಳೆಂದು ತಿಳಿಸಿದನು. ವಿಧವೆಯರ ಮರುಮದುವೆ, ಅಂತರ್‌ಜಾತೀಯ ಮದುವೆಗೆ ಪ್ರೋತ್ಸಾಹ, ಹಿಂದುಗಳು ಇಸ್ಲಾಂ ಮತ್ತು ಕ್ರೈಸ್ತಧರ್ಮಕ್ಕೆ ಮತಾಂತರ ತಡೆಯುವಿಕೆ, ಮತಾಂತರ ಹೊಂದಿದ ಹಿಂದುಗಳು ಒಪ್ಪಿದರೆ ಮರಳಿ ಹಿಂದುಧರ್ಮಕ್ಕೆ ಬರಲು ಮರುಮತಾಂತರ ಇವೇ ಮುಂತಾದವುಗಳು ಆರ್ಯಸಮಾಜದ ಧ್ಯೇಯಗಳಾಗಿದ್ದವು.

೧೯ನೇ ಶತಮಾನದ ಅಂತ್ಯದಲ್ಲಿ ಮುಸ್ಲಿಂ ಧುರೀಣನಾರ 'ಸಯ್ಯದ್ ಅಹಮ್ಮದ'ನು ಮುಸ್ಲಿಂ ಸಮಾಜದಲ್ಲಿ ರಾಜಕೀಯ, ಧಾರ್ಮಿಕ, ಸಾಮಾಜಿಕ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಅನೇಕ ಮಹತ್ವದ ಸುಧಾರಣೆಗಳನ್ನು ತಂದನು. ಕ್ರಿ.ಶ. ೧೮೭೩ರಲ್ಲಿ ಅಲಿಗಢದಲ್ಲಿ ಮಹಮ್ಮದ್ ಆಂಗ್ಲೋ ಓರಿಯಂಟಲ್ ಕಾಲೇಜನ್ನು ಸ್ಥಾಪಿಸಿದನು. ಇದೇ ಬೆಳೆದು ಅಲಿಗಡ ಮುಸ್ಲಿಂ ವಿಶ್ವವಿದ್ಯಾಲಯವಾಗಿದೆ.

ಇಂಗ್ಲೆಂಡಿನ ರ್‍ಯಾಡಿಕಲ್ ಪಕ್ಷದ ಸ್ಥಾಪಕನ ಮಗನಾದ ಅಕ್ಟೋವಿಯನ್ ಹ್ಯೂಮನು ಭಾರತದಲ್ಲಿ ಕಾಂಗ್ರೆಸ್ ಸ್ಥಾಪಿಸಲು ದಾದಾಭಾಯಿ ನವರೋಜಿ, ಬದರುದ್ದೀನ್ ತಯಜ್ಜಿ, ಪಿರೋಜಿಶಹಾ ಮೆಹತಾ ಇವರೊಡನೆ ಸಮಾಲೋಚಿಸಿದನು. ಕ್ರಿ.ಶ. ೧೮೮೫ರಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಸ್ಥಾಪಿಸಲ್ಪಟ್ಟಿತು. ಉಮೇಶ್‌ಚಂದ್ರ ಬ್ಯಾನರ್ಜಿಯವರ ಅಧ್ಯಕ್ಷತೆಯಲ್ಲಿ ಮುಂಬೈನಲ್ಲಿ ಪ್ರಪ್ರಥಮವಾಗಿ ಸಭೆ ನಡೆಯಿತು. ಸುರೇಂದ್ರನಾಥ ಬ್ಯಾನರ್ಜಿ, ರಾನಡೆ, ಗೋಪಾಲಕೃಷ್ಣ ಗೋಖಲೆ ಮುಂತಾದವರು ಕಾಂಗ್ರೆಸ್ ಸೇರಿದರು.

ಮೀರ ಮೆಹಬೂಬ ಅಲಿಖಾನನ ಮರಣಾನಂತರ ಮೀರ ಉಸ್ಮಾನ್ ಆಲಿಖಾನ ಬಹದ್ದೂರನು ಕ್ರಿ.ಶ. ೧೯೧೧ರಲ್ಲಿ ಸಿಂಹಾಸನವನ್ನೇರಿದನು. ಲಾಲಾ ಲಜಪತರಾಯ, ಬಾಲಗಂಗಾಧರ ತಿಳಕ, ಮತ್ತು ಬಿಪಿನಚಂದ್ರಪಾಲ್ ಸಿಡಿದೆದ್ದರು. ಇವರೇ ಉಗ್ರಗಾಮಿಗಳು. ತಿಳಕರಂತೂ ಸ್ವರಾಜ್ಯ ಜನ್ಮಸಿದ್ಧ ಹಕ್ಕು ಎಂದು ಘೋಷಿಸಿದರು. ರಾಜಕೀಯದಲ್ಲಿ ತೀವ್ರ ಬೆಳವಣಿಗೆಯನ್ನು ಗಮನಿಸಿ ನವಾಬ ಬಹಾದ್ದೂರ್ ಯಾರಜಂಗನು ಕ್ರಿ.ಶ. ೧೯೨೬ರಲ್ಲಿ ಸ್ಥಾಪಿಸಿದ ಇತಿಹಾಸ ಉಲೆಮುಸಲ್ಮಾನ್ ಸಂಸ್ಥೆಗೆ ಅರಸು ಪ್ರೋತ್ಸಾಹ ನೀಡಿದನು. ಈ ಸಂಸ್ಥೆಯ ಮುಸ್ಲಲ್ಮಾನ ತರುಣನು ಇತ್ತಿಹಾದ್ ಉಲ್ ಸಂಸ್ಥೆಗೆ ಮತ್ತು ಇಸ್ಲಾಂ ಸ್ವತಂತ್ರ ರಾಜ್ಯಕ್ಕೆ ಪ್ರಾಣಾರ್ಪಣೆ ಮಾಡುವ ಮತ್ತು ಇಸ್ಲಾಂ ಧರ್ಮವನ್ನು ಪ್ರಸಾರಗೊಳಿಸುವ ಪ್ರತಿಜ್ಞೆ ಮಾಡುತ್ತಿದ್ದನು. ಬ್ರಿಟಿಷ್ ಸರ್ಕಾರದ ಸಲಹೆಯ ಮೇರೆಗೆ ಇದರ ತೀವ್ರ ಬೆಳವಣಿಗೆ ಕುಂಠಿತವಾಯಿತು. ಆದರೆ ಉಸ್ಮಾನ ಆಲಿಖಾನ್ ಶೇಕಡಾ ೭೫ ರಷ್ಟು ಹಿಂದುಗಳನ್ನು ೨೫ ರಷ್ಟು ಮುಸಲ್ಮಾನರನ್ನು ಸಮಾನ ದೃಷ್ಟಿಯಿಂದ ನೋಡಿಕೊಳ್ಳುತ್ತಿದ್ದನು. ಕ್ರಿ.ಶ. ೧೯೨೦ರಿಂದ ಸ್ವತಂತ್ರ

ಇಸ್ಲಾಂ ರಾಜ್ಯದ ಬಯಕೆ ಅರಸನಲ್ಲಿ ಮೊಳಕೆಯೊಡೆಯಿತು. ಗಾಂಧೀಜಿಯವರು ಆಫ್ರಿಕಾದಿಂದ ಭಾರತಕ್ಕೆ ಮರಳಿ ಬಂದ ನಂತರ ಕಾಂಗ್ರೆಸ್ ಸೇರಿದರು. ಉಗ್ರಗಾಮಿಗಳು ತಮ್ಮ ಧೋರಣೆಯನ್ನು ಬದಲಿಸಿ ಗಾಂಧೀಜಿ ನೀಡಿದ ತತ್ವಗಳಾದ ಅಹಿಂಸಾ ಮುಂತಾದ ತತ್ವಗಳನ್ನು ತಮ್ಮ ಹೋರಾಟದ ಅಸ್ತ್ರಗಳಾಗಿ ಬಳಸಹತ್ತಿದರು. ಹೈದರಾಬಾದ್ ಸಂಸ್ಥಾನದ ಮೇಲೆ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ತನ್ನ ಪ್ರಭಾವವನ್ನು ಬಲವಾಗಿ ಬೀರತೊಡಗಿತು. ಮೌಲಾನಾ ಅಬ್ದುಲ್ ಬಯಾಮ್, ಪತ್ರಿಕೋದ್ಯಮಿ ಮೆಹಬೂಬ ಹುಸೇನ, ಡಾ. ಅಂಗೋರನಾಥ ಚಟ್ಟೋಪಾಧ್ಯಾಯ ಇವರಿಂದ ಅಕ್ಟೋಬರ್ ತಿಂಗಳಲ್ಲಿ ಹೈದರಾಬಾದ್ ನಗರದಲ್ಲಿ ''ಹೈದರಾಬಾದ್ ಸಂಸ್ಥಾನ ಕಾಂಗ್ರೆಸ್ ಪಕ್ಷವನ್ನು ಸ್ಥಾಪಿಸಲ್ಪಟ್ಟಿತು.'' ಇದರ ಅಧ್ಯಕ್ಷರು ಗೋವಿಂದರಾವ್ ನಾನಾಲಿ.

ದಿನಾಂಕ : ೦೮-೦೮-೧೯೪೨ರಂದು ಮುಂಬೈನಲ್ಲಿ ಸಮಾವೇಶಗೊಂಡ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಆಧಿವೇಶನದಲ್ಲಿ ಸಕಲ ಸದಸ್ಯರ ಅಪೇಕ್ಷೆಯಂತೆ ಗಾಂಧೀಜಿಯವರು ಬ್ರಿಟಿಷರಿಗೆ ಕ್ವಿಟ್ ಇಂಡಿಯಾ ಘೋಷಣೆ ಕೂಗಿದರು. ಬ್ರಿಟಿಷ್ ಸರಕಾರ ಇವರೆಲ್ಲರನ್ನೂ ಬಂಧಿಸಿ ಬೇರೆ ಬೇರೆ ಸೆರೆಮನೆಗೆ ಕಳಿಸಿದರು. ಸ್ವಾಮಿ ರಮಾನಂದ ತೀರ್ಥರ ಕೋರಿಕೆಯಂತೆ ಹೈದರಾಬಾದ್ ಸಂಸ್ಥಾನದಲ್ಲಿ ಹೈದರಾಬಾದ್ ಕಾಂಗ್ರೆಸ್ ಸಂಸ್ಥಾನದ ಎಲ್ಲೆಡೆಗಳಲ್ಲಿ 'ಆಝಾದ್ ಹೈದರಾಬಾದ್ ' ಎಂದು ಘೋಷಿಸಿದರು.

ಕೊಪ್ಪಳದವರೇ ಆದ ಜಯರಾಮಾಚಾರ್ಯ ಹೈದರಾಬಾದ್ ಸಂಸ್ಥಾನದ ವಿವಿದೆಡೆಗಳಲ್ಲಿ ಸಂಚರಿಸಿ ಜನರನ್ನು ಕೀರ್ತನ ಮಾಧ್ಯಮದ ಮೂಲಕ ಜಾಗೃತಗೊಳಿಸಿದನು. ಹೈದರಾಬಾದ್ ಸರಕಾರ ಇವರನ್ನು ಬಂಧಿಸಿತು. ಶಿಕ್ಷೆ ಅವಧಿ ಮುಗಿದ ನಂತರ ಸೆರೆಮನೆಯಿಂದ ಬಿಡುಗಡ ಮಾಡಿತು.

ಇತ್ತಿಹಾದ ಉಲ್‌ಮುಸಲ್ಮಾನ್ ಸಂಸ್ಥೆಯ ಸದಸ್ಯರಿಗೆ ರಜಕಾರರೆಂದು ಕರೆದರು. ರಜಕಾರರೆಂದರೆ ಈ ಸಂಸ್ಥೆಯ ಸ್ವಯಂ ಸೇವಕರು. ಅಲಿಗಡ ಮುಸ್ಲಿಂ ವಿಶ್ವವಿದ್ಯಾಲಯದ ಪದವೀಧರ

ಕಾಶೀಂ ರಜ್ವಿ ಭಾವಪೂರ್ಣ ಭಾಷಣಗಳನ್ನು ಕೇಳಿದ ಅರಸು ಉಸ್ಮಾನ ಅಲಿಖಾನನು ಮಜಲಿಸ-ಎ-ತ್ತಹಾದ್ ಉಲ್‌ಮುಸಲ್ಮಾನ್ ಸಂಸ್ಥೆಯ ಆಧ್ಯಕ್ಷನೆಂದು ಕ್ರಿ.ಶ. ೧೯೪೨ರಲ್ಲಿ ನಿಯಮಿಸಿದನು. ಉಲ್-ಮುಸಲ್ಮಾನ ಶಾಖೆಗಳು ತೀವ್ರಗತಿಯಲ್ಲಿ ಜಿಲ್ಲಾ ಮಟ್ಟದಲ್ಲಿ ಮತ್ತು ತಾಲ್ಲೂಕು ಮಟ್ಟದಲ್ಲಿ ತ್ತ ಸ್ಥಾಪಿಸಲ್ಪಟ್ಟವು. ಇವರಿಗೆ ಸಂಸ್ಥೆಯ ತತ್ವಗಳನ್ನು ಬೋಧಿಸಿ ಅದರಂತೆ ನಡೆಯಲು ಪ್ರತಿಜ್ಞೆ ಮಾಡಲು ತಿಳಿಸಿದನು. ಪ್ರತಿಯೊಬ್ಬ ರಜಕಾರನೂ ಪ್ರತಿಜ್ಞೆ ಮಾಡುತ್ತಿದ್ದನು. ಕೊಪ್ಪಳದಲ್ಲಿಯೂ ಮುಸಲ್ಮಾನ ಯುವಕರು ಈ ಸಂಸ್ಥೆಗೆ ಸೇರಿದರು. ಹಿರಿಯರು ಇವರ ಮಾರ್ಗದಶಕರಾದರು. ಮತ್ತು ಇವರೆಲ್ಲ ರಜಕಾರರಿಗೆ ಸೈನಿಕ ತರಬೇತಿ ನೀಡಿ, ಭಾರೀ ಪ್ರಮಾಣದ ಚಾಕು, ಕತ್ತಿ ಮತ್ತು ಬಂದೂಕು (೩೦೩)ಗಳನ್ನು ಒದಗಿಸಿ ಅವರವರ ಠಾಣಗಳಿಗೆ ರಜ್ವಿ ಕಳುಹಿಸಿದನು. ಅರಸು ಉಸ್ಮಾನ್ ಅಲಿಖಾನರು ಸ್ವತಂತ್ರ ಇಸ್ಲಾಂ ರಾಜ್ಯದ ಕನಸು ಕಾಣಹತ್ತಿದರು. ಬಂದೂಕುಧಾರಿಗಳಾದ ಕುಪ್ಪಲದ ಬೀದಿ ಬೀದಿಗಳಲ್ಲಿ ಸಂಚರಿಸಲು ಕುಪ್ಪಲದವರು ಭಯಭೀತರಾದರು. ಹಿಂದುಗಳ ಮೇಲೆ ದೌರ್ಜನ್ಯ ಹೆಚ್ಚಿದವು.

೧೯೪೭ರ ವರೆಗೂ ಭಾರತದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಹೋರಾಡಿದ ಗಾಂಧೀಜಿಯವರ ಬಲಗೈಯಾದ ಬ್ಯಾರಿಸ್ಟರ್ ಮಹಮ್ಮದ್ ಅಲಿ ಜಿನ್ನಾರವರು ಪಾಕಿಸ್ತಾನದ ಬೇಡಿಕೆಯನ್ನು ಬ್ರಿಟಿಷ್ ಸರಕಾರದ ಮುಂದಿರಿಸಿದರು. ಇದು ಎಲ್ಲರನ್ನೂ ಬೆಚ್ಚಿಬೀಳುವಂತೆ ಮಾಡಿತು. ಒಡೆದು ಆಳುವ ನೀತಿಯಲ್ಲಿ ಪ್ರವೀಣರಾದ ಬ್ರಿಟಿಷರು ಬೀಸಿದ ಬಲೆಯಿಂದ ಪಾರಾಗಲು ಅನಿವಾರ್ಯವಾಗಿ ಭಾರತದೇಶದ ವಿಭಜನೆಗೆ ಸಕಲ ಧುರೀಣರು ಒಪ್ಪಿದರು. ೧೯೪೭ ರಲ್ಲಿ ಭಾರತ ಮತ್ತು ಪಾಕಿಸ್ತಾನಗಳು ಸ್ವತಂತ್ರವಾದವು. ಭಾರತ ಸಂಸ್ಥಾನಗಳು ಸ್ವತಂತ್ರ, ಅವು ಪಾಕಿಸ್ತಾನಕ್ಕೆ ಅಥವಾ ಭಾರತಕ್ಕೆ ಸೇರಬಹುದು ಎಂದು ಬ್ರಿಟಿಷ್ ಸರಕಾರ ಘೋಷಿಸಿತು. ನೆಹರೂ ಅವರು ಭಾರತದ ಪ್ರಧಾನ ಮಂತ್ರಿಗಳಾದರು. ಸರ್ದಾರ ವಲ್ಲಭಾಭಾಯಿ ಪಟೇಲರು ಗೃಹಮಂತ್ರಿ ಮತ್ತು ಉಪ ಮಂತ್ರಿಯಾದರು. ವಿ.ಪಿ.ಮೆನನ್ನರು ಸಚಿವರಾದರು ಲಾರ್ಡ್ ಮೌಂಟ್ ಬ್ಯಾಟನ್ನನು ಭಾರತದ ವೈಸರಾಯನಾಗಿ ಮುಂದುವರಿದನು.

ಕೊಪ್ಪಳದವರೇ ಆದ ವಿ. ಎಚ್. ದೇಸಾಯಿ ಸರಕಾರದ ನೀತಿ ಇತ್ತಿಹಾದ ಉಲ್ ಮುಸಲ್ಮಾನ್ ಸಂಸ್ಥೆಯ ರಜಕಾರರ ದೌರ್ಜನ್ಯ ಗುಲಬರ್ಗಾದಲ್ಲಿ ಸಂಯುಕ್ತ ಕರ್ನಾಟಕ ಪತ್ರಿಕೆಗೆ ವರದಿ ಮಾಡುತ್ತಿದ್ದನು. ಪೋಲೀಸರು ಇವರನ್ನು ಬಂಧಿಸಿ ಗುಲಬರ್ಗಾ ಸೆಂಟ್ರಲ್ ಜೈಲಿಗೆ ದಬ್ಬಿದರು. ಈ ಸಮಯದಲ್ಲಿ ಹೈದರಾಬಾದ್ ಸರಕಾರ ಗಸ್ತಿ ನಿಶಾನೆ ೫೩ ಹೊರಡಿಸಿತು. ಮದುವೆ, ಧಾರ್ಮಿಕ ಸಮಾರಂಬ, ಮೆರವಣಿಗೆ ಇವುಗಳನ್ನು ಸರಕಾರದ ಪೂರ್ವಾನುಮತಿಯಿಲ್ಲದೆ ಆಚರಿಸಬಾರದು, ಮುಸಲ್ಮಾನರ ಆಸ್ತಿಗಳನ್ನು ಹಿಂದೂಗಳು ಖರೀದಿಸುವಂತಿಲ್ಲ; ಹಿಂದೂಗಳ ಆಸ್ತಿಯನ್ನು ಯಾರಾದರೂ ಖರೀದಿಸಬಹುದು. ಇದನ್ನು ಸ್ವಾಭಿಮಾನಿಗಳು ಕಾಲಾಗಸ್ತಿಯೆಂದು ಕರೆದರು. ಇದರ ಬಿಸಿ ಕುಪ್ಪಲಕ್ಕೆ ತಟ್ಟಿತು.

ಸರ್ದಾರ ವಲ್ಲಭಾಭಾಯಿಯವರ ಬಿಗುವಿನ ಧೋರಣೆಯಿಂದ ಎಲ್ಲ ಸಂಸ್ಥಾನಗಳು ಒಕ್ಕೂಟ ಸೇರಿದವು. ಆದರೆ ಜುನಾಗಡ ಮತ್ತು ಹೈದರಾಬಾದ್ ಹೊಯಿದಾಡಹತ್ತಿದವು. ಜುನಾಗಡದ ಪ್ರಜೆಗಳೆಲ್ಲರೂ ಒಕ್ಕೂಟ ಸೇರಲು ಸಂಸ್ಥಾನಿಕ ಜನಾಬಿ ಭುಟ್ಟೋರವರನ್ನು ಒತ್ತಾಯಿಸಿದರು. ಭುಟ್ಟೋರವರು ಸಂಸಾರ ಸಮೇತರಾಗಿ ಪಾಕಿಸ್ತಾನಕ್ಕೆ ಪಲಾಯನಗೈದರು. ಜುನಾಗಡ ಒಕ್ಕೂಟ ಸೇರಿತು. ಆದರೆ ಹೈದರಾಬಾದ್ ಹೊಯ್ದಾಡಹತ್ತಿತು. ಹೈದರಾಬಾದ್ ಒಕ್ಕೂಟ ಸೇರ್ಪಡೆ ಹೊಣೆಯನ್ನು ಭಾರತ ಸರಕಾರ ಲಾರ್ಡ್ ಮೌಂಟ್ ಬ್ಯಾಟನ್ನರಿಗೆ ಬಿಟ್ಟುಕೊಟ್ಟಿತು. ಮೀರ ಉಸ್ಮಾನ್ ಅಲಿಖಾನರು ಒಂದು ವರುಷದ ಮಟ್ಟಿಗೆ ಯಥಾಸ್ಥಿತಿ ಒಪ್ಪಂದಕ್ಕೆ ಲಾರ್ಡ್ ಮೌಂಟ್ ಬ್ಯಾಟನ್ನರ ಮುಖಾಂತರ ಪ್ರಯತ್ನಿಸಿದರು. ಯಥಾಸ್ಥಿತಿ ಕರಡು ಒಪ್ಪಂದ ಸಿದ್ಧವಾಯಿತು. ಕರಡಿನಲ್ಲಿ ವಿದೇಶ ವ್ಯವಹಾರ ಎಂದಿನಂತೆ ಎಂದು ನಮೂದಿಸಲಾಗಿತ್ತು. ದಿನಾಂಕ ೨೯-೧೧-೧೯೪೭ರಂದು ಕರಡಿಗೆ ಅರಸು ಉಸ್ಮಾನ್ ಅಲಿಖಾನರು ಸಹಿ ಹಾಕಿದರು. ಕರಡು ದಿಲ್ಲಿಗೆ ತೆರಳಿತು.

ಹೈದರಾಬಾದ್ ಸಂಸ್ಥಾನದಲ್ಲಿ ಹೊಣೆಗಾರ ಸರಕಾರ ಸ್ಥಾಪಿಸಲು ನಡೆದ ಪ್ರಯತ್ನ ಫಲಿಸಲಿಲ್ಲ. ಮೌಂಟ್ ಬ್ಯಾಟನ್ ಸೇವಾ ಅವಧಿ ಮುಗಿದ ಕಾರಣ ೧೯-೬-೧೯೪೮ರಂದು ಇಂಗ್ಲೆಂಡಿಗೆ

ಅವರು ಹೊರಟು ನಿಂತರು. ನೆಹರೂ, ವಲ್ಲಭಭಾಯಿ ಪಟೇಲ ಇತರ ಮಂತ್ರಿಗಳು ಹೈದರಾಬಾದ್ ಸಂಸ್ಥಾನದಲ್ಲಿ ಭಾರತದ ಏಜೆಂಟ್ ಜನರಲ್ ಕೆ.ಎಂ.ಮುನ್ಷಿ ವಿಮಾನ ನಿಲ್ದಾಣದಲ್ಲಿ ಹಾರ್ದಿಕ ಶುಭಾಶಯಗಳೊಂದಿಗೆ ಅವರನ್ನು ಬೀಳ್ಕೊಟ್ಟರು. ಶ್ರೀ ರಾಜಗೋಪಾಲಾಚಾರ್ಯರು ಭಾರತದ ಗವರರ್ನರ್ ಜನರಲ್‌ರಾದರು.

ಹೈದರಾಬಾದಿನ ಮೇಲೆ ಯುದ್ಧದ ಛಾಯೆಯ ಮುಸುಕು ಹತ್ತಿತ್ತು. ಪ್ರಧಾನಮಂತ್ರಿ ಮೀರ ಲಾಯಿಕ ಆಲಿ ಮತ್ತು ಕಾಶೀಂ ರಜ್ವಿ ಕೂಡಿಕೊಂಡು ತ್ವರಿತಗತಿಯಲ್ಲಿ ಯುದ್ಧದ ಸಿದ್ಧತೆ ನಡೆಯಿಸಿದರು. ಹೈದರಾಬಾದ್ ಸಂಸ್ಥಾನದ ನಿಯೋಜನೆಯಂತೆ ಇರಬೇಕಿದ್ದ ೭೦೦೦ ಸೈನಿಕರನ್ನು ಅನಧಿಕೃತವಾಗಿ ೧೩,೦೦೦ಕ್ಕೇರಿಸಿದರು. ಕಾಯ್ದಿಟ್ಟ ಸೈನ್ಯ ೨೨,೯೭೩ ಇದ್ದೂ ಅದಕ್ಕೆ ೭,೦೦೦ ಜನರಿಗೆ ತರಬೇತಿ ಯೋಜನೆ ರೂಪಿಸಿದರು. ಸುಂಕದ (ಕಲೋಡಗೇರಿ) ಪೋಲೀಸರ ನೆಪದಲ್ಲಿ ೪,೮೭೦ ಹೆಚ್ಚು ಜನರಿಗೆ ಸೈನಿಕ ತರಬೇತಿ ನೀಡಿದರು. ಪೋಲೀಸ್ ದಳ ೩೯,೦೦೦ಕ್ಕೇರಿಸಿದರು. ಸಶಸ್ತ್ರ ಮೀಸಲು ಪಡೆ೧೨,೦೦೦ ಇದ್ದು ಸಶಸ್ತ್ರ ರಜಕಾರರ ಸಂಖ್ಯೆ ೫೦,೦೦೦ ದಿಂದ ೧,೦೦,೦೦೦ ಕ್ಕೇರಿತು. ಅರಸು ಉಸ್ಮಾನ್ ಅಲಿಖಾನ್‌ನು ಆಸರೆ ನೀಡಿದ ನಿರಾಶ್ರಿತ೧೫,೦೦೦ ಪಠಾಣರಿಗೆ ಯುದ್ಧದ ತರಬೇತಿ ಕೊಟ್ಟು ಅವರಿಗೆ ಶಸ್ತ್ರಾಸ್ತ್ರಗಳನ್ನು ಕೊಟ್ಟು ಹೈದರಾಬಾದ್ ಸರಕಾರದ ವಿವಿಧೆಡೆಗಳ ಸೇವೆಯಲ್ಲಿ ತೊಡಗಿಸಿದರು. ಇಂಗ್ಲೆಂಡಿನ ಸಿಡ್ನೆ ಕಾಟನ್ನನು ವಿದೇಶಗಳಲ್ಲಿ ಶಸ್ತ್ರ ಖರೀದಿಸಿ ಕರಾಚಿ ಮುಖಾಂತರ ಹೈದರಾಬಾದಿಗೆ ಸರಬರಾಜು ಮಾಡಿದನು. ವಿದೇಶಗಳಲ್ಲಿ ಹೈದರಾಬಾದ್ ಸರಕಾರ ಬಾಂಬರ್ ವಿಮಾನಗಳನ್ನು ಖರೀದಿಸಿದೆ ಎಂಬ ವದಂತಿಯೂ ಹಬ್ಬಿತು. ಪಠಾಣರ ಆಗಮನದಿಂದ ಉತ್ಸಾಹ ಭರಿತರಾದ ರಜಕಾರರು ಎಲ್ಲೆಡೆ

ನಿಜಾಮ್ ಕದಮೊಂ ಪೆ ನೆಹರು ಕೋ

ಝುಕಾದೇಂಗೆ

ಪಟೇಲ್ ಮುನ್ಷಿಕೊ ಕಬರೋಂಮೇ ಗಡದೇಂಕಾ

ಇದನ್ನು ಹಾಡುತ್ತಾ ಬೀದಿಗಳಲ್ಲಿ ತಿರುಗಾಡುತ್ತಿದ್ದರು. ಕಾಪ್ಪಳದ ರಜಕಾರರೂ

ಕೂಗಿದರು. ಕಾಶೀಂ ರಜ್ವಿ..........The day is not faroof, when theweaves of Bay of Bengal will be washing the feet our sovereign.....we are re-writing the map of India........We are the grand sons of Md. Gazane and of Babar when determined we shall the Asafshahi Flag on Red Fort in Delhi.

ಅರಸು ಮೀರ್ ಉಸ್ಮಾನ್ ಅಲಿಖಾನನು ಸ್ವತಂತ್ರ ಇಸ್ಲಾಂ ರಾಜ್ಯದ ಕನಸು ಕಂಡನು. ಪಠಾಣರು ಆಗಮಿಸಿದ್ದರಿಂದ ಸ್ಥಳೀಯ ರಜಕಾರರು ''**ಕಾಟೋ ಲೂಟೋ ಬಾಟೋ**'' ಎಂದು ಕೂಗಾಡಹತ್ತಿದರು. ಈ ಸಮಯದಲ್ಲಿ ಕುಪ್ಪಲ ತಾಲ್ಲೂಕಿನ ಮುನಿರಾಬಾದ್ ಹತ್ತಿರ ತುಂಗಭದ್ರಾ ನದಿಗೆ ಆಣೆಕಟ್ಟು ಕಟ್ಟುವ ಕೆಲಸ ಭರದಿಂದ ಸಾಗಿತ್ತು. ಈ ಆಣೆಕಟ್ಟಿಗೆ ಕುಪ್ಪಲ ಸನಿಹ ಪಶ್ಚಿಮಕ್ಕೆ ಇರುವ ಗಿರೇಹಳ್ಳದ ಉಸುಕನ್ನು ರೈಲ್ವೇ ಮುಖಾಂತರ ಪೂರೈಸಲಾಗುತ್ತಿತ್ತು. ಇಲ್ಲಿಗೆ ಪಠಾನರ ಒಂದು ತಂಡ ಬಂದು ಹಿರೇಹಳ್ಳದ ದಂಡೆಯ ಮೇಲೆ ನಿಂತಿತು. ಹಗಲೆಲ್ಲಾ ಬೋಗಿಗಳಿಗೆ ಉಸುಕು ತುಂಬಿ ಆಣೆಕಟ್ಟಿನತ್ತ ಅವುಗಳನ್ನು ರವಾನಿಸುವುದು; ರಾತ್ರಿ ಸಮಯದಲ್ಲಿ ಸುತ್ತ ಮುತ್ತಲಿನ ಸಮೀಪದ ಹಳ್ಳಿಗಳಿಗೆ ನುಗ್ಗಿ ಕುರಿ, ಕೋಳಿ, ಹಣ ಅಷ್ಟೇ ಏಕೆ ಸಿಕ್ಕಿದ್ದನ್ನು ದೋಚಿಕೊಂಡು ಬರುತ್ತಿದ್ದರು. ಬಿಡುವಿನ ಸಮಯದಲ್ಲಿ ಹಗಲೇ ಹಳ್ಳಿಗಳಿಗೆ ನುಗ್ಗಿ ಅತ್ಯಾಚಾರಕ್ಕೂ ಕೈಹಾಕಿದರು. ಇವರ ಆಗಮನದಿಂದ ಕುಪ್ಪಲದ ರಜಾಕಾರರಿಗೆ ಹೆಚ್ಚಿನ ಬೆಂಬಲ ಸಿಕ್ಕಿತು. ರಜಾಕಾರರು ಸಂಸ್ಥಾನ ಸಂಸ್ಥಾನದ ಅರಸು ಉಸ್ಮಾನ ಅಲಿಖಾನ್ ಇತ್ತಿಹಾದ ಲ್‌ಮುಸಲ್ಮೀನ್ ಸಂಸ್ಥೆ ಮರೆತರು. ಕಾಟೋ ಲೂಟೋ ಬಾಟೋ ಘೋಷಣೆ ಕೂಗುತ್ತಾ ಬೀದಿಗಳಲ್ಲಿ ಅಲೆಯಹತ್ತಿದರು. ಮುಸಲ್ಮಾನರನ್ನುಳಿದು ಇತರರು ಭಯಭೀತರಾದರು. ಕುಪ್ಪಲ ರೇಲ್ವೇ ನಿಲ್ದಾಣಕ್ಕೆ ಹೋಗುವವರನ್ನು ಝಡ್ತಿ ಮಾಡಿ, ಅವರಲ್ಲಿದ್ದ ಹಣವನ್ನು ಕಸಿದುಕೊಂಡು ಬಿಡುತ್ತಿದ್ದರು. ಹಿಂದುಗಳು ಕುಪ್ಪಲವನ್ನು ಬಿಟ್ಟು ನೆರೆಯ ಜಿಲ್ಲೆಗಳಿಗೆ ತೆರಳಿದರು. ಊರು ಬಿಕೋ ಎನ್ನುತ್ತಿತ್ತು. ಕುಪ್ಪಲ ಗ್ರಾಮದ ಪೋಲೀಸ್‌ಪಟೇಲ್ ಬಸವನಗೌಡ ಮತ್ತು ಮಾಲಿಗೌಡ ಭರಮಗೌಡ ಭೂಗತ ಸ್ವಾತಂತ್ರ್ಯ ಹೋರಾಟಗಾರರಿಗೆ ಸಹಾಯ ಮಾಡುವರೆಂಬ ಶಂಕೆಯಿಂದ ಸರಕಾರ ಅವರನ್ನು ಬಂಧಿಸಲು ಪೋಲೀಸರಿಗೆ ಆದೇಶ ನೀಡಿತು. ಈ ಸುದ್ದಿ ತಿಳಿದ ಈರ್ವರೂ ಕೂಡಲೇ ಕುಪ್ಪಲವನ್ನು ಬಿಟ್ಟರು. ಸರ್ದಾರ

ರಹಿಮಾನ್ ಸಾಹೇಬನಿಗೆ ಪೋಲೀಸ್ ಗೌಡಕಿಯನ್ನು, ಬಸ್ ಮಾಲಿಕ ಮಹಮ್ಮದ್ ಖಾನ್ ಸಾಹೇಬನಿಗ ಮಾಲಿಗೌಡಕಿಯನ್ನು ಸರಕಾರ ದಯಪಾಲಿಸಿತು. ಈರ್ವರೂ ಗೌಡಕಿಯನ್ನು ಭರ್ಜರಿ ಚಲಾಯಿಸಿದರು. ಕಾಶಿಂ ರಜ್ವಿ ಹೈದರಾಬಾದ್‌ನ ವಿವಿಧ ಸ್ಥಳಗಳಿಗೆ ಸಂದರ್ಶನವಿತ್ತು ರಜಕಾರರಿಗೆ ಕುಮ್ಮಕ್ಕು ನೀಡುತ್ತಿದ್ದನು. ಅವನ ಅಟ್ಟಹಾಸಕ್ಕೆ ಎಣೆಯೇ ಇದ್ದಿಲ್ಲ. ಕುಪ್ಪಲದಲ್ಲೂ ಪ್ರತಿಯೊಬ್ಬ ರಜಕಾರ ತಾನೇ ರಜ್ವಿಯೆಂದು ತಿಳಿದಿದ್ದನು.

ಹೈದರಾಬಾದ್‌ನಲ್ಲಿದ್ದ ಭಾರತ ಸರಕಾರದ ರೆಜಿಮೆಂಟ್ ಜನರಲ್ ಕೆ.ಎಂ. ಮುನ್ಷಿ ನೀಡಿದ ಆಳವಾದ ವರದಿಯನ್ನು ಆಧರಿಸಿ ಭಾರತ ಸರಕಾರ ಹೈದರಾಬಾದಿಗೆ ದಿಗ್ಬಂಧನ ಹೇರಿತು. ಹೈದರಾಬಾದ್ ಸರಹದ್ದಿನಲ್ಲಿ ಸಂಚರಿಸುವ ರೈಲುಗಳು ಈ ಭಾಗದಲ್ಲಿರುವ ನಿಲ್ದಾಣಗಳಲ್ಲಿ ನಿಲ್ಲಬಾರದೆಮದು ಭಾರತ ಸರಕಾರ ಆದೇಶ ನೀಡಿತು. ಅಂತೆಯೇ ಭಾರತದ ಗಡಿ ಗದುಗಿನಿಂದ ಹೊರಟ ರೈಲು ಸಂಸ್ಥಾನದ ಸರಹದ್ದಿನಲ್ಲಿರುವ ಬನ್ನಿಕೊಪ್ಪ ಭಾನಾಪೂರ, ಕುಪ್ಪಲ, ಗಿಣಿಗೇರಾ, ಮುನಿರಾಬಾದ್ ನಿಲ್ದಾಣಗಳಲ್ಲಿ ನಿಲ್ಲದೇ ಭಾರತ ಸರಕಾರದ ಆದೇಶದ ಮೇರೆಗೆ ಹೊಸಪೇಟೆ ನಿಲ್ದಾಣದಲ್ಲಿ ನಿಲ್ಲುತ್ತಿದ್ದವು. ತುಂಗಭದ್ರಾ ನದಿಯಲ್ಲಿ ''ಬೋಕರಾ ಹರಿಗೋಲು ಡೋಣಿಗಳ ಚಲನವನ್ನು ಭಾರತ ಸರಕಾರ ನಿರ್ಬಂಧಿಸಿತು.''

ಯುದ್ಧದ ಸಿದ್ಧತೆಯನ್ನರಿತ ಕಾಶೀಂ ರಜ್ವಿ ಮತ್ತು ಪ್ರಧಾನಮಂತ್ರಿ ಮೀರೆಲಾಯಿತ್ ಅಲಿ ಇವರ ವೀರ ವಾಣಿಗಳನ್ನು ಆಲಿಸಿದ ಘೋಷಣೆ ಕೂಗುತ್ತಾ ನಡೆದಾಡುವ ರಜಕಾರರನ್ನು ನಂಬಿದ ಜಿನ್ನಾರವರ ಅಪ್ರತ್ಯಕ್ಷ ಬೆಂಬಲ ನಂಬಿದ ಮೀರ್ ಉಸ್ಮಾನ್ ಅಲಿಖಾನನು ಸ್ವತಂತ್ರ ಇಸ್ಲಾಂ ರಾಜ್ಯ ಕನಸು ಕಂಡನು. ರಾಜಗೋಪಾಲಾಚಾರ್ಯರು, ಪಂಡಿತ್ ನೆಹರೂ ಮತ್ತು ಉಕ್ಕಿನ ಮನುಷ್ಯ ಸರ್ದಾರ ವಲ್ಲಭಾಭಾಯಿ ಪಟೇಲ್, ವಿ.ಪಿ. ಮೆನನ್ ಆಪ್ತಾಲೋಚನೆಯಲ್ಲಿ ತೊಡಗಿದರು. ಸರ್ದಾರ ವಲ್ಲಭಾಭಾಯಿ ಪಟೇಲರು ಹೈದರಾಬಾದಿನ ಮೇಲೆ ಸೈನಿಕ ಕ್ರಮ ಅನಿವಾರ್ಯವೆಂದು ಸಮರ್ಥಿಸಿಕೊಂಡರು. ಆದರೆ ರಾಜಗೋಪಾಲಾಚಾರ್ಯರು 'ಸೈನಿಕ ಕ್ರಮ' ಪದ ಬಿಟ್ಟು 'ಪೋಲೀಸ್

ಕಾರ್ಯಾಚರಣೆ' ಪದ ಬಳಸಿದರೆ ಅಂತರರಾಷ್ಟ್ರೀಯ ಮಟ್ಟದಲ್ಲಿ ಯಾವ ಸಮಸ್ಯೆ ಉದ್ಭವಿಸುವುದಿಲ್ಲವೆಂದು ಸೂಚಿಸಿದರು.

ಪೂರ್ವ ನಿಯೋಜನೆಯಂತೆ ೧೨-೦೯-೧೯೪೮ರಂದು ನಡೆದ ಹೋರಾಟದಲ್ಲಿ ಭಾರತದ ಸೈನಿಕ ತುಕಡಿಗಳು ದಿನಾಂಕ ೧೩-೯-೧೯೪೮ ರಂದು ಪುಣೆ, ಅಹಮ್ಮದ್‌ನಗರ, ಸೊಲ್ಲಾಪುರ, ಹರಿಹರ, ಗದಗ ತಾಣಗಳಲ್ಲಿ ಪ್ರತ್ಯೇಕ ಬೀಡು ಬಿಟ್ಟಿತು. ಪಾಕಿಸ್ತಾನದ ಶಿಲ್ಪಿ ಬ್ಯಾರಿಸ್ಟರ್ ಮಹಮ್ಮದ್ ಆಲಿ ಜಿನ್ನಾರವರು ೧೨-೯-೧೯೪೩ ರಂದು ಮರಣ ಹೊಂದಿದ ಸುದ್ದಿ ೧೩-೯-೧೯೪೮ರಂದು ಮಧ್ಯರಾತ್ರಿಗೆ ಪುಣೆಗೆ ಆಗಮಿಸಿ ಕಾರ್ಯಾಚರಣೆ ಆಜ್ಞೆ ನೀಡಿದರು. ೧೩-೯-೧೯೪೮ರಂದು ಮಧ್ಯರಾತ್ರಿ ಏಕಕಾಲಕ್ಕೆ ಎಲ್ಲಾ ದಿಕ್ಕುಗಳಿಂದ ಹೈದರಾಬಾದಿನ ಮೇಲೆ ಕಾರ್ಯಾಚರಣೆ ನಡೆಸಿದರು. ಪುಣೆಯಿಂದ ದಂಡನಾಯಕ ರಾಜೇಂದ್ರಸಿಂಹ, ಅಹಮ್ಮದ್‌ನಗರದಿಂದ ದಂಡನಾಯಕ ಭ್ರಾರ, ಸೊಲ್ಲಾಪುರದಿಂದ ಮೇಜರ್ ಜೆ. ಎನ್. ಚೌಧರಿ ಹರಿಹರದಿಂದ ಬ್ರಿಗೇಡಿಯರ್ ಎ.ವಿ. ರುದ್ರ, ಗದುಗಿನ ದಂಡನಾಯಕ ಭಾಟಿಯಾ ಇವರು ಸೈನ್ಯದೊಂದಿಗೆ ಹೈದರಾಬಾದ್ ಸಂಸ್ಥಾನದಲ್ಲಿ ಪ್ರವೇಶಿಸಿದರು.

ನಿಲ್ದಾಣದ ಅಧಿಕಾರಿಗಳಿಗೆ ಯಾವ ಮುನ್ಸೂಚನೆಯಿಲ್ಲದೇ ಸೈನಿಕರನ್ನು ಹೊತ್ತ ದೊಡ್ಡ ಗೂಡ್ಸ್‌ಗಾಡಿ ಗದುಗಿನಿಂದ ನೇರವಾಗಿ ಚಲಿಸಿ ನಿಂತಿತು. ಕುಪ್ಪಲ ರೈಲ್ವೆ ಅಧಿಕಾರಿಗಳು ಅಚ್ಚರಿ ಪಡುತ್ತಿರುವಾಗಲೇ ಸೈನಿಕರು ಗಾಡಿಯ ಡಬ್ಬಿಯೊಳಗಿನಿಂದ ಕೆಳಗೆ ಧುಮುಕಿದರು. ರೈಲ್ವೆ ಪೋಲೀಸರೊಂದಿಗೆ ಚರ್ಚಿಸಿ ಅವರ ನೆರವಿನಿಂದ ಭಾಟಿಯಾ ಕಾರ್ಯಾಚರಣೆ ಕೈಗೊಂಡರು. ರಜಕಾರರು ಪೋಲೀಸರು ಅಧಿಕಾರಿಗಳು ನಿದ್ರಾವಸ್ಥೆಯಲ್ಲಿದ್ದುದನ್ನು ಕಂಡು ಕೋಟೆಯಲ್ಲಿ ಹೈದರಾಬಾದ್ ಸರಕಾರದ ಸೈನ್ಯವಿರಬಹುದೆಂದು ಊಹಿಸಿ ದಂಡನಾಯಕ ಭಾಟಿಯಾ ಕೆಲವು ಸೈನಿಕರನ್ನು ಅಲ್ಲಿರಿಸಿ ಉಳಿದ ಸೈನಿಕರೊಂದಿಗೆ ರೈಲ್ವೆ ಪೋಲೀಸರ ನೆರವಿನಿಂದ ಕುಪ್ಪಲ ಜಿಲ್ಲೆಯ ತಾಲೂಕುದಾರ (ಜಿಲ್ಲಾಧಿಕಾರಿ) ಹುಸೇನ್ ಸಾಹೇಬರ ಆವರಣದಲ್ಲಿ ಮಲಗಿದ್ದ ಚೌಕಿದಾರನನ್ನು ಬಂಧಿಸಿ ತಾಲೂಕುದಾರನ ನಿವಾಸವನ್ನು ಸುತ್ತುವರೆದು ನಿದ್ರೆಯಲ್ಲಿದ್ದ ತಾಲೂಕುದಾರನನ್ನು ದಂಡನಾಯಕ

ಭಾಟಿಯಾ ಎಚ್ಚಿಸಿದನು. ಕೂಡಲೇ ಇದನ್ನರಿತ ತಾಲೂಕುದಾರನು ಶರಣಾದನು. ನಸುಕಿನಲ್ಲಿಯೇ ರಜಾಕಾರರಿಗೆ ಪಠಾಣರಿಗೆ ಪೋಲೀಸರಿಗೆ, ಭಾರತೀಯ ಸೈನ್ಯ ಕುಪ್ಪಲದಲ್ಲಿ ಪ್ರವೇಶಿಸಿದ ಸುದ್ದಿ ತಿಳಿಯಿತು. ಕೂಡಲೇ ಬಂದೂಕು (೩೦೩) ತೆಗೆದುಕೊಂಡು ಮಾಳಿಗೆಗಳ ಮೇಲೇರಿ ಯುದ್ಧಕ್ಕೆ ಸನ್ನದ್ಧರಾದರು. ದಂಡನಾಯಕ ಭಾಟಿಯಾ ಸಲಹೆಯ ಮೇರೆಗೆ ತಾಲೂಕುದಾರರ ತಹೆ ಹುಸೇನ ಸಾಹೇಬನು ಕುಪ್ಪಲದ ಬೀದಿ ಬೀದಿಗಳಲ್ಲಿ ಸಂಚರಿಸಿ ಯುದ್ಧಕ್ಕೆ ಸಿದ್ಧರಾದ ರಜಾಕಾರರಿಗೆ ಪಠಾಣರಿಗೆ ಪೋಲೀಸರಿಗೆ ಬಂದೂಕು ಕೆಳಗಿರಿಸಲು ಆದೇಶ ನೀಡಿದನು. ಕೆಲ ರಜಾಕಾರರು ತಪ್ಪಿಸಿಕೊಂಡರು. ಕೆಲ ರಜಾಕಾರರನ್ನು ಬಂಧಿಸಲಾಯಿತು. ಮುಸಲ್ಮಾನ ಮಹಿಳೆಯರು ಗುಡ್ಡದಲ್ಲಿ ಅವಿತುಕೊಂಡರು. ತೆರೆದ ಕದಗಳು ತೆರೆದಂತಿದ್ದವು. ತಾಲೂಕುದಾರ ತಖಿ ಹುಸೇನಸಾಹೇಬರ ಮುತ್ಸದ್ದಿತನದಿಂದ ರಕ್ತಪಾತ ತಪ್ಪಿತು. ಭೂಗತ ಸ್ವಾತಂತ್ರ್ಯಾಭಿಮಾನಿ ಯೋಧರು ಕುಪ್ಪಲಕ್ಕೆ ಆಗಮಿಸಿದರು. ಶಾಂತಿ ಸಭೆ ಸೇರಿತು. ಎಲ್ಲೆಡೆ ಶಾಂತಿ ಲಭಿಸಿತು. ಕುಪ್ಪಲ ಮತ್ತೆ ಕೊಪ್ಪಳವೆಂದು ಪರಿವರ್ತಿಸಲ್ಪಟ್ಟಿತು. ಕೊಪ್ಪಳದ ಮೇಲೆ ಮೂರು ದಿನಗಳ ಕಾಲ ಸೈನಿಕ ಆಡಳಿತ ಹೇರಲ್ಪಟ್ಟಿತು. ಮಡಿದ ಪಠಾಣದ ಕುಟುಂಬದ ಸದಸ್ಯರಿಗೆ ಅವರವರ ತಾಣಗಳಿಗೆ ತೆರಳಲು ರೈಲ್ವೆ ಪುಕ್ಕಟೆ ಪಾಸ್ ನೀಡಿತು. ಸೈನ್ಯ ಹೈದರಾಬಾದಿನತ್ತ ಚಲಿಸಿತು.

ತುಂಗಭದ್ರಾ ಆಣೆಕಟ್ಟಿನಲ್ಲಿ ಬ್ರಿಗೇಡಿಯರ್ ರುದ್ರನಿಗೆ ಪಠಾಣರು ರಜಾಕಾರರು ಬಲವಾಗಿ ಎದುರೇಟು ಕೊಟ್ಟರು. ಬ್ರಿಗೇಡಿಯರ್ ರುದ್ರನ ನೆರವಿಗೆ ಸೊಲ್ಲಾಪುರದಿಂದ ವಿಮಾನಗಳು ಬಂದವು. ಹರಿಹರದಲ್ಲಿ ಕಾಯ್ದಿಟ್ಟ ಗುರ್ಖಾಸೈನ್ಯ ಆಗಮಿಸಿತು. ಅನೇಕ ಪಠಾಣರು ಮಡಿದರು. ಉಳಿದವರು ಮೂರು ದಿನಗಳ ನಂತರ ಶರಣಾಗತರಾದರು.

ಅರಸನ ಆಕಾಶವಾಣಿ ಭಾಷಣ ಪ್ರಸಾರ ಕೇಳಿದ ಹೈದರಾಬಾದ್ ಸೈನ್ಯ ಯುದ್ಧ ನಿಲ್ಲಿಸಿತು. ಮೇಜರ್ ಜನರಲ್ ಚೌಧರಿ ಸಿಕಂದರಾಬಾದ್ ಪ್ರವೇಶಿಸಿ ಹೈದರಾಬಾದಿನ ಮೇಲೆ ಭಾರತದ ಧ್ವಜವನ್ನು ೧೮-೯-೧೯೪೮ರಂದು ಹಾರಿಸಿದನು. ಭಯದ ತೆರೆ ಸರಿದು ಸಡಗರದ ಸಂಭ್ರಮ ಮನೆಮನೆಗೆ ಹಬ್ಬಿತು.

ಕೊಪ್ಪಳದಲ್ಲಿಯೂ ಸಂತಸ ಸಂಭ್ರಮ ಸೂರೆಗೊಂಡಿತು. ನಾಡಗೀತೆ ನುಡಿಯಿತು. ಕೊಪ್ಪಳ ಭಾರತ ಸರ್ಕಾರಕ್ಕೆ ಧನ್ಯವಾದಗಳನ್ನು ಸಲ್ಲಿಸಿತು.

ಕ್ರಿ.ಶ. ೧೯೫೦ರಲ್ಲಿ ಹೈದರಾಬಾದ್ ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರ ಅಸ್ತಿತ್ವಕ್ಕೆ ಬಂದಿತು. ಬಿ. ರಾಮು ಕಿಶನ್‌ರಾವ್ ಪ್ರಪ್ರಥಮ ಅಧ್ಯಕ್ಷಗಿರಿಯಲ್ಲಿ ೧೯೪೬ರ ವರೆಗೆ ಕಂದಾಯ ಇಲಾಖೆಯ ಅಧೀನದಲ್ಲಿದ್ದ ಕೊಪ್ಪಳ ನಗರ ಸಭೆ ಸೇರ್ಪಟ್ಟು ಸ್ವತಂತ್ರ ನಗರಸಭೆ ಎಂದು ಮನ್ನಣೆ ಪಡೆಯಿತು. ಕ್ರಿ.ಶ. ೧೯೫೦ರಲ್ಲಿ ಹೊಣೆಗಾರ ಸರಕಾರ ಕೊಪ್ಪಳದ ಜನಸಂಖ್ಯೆ ೧೭,೩೧೪ ಆಧಾರದ ಸ್ವರಾಜ್ಯ ಕಾನೂನಿನಡಿಯಲ್ಲಿ ನಗರಸಭೆಯನ್ನು ಪುರಸಭೆಗೆ ಮನ್ನಣೆ ನೀಡಿತು. ೧೯೯೮ರಲ್ಲಿ ಕರ್ನಾಟಕ ರಾಜ್ಯದ ಜಿಲ್ಲೆಗಳ ಮರುವಿಂಗಡಣೆಯಲ್ಲಿ ಕೊಪ್ಪಳವು ಸ್ವತಂತ್ರ ಕಂದಾಯ ಜಿಲ್ಲೆಯೆಂದು ಸಾರಿತು. ಪುರಾತನ ನಗರವಾದ ಕೊಪ್ಪಳವು ಜಿಲ್ಲಾ ಕೇಂದ್ರವಾಗಿ ಮತ್ತೆ ಪುನರುತ್ಥಾನದ ಹಾದಿಯನ್ನು ಹಿಡಿದಿದೆ.

ಅಧ್ಯಾಯ ೫

# ಕೊಪ್ಪಳ : ವಾಸ್ತುಶಾಸ್ತ್ರ ಮಾದರಿಗಳ ಅವಲೋಕನ

೫.೧ ಕೋಟೆ

೫.೨ ದೇಗುಲ ವಾಸ್ತು ಶಿಲ್ಪದ ಮಾದರಿ

ಅಧ್ಯಾಯ ೫

# ಕೊಪ್ಪಳ : ವಾಸ್ತುಶಾಸ್ತ್ರ ಮಾದರಿಗಳ ಅವಲೋಕನ

ಭಾರತದಲ್ಲಿ ವಾಸ್ತುಶಾಸ್ತ್ರಕ್ಕೆ ಪ್ರಾಚೀನವಾದ ಇತಿಹಾಸವಿದೆ. ಆರಂಭಕಾಲದಲ್ಲಿ ಮಾನವ ಕಟ್ಟಿಕೊಂಡ ಸಣ್ಣ ಸಣ್ಣ ಗುಡಿಸಲುಗಳಿಂದ ಹಿಡಿದು ಚರಿತ್ರೆಯಲ್ಲಿ ಬರುವ ಕೋಟೆ-ಕೊತ್ತಲಗಳು, ದೇಗುಲಗಳು, ಗುಮ್ಮಟಗೋಪುರಗಳಿಂದ ಹಿಡಿದು ನಮ್ಮ ಸಂದರ್ಭದ ದೊಡ್ಡ ದೊಡ್ಡ ಬಂಗಲೆಗಳು - ಭವನಗಳು ಇದರ ವ್ಯಾಪ್ತಿಯಲ್ಲಿ ಬರುತ್ತವೆ. ಪ್ರಪಂಚದಲ್ಲಿ ಮಾನವನಿಂದ ಭೌತಿಕವಾಗಿ ಸೃಷ್ಟಿಯಾಗುವ ಮತ್ತು ನಿಸರ್ಗವು ಒಂದು ವಸ್ತುವಾಗಿ ನಿರ್ಮಾಣವಾಗುವ ಒಂದು ಪ್ರಕ್ರಿಯೆಯು 'ವಾಸ್ತು' ಎನಿಸುತ್ತದೆ. ಮತ್ತೊಂದು ವ್ಯಾಖ್ಯಾನದ ಪ್ರಕಾರ ಪ್ರಕೃತಿಯನ್ನು ಪ್ರತಿಮೆಗೊಳಿಸುವುದೇ ವಾಸ್ತು ಎಂದು ಎಸ್ಪರ್‌ಸನ್ ರು ವ್ಯಾಖ್ಯಾನಿಸಿದ್ದಾರೆ. ವಾಸ್ತು ಒಂದು ಕಲೆ ಮತ್ತು ಅದು ಒಂದು ವಿಜ್ಞಾನ ಕೂಡ. ಇವುಗಳ ಹಿನ್ನೆಲೆಯಲ್ಲಿ ಕೊಪ್ಪಳ ಪ್ರದೇಶದ ವಾಸ್ತು ಶಿಲ್ಪದ ಸಮಗ್ರ ವಿವೇಚನೆಗೆ ಇಳಿಯುವುದೊಳಿತು.

ಕೊಪ್ಪಳದ ಭೌಗೋಳಿಕ ಪರಿಸರದಲ್ಲಿ ಗುಡ್ಡಗಾಡು ನಮಗೆ ದೊರಕುತ್ತದೆ. ಆ ಗುಡ್ಡ ಬೆಟ್ಟಗಳ ನಡುವೆ ಬೆಳೆದು ನಿಂತ ಕೋಟೆ ಹಲವು ವಾಸ್ತು ವಿಶೇಷಗಳನ್ನು ಹೊಂದಿದೆ. ದೇವಾಲಯಗಳ ಹಿನ್ನೆಲೆಯಲ್ಲಿ ಮಾತನಾಡುವುದಾದರೆ, ಕೊಪ್ಪಳ ಪ್ರದೇಶದಲ್ಲಿ ನಾಗರ, ವೇಸರ ಮತ್ತು ದ್ರಾವಿಡ ಶೈಲಿಯ ವಾಸ್ತುವಿನ ಬೆಳವಣಿಗೆಯನ್ನು ಗುರುತಿಸಬಹುದು. ಕದಂಬ ಗಂಗ, ಚಾಲುಕ್ಯ, ರಾಷ್ಟ್ರಕೂಟ, ಕಳಚೂರಿ ಮುಂತಾದ ಅರಸರು ಕೊಪ್ಪಳ ಪರಿಸರದಲ್ಲಿ ದೇವಾಲಯ, ಬಸದಿ, ಮಸ್‌ಜಿದ್ ಮುಂತಾದವುಗಳನ್ನು ಕಟ್ಟಿಸಿದ್ದಾರೆ. ಇವುಗಳ ಶಾಸ್ತ್ರೀಯ ಅಧ್ಯಯನ ನಮ್ಮ ಸಂದರ್ಭದಲ್ಲಿ ಪ್ರಸ್ತುತವಾದರೂ ಅಧ್ಯಯನದ ಮಿತಿಗೊಳಪಟ್ಟು ಸಮೀಕ್ಷಾ ರೂಪದಲ್ಲಿ ಕೊಪ್ಪಳದ ದೇವಾಲಯದ ವಾಸ್ತು ವಿವರಗಳನ್ನು ಚರ್ಚಿಸುವುದು ಒಳಿತು. ಏಕೆಂದರೆ ಕೊಪ್ಪಳದಲ್ಲಿ ಕೆಲವು ದೇವಾಲಯಗಳಿಲ್ಲ. ಕನ್ನಡ ವಿಶ್ವವಿದ್ಯಾಲಯ, ಹಂಪಿಯವರು ಕೊಪ್ಪಳ ಪರಿಸರದ ದೇವಾಲಯಗಳ ಕೋಶವನ್ನೇ ತಯಾರಿಸಿದ್ದಾರೆ. ಹೀಗಿರುವಾಗ ಅಧ್ಯಯನದ ಮಿತಿಯಲ್ಲಿ ಆಯ್ದ ಕೆಲವು ದೇವಾಲಯಗಳ ಮತ್ತು ಕೊಪ್ಪಳದ ಗಿರಿದುರ್ಗದ ಬಗೆಗೆ ವಿಪುಲ ಮಾಹಿತಿಯನ್ನು ಕೊಡುವ ಆಶಯವನ್ನು ಹೊಂದಿದೆ.

### ೫. ೧. ಕೋಟೆ

ಗಿರಿದುರ್ಗಗಳು ಚರಿತ್ರೆಯಲ್ಲಿ ವಿರಳವಾಗಿ ಕಂಡುಬರುತ್ತವೆ. ಗಿರಿದುರ್ಗವನ್ನು ಕಟ್ಟುವಲ್ಲಿ ಮನುಷ್ಯನ ಪಾತ್ರಕ್ಕಿಂತ ನಿಸರ್ಗದ ಪಾತ್ರ ಹಿರಿದು. ಭೌಗೋಳಿಕವಾಗಿ ಒಂದು ಪಟ್ಟಣದ ಸುತ್ತ ಗುಡ್ಡ ಬೆಟ್ಟಗಳನ್ನು ಹೊಂದಿದ್ದರೆ, ಗಿರಿದುರ್ಗಕ್ಕೆ ಪ್ರಶಸ್ತವಾದ ಸ್ಥಳವೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಗಿರಿದುರ್ಗಗಳು ಕರ್ನಾಟಕದ ಚರಿತ್ರೆಯಲ್ಲಿ ಹಲವಿದ್ದರೂ ಕೊಪ್ಪಳದ ಗಿರಿದುರ್ಗ ಹತ್ತು ಹಲವು ಕಾರಣಗಳಿಂದ ವಿಶೇಷಗಳನ್ನು ಹೊಂದಿದೆ. ಕರ್ನಾಟಕದ ಮೊಟ್ಟಮೊದಲ ಗಿರಿದುರ್ಗವನ್ನು ಬಾದಾಮಿ ಚಾಲುಕ್ಯರ ಒಂದನೇ ಪುಲಕೇಶಿಯು ನಿರ್ಮಿಸಿರುವುದಕ್ಕೆ ದಾಖಲೆಗಳಿವೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ವಿವರಿಸಿರುವಂತೆ ಗಿರಿದುರ್ಗಗಳ ನಿರ್ಮಾಣ ನಡೆದಿರುವುದು ವಿಶೇಷ. ಈ

ಗಿರಿದುರ್ಗಗಳು ಹೆಚ್ಚು ಸುರಕ್ಷಿತವಾಗಿರುತ್ತವೆ. ಹಾಗೆಯೇ ಕೋಟೆ ಕಟ್ಟಿದ ಗಿರಿಗಳು ವಿಶಾಲವಾಗಿರುತ್ತವೆ. ಮಹಾದ್ವಾರ ಇಕ್ಕಟ್ಟಾಗಿರುತ್ತದೆ. ವೈರಿಗಳು ಸುಲಭವಾಗಿ ಕೋಟೆಯನ್ನು ಪ್ರವೇಶಿಸಲು ಸಾಧ್ಯವಾಗದು. ಕರ್ನಾಟಕದ ಸಂಸ್ಕೃತಿಯ ಸಂದರ್ಭದಲ್ಲಿ ಒಂದನೆಯ ಪುಲಕೇಶಿಯು ನಿರ್ಮಿಸಿದ ಈ ಗಿರಿದುರ್ಗ ಮೊಟ್ಟ ಮೊದಲನೆಯದು. ಉಳಿದ ಕಡೆಗಳಲ್ಲಿ ಗಿರಿದುರ್ಗಗಳನ್ನು ನಿರ್ಮಿಸಲು ಇದು ಚರಿತ್ರೆಯಾದ್ಯಂತ ಸ್ಫೂರ್ತಿ ನೀಡಿದೆ. ಕೊಪ್ಪಳ ಮತ್ತು ಕೊಪ್ಪಳ ಪ್ರದೇಶದಲ್ಲಿ ಈ ಗಿರಿದುರ್ಗಗಳನ್ನು ಹೆಚ್ಚಾಗಿ ಕಾಣಬಹುದು. ಅವುಗಳಲ್ಲಿ ಕೊಪ್ಪಳದ ಗಿರಿದುರ್ಗ, ಬಹದ್ದೂರ್ ಬಂಡೆಯ ಗಿರಿದುರ್ಗ, ಇರಕಲ್‌ಗಡದ ಗಿರಿದುರ್ಗ, ಕಮ್ಮತ್ ಗುಡ್ಡದ ಗಿರಿದುರ್ಗಗಳನ್ನು ಮುಖ್ಯವಾಗಿ ಹೆಸರಿಸಬಹುದು. ಆದರೂ ಎಣಿಕೆಗೆ ನಿಲುಕದಷ್ಟು ಗಿರಿಕೋಟೆಗಳು ಕನ್ನಡದ ಸಂದರ್ಭದಲ್ಲಿ ದೊರಕುತ್ತವೆ.

ದುರ್ಗಗಳಲ್ಲಿ ವನದುರ್ಗ, ಗಿರಿದುರ್ಗ ಮತ್ತು ಜಲದುರ್ಗಗಳನ್ನು ವಿದ್ವಾಂಸರು ಗುರುತಿಸಿದ್ದಾರೆ. ವನದುರ್ಗವೆಂದರೆ ಶತ್ರುಗಳಿಂದ ರಕ್ಷಣೆಯನ್ನು ಪಡೆಯಲು ದಟ್ಟವಾದ ಕಾಡಿನ ಮಧ್ಯೆ ಕಟ್ಟಲ್ಪಟ್ಟ ಕೋಟೆಯಾಗಿರುತ್ತದೆ. ನೈಸರ್ಗಿಕವಾಗಿ ಶತ್ರುಗಳು ಕೋಟೆಯೊಳಕ್ಕೆ ನುಸುಳದಂತೆ ತಡೆಹಿಡಿಯುವ ಕ್ರಮವಾಗಿ ಇದು ರೂಢಿಗೆ ಬಂದಿದೆ. ವನದುರ್ಗವು ಪುರಾತನ ದುರ್ಗದ ಶೈಲಿಯಿರಬೇಕು. ಏಕೆಂದರೆ ಬೇಟೆಗಾಗಿ ಮಾನವ ಕಾಡನ್ನು ಅನುಸರಿಸುತ್ತಿದ್ದ. ಈ ಅವಲಂಬನೆಯ ಮಧ್ಯೆ ಅವನಿಗೆ ಕೋಟೆ ಕಟ್ಟುವ ಬಯಕೆ ಬಂದಿರಬೇಕು. ಅದಕ್ಕಾಗಿ ದಟ್ಟ ಕಾಡಿನ ನಡುವೆ ಸುತ್ತಲೂ ಕೋಟೆಯನ್ನು ಕಟ್ಟಿಕೊಂಡು ಜೀವನ ಸಾಗಿಸುತ್ತಿದ್ದನೆಂಬುದು ಅನೂಹ್ಯವಲ್ಲ. ಜೊತೆಗೆ ಪ್ರಾಣಿಗಳಿಂದ ರಕ್ಷಣೆ ಪಡೆಯಲು ಈ ಕೋಟೆ ಹೆಚ್ಚು ಪ್ರಸ್ತುತವಾಗುತ್ತಿತ್ತು. ಮುಳ್ಳು ಕಂಟೆಗಳು, ಕಾಡುಪ್ರಾಣಿಗಳು, ಕೊರಕಲು ಪ್ರದೇಶಗಳು ಅಭೇಧ್ಯ ಕೋಟೆಯಂತೆ ನೈಸರ್ಗಿಕವಾಗಿ ನಿರ್ಮಾಣವಾಗುತ್ತಿದ್ದವು. ಈ ಕಾರಣದಿಂದ ಮಾನವ ವನದುರ್ಗಗಳನ್ನು ಕಟ್ಟುವುದು ಅವುಗಳ ಉಪಯೋಗವನ್ನು ಪಡೆದುಕೊಳ್ಳುವುದನ್ನು ಜೊತೆಜೊತೆಗೆ ನಡೆಸಿದನು. ಚರಿತ್ರೆಯಲ್ಲಿ ಬೆಳಗಾವಿಯ ಕೋಟೆಯನ್ನು ವನದುರ್ಗವೆಂದು ಗುರುತಿಸುತ್ತಾರೆ.

ಜಲದುರ್ಗವು ಶತ್ರುಗಳಿಂದ ರಕ್ಷಣೆ ಪಡೆಯಲು ರಾಜರುಕಟ್ಟಿಸಿಕೊಳ್ಳುತ್ತಿದ್ದ ಮತ್ತೊಂದು ವಿಧವಾದ ಕೋಟೆ. ಎತ್ತರದವರೆಗೆ ಗೋಡೆಯಿಂದ ಕೋಟೆಗಳನ್ನು ಕಟ್ಟಿ ಆ ಕಟ್ಟಡದ ಸುತ್ತಲೂ ಆಳವಾಗಿ ತೋಡಿದ ಕಂದಕಗಳಲ್ಲಿ ನೀರು ಹಾಯಿಸುತ್ತಿದ್ದರು. ಇದರಿಂದಾಗಿ ಕೋಟೆಯು ನೀರಿನಿಂದ ಸುತ್ತುವರೆದು ರಕ್ಷಣೆಯನ್ನು ನೀಡುತ್ತಿತ್ತು. ಶತ್ರುಗಳು ಇದನ್ನು ಬೇಧಿಸಲಾರದೆ ವಾಪಾಸಾಗುತ್ತಿದ್ದ ಸಂಗತಿಗಳು ಚರಿತ್ರೆಯಲ್ಲಿ ಸಾಕಷ್ಟು ಪ್ರಮಾಣದಲ್ಲಿ ದೊರೆಯುತ್ತವೆ. ಇದು ನಮ್ಮ ಪೂರ್ವಿಕರು ಕಂಡುಕೊಂಡ ತಂತ್ರಜ್ಞಾನದ ಹಿನ್ನೆಲೆಯಲ್ಲಿ ಮಾಡಿದ ಆಲೋಚನೆ ಎಂಬುದು ಇಲ್ಲಿ ಮಹತ್ವದ ಅಂಶ. ಕೋಟೆಯ ಸುತ್ತಲೂ ಆಳವಾಗಿ ನೀರನ್ನು ಮಾತ್ರ ನಿಲ್ಲಿಸದೆ ಅಲ್ಲಿ ವಿಷಜಂತುಗಳಾದ ಜಲಚರಗಳನ್ನು ಅದರಲ್ಲಿ ಬಿಡುತ್ತಿದ್ದರು. ಮೊಸಳೆ ಹಾವುಗಳನ್ನು ಆ ನೀರಿನಲ್ಲಿ ಬಿಡುತ್ತಿದ್ದುದರಿಂದ ಶತ್ರುಗಳು ಅದನ್ನು ಈಜಿಕೊಂಡು ಕೋಟೆಯನ್ನು ಬೇಧಿಸಲು ಆಗುತ್ತಿರಲಿಲ್ಲ. ಈ ಹಿನ್ನೆಲೆಯಲ್ಲಿ ಹಲವು ಜಲದುರ್ಗಗಳು ಹುಟ್ಟಿಕೊಂಡಿವೆ. ಶ್ರೀರಂಗಪಟ್ಟಣದ ಕೋಟೆಯನ್ನು ಜಲದುರ್ಗವೆಂದೇ ಗುರುತಿಸಿದ್ದಾರೆ.

ಗಿರಿದುರ್ಗಗಳು ಬೆಟ್ಟಗುಡ್ಡಗಳ ಮೇಲೆ ನಿರ್ಮಾಣವಾಗುತ್ತಿದ್ದವು. ಒಂದು ನಗರ ಅಥವಾ ಬೆಟ್ಟಗುಡ್ಡದ ಮೇಲೆ ನಿರ್ಮಿತವಾದ ಒಂದು ರಾಜಧಾನಿ ಕೇಂದ್ರಕ್ಕೆ ಕೋಟೆಗಳನ್ನು ಕಟ್ಟುತ್ತಿದ್ದರು. ಕ್ರಮೇಣ ಪ್ರತಿ ಪಟ್ಟಣಗಳು ಒಂದೊಂದು ಕೋಟೆಗಳನ್ನು ಕಟ್ಟಿಕೊಳ್ಳುವ ಪರಿಪಾಠ ಬೆಳೆಯಿತು. ಶತ್ರು ರಾಜರು ಪಟ್ಟಣವನ್ನು ಮುತ್ತಿಗೆ ಹಾಕಬೇಕೆಂದರೆ ಮೊದಲು ಆ ಪಟ್ಟಣದ ಕೋಟೆಗೆ ಮುತ್ತಿಗೆ ಹಾಕಬೇಕಾಗಿತ್ತು. ಗಿರಿದುರ್ಗಗಳು ನಿರ್ಮಾಣವಾಗುತ್ತಿದ್ದುದು ಬೆಟ್ಟಗುಡ್ಡಗಳ ಸಂದುಗೊಂದುಗಳಲ್ಲಿ ಸಮಾನಾಂತರವಾಗಿ ರೂಪಗೊಳ್ಳುತ್ತಿದ್ದವು. ಕೆಲವೆಡೆ ಬೆಟ್ಟದ ಉತ್ತುಂಗದವರೆಗೂ ಕಟ್ಟಡಗಳನ್ನು ಕಟ್ಟುತ್ತಿದ್ದರು. ಜೊತೆಗೆ ನಿಸರ್ಗ ನಿರ್ಮಿತ ಬೆಟ್ಟಗಳಿಗೆ ಕಟ್ಟಡಗಳನ್ನು ಹೊಂದಿಸಿ ಕಟ್ಟಲಾಗುತ್ತಿತ್ತು. ಶತ್ರು ರಾಜರು ಆ ರಾಜಧಾನಿಗೆ ಅಥವಾ ಪಟ್ಟಣಕ್ಕೆ ಮುತ್ತಿಗೆ ಹಾಕಬೇಕು ಎಂದರೆ ನಿಸರ್ಗ ನಿರ್ಮಿತ ಮತ್ತು ಮಾನವ ನಿರ್ಮಿತವಾದ ಕಟ್ಟಡಗಳ ಜೋಡಣೆಯನ್ನು ಬೇಧಿಸಬೇಕಾಗುತ್ತಿತ್ತು. ಇಂಥ ಕಟ್ಟಡದ ಕೋಟೆಗೆ ಕೊಪ್ಪಳದ ಗಿರಿದುರ್ಗವು ಜೀವಂತ ಸಾಕ್ಷಿಯಾಗಿದೆ.

ಕೊಪ್ಪಳದ ಗಿರಿದುರ್ಗವು ಅನೇಕ ಅರಸರಿಂದ ಕಟ್ಟಿಸಲ್ಪಟ್ಟಿದೆ. ಅದರ ನಿಜವಾದ ಕರ್ತೃ ಯಾರು ಎಂಬುದು ತಿಳಿದುಬಂದಿಲ್ಲ. ವಿದ್ವಾಂಸರ ಅಭಿಪ್ರಾಯದಂತೆ ಕೊಪ್ಪಳವು ನಾಲ್ಕು ಹಂತಗಳಲ್ಲಿ ನಿರ್ಮಾಣವಾಗಿದೆ ಎಂದು ಹೇಳುತ್ತಾರೆ. ಕೊಪ್ಪಳದ ಗುಡ್ಡಗಳ ಹೊರ ಹಂತದ ಕೋಟಯನ್ನು ಕೊನೆಯ ಕೋಟೆಯೆಂದು, ಅನಂತರದ ಕೋಟೆಯು ಎರಡನೆಯ ಹಂತದಲ್ಲಿ ನಿರ್ಮಾಣವಾಗಿದೆ ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

## ಹೊರವಲಯದ ಕೋಟೆ

ಕೊಪ್ಪಳದಲ್ಲಿ ಇರುವ ಮೋತಿಕೆರೆ (ಸಿಹಿ ನೀರಿನ ಕೆರೆ) ಮತ್ತು ಮಣ್ಣಿನ ಕೋಟೆ ಸಂಧಿಸುವ ಸ್ಥಳದಿಂದ ಕಟ್ಟಲಾದ ಕೋಟೆಯನ್ನು ಹೊರವಲಯದ ಕೋಟೆ ಎಂದು ಗುರುತಿಸುತ್ತಾರೆ. ಇದನ್ನು ಕಟ್ಟಿಸಿದವನು ಬಿಜಾಪುರದ ಅರಸನು ಎಂದು ಪ್ರತೀತಿ ಇದೆ. ಇದು ವೆಂಕಟೇಶ್ವರ ಬಾವಿಯ ಹತ್ತಿರ ಪಶ್ಚಿಮಕ್ಕೆ ನೇರವಾಗಿ ಸಾಗಿದೆ. ಉತ್ತರದಿಂದ ಪೂರ್ವಕ್ಕೆ ತಿರುಗಿ ನೇರವಾಗಿ ಕಟ್ಟಲ್ಪಟ್ಟಿದೆ. ಈ ಗುಡ್ಡದ ಕೆಲ ಭಾಗವನ್ನು ಭೂತಲಕ್ಕೆ ಸಮ ಮಾಡಿ ಕೋಟೆಯನ್ನು ಕಟ್ಟಿದಂತೆ ಕಂಡುಬರುತ್ತದೆ. ಅದರ ಮುಂದಿನ ಬೀದಿಯನ್ನು ಹಸನ್ ಬೀದಿ ಎಂದು ಸ್ಥಳೀಯರು ಕರೆಯುತ್ತಾರೆ. ಹಸನ್ ಬೀದಿಯಿಂದ ನೇರವಾಗಿ ನಡೆದು ಕೋಟೆಯ ಕಡೆಗೆ ತಿರುಗುವ ಬೀದಿಗೆ ಜವಾಹರ್ ಬೀದಿ ಎಂದು ಕರೆಯುತ್ತಾರೆ. ಹಸನ್ ಬೀದಿ ಮತ್ತು ಜವಹರ್ ಬೀದಿಯ ಮಧ್ಯಂತರ ಕೋಟೆಯನ್ನು ಹೊಂದಿಕೊಂಡಂತೆ ಇಲ್ಲಿನ ನಿವಾಸಿಗಳು ಮನೆಗಳನ್ನು ಕಟ್ಟಿಕೊಂಡಿದ್ದಾರೆ. ಜವಾಹರ್ ಬೀದಿಯಿಂದ ಈ ಕೋಟೆಯ ಬೀದಿಯು ನೇರವಾಗಿ ಪೂರ್ವಕ್ಕೆ ತಿರುಗಿದೆ. ಈ ಭಾಗಕ್ಕೆ ಹೊಂದಿಕೊಂಡಂತೆ ಸಮಾನಾಂತರವಾಗಿ ನಿರ್ಮಿಸಲಾದ ರಸ್ತೆಯನ್ನು ಸಾಲರ್‌ಜಂಗ್ ರಸ್ತೆ ಎಂದು ಕರೆದಿರುವರು. ಜವಾಹರ್ ಬೀದಿಯಿಂದ ಸಾಲರ್‌ಜಂಗ್ ಬೀದಿಯವರೆಗೂ ಇತ್ತೀಚೆಗೆ ಮನೆಗಳು ನಿರ್ಮಾಣವಾಗಿವೆ. ಇತ್ತೀಚೆಗೆ ಅಲ್ಲಿ ಹುಟ್ಟಿಕೊಂಡ ದೇವರಾಜ ಬಡಾವಣೆಯಲ್ಲಿ ಕೋಟೆಯ ಭಾಗದಲ್ಲಿ ಜನರು ಮನೆಗಳನ್ನು ಕಟ್ಟಿಕೊಂಡಿದ್ದಾರೆ. ಇಲ್ಲಿ ಮನೆಗಳನ್ನು ಕಟ್ಟುವಾಗ

ಕೋಟೆಯ ಹೊರವಲಯದ ಗೋಡೆಗೆ ಹಾಕಲಾದ ಭದ್ರ ಬುನಾದಿಯ ಕಲ್ಲುಗಳು ಮತ್ತು ಭೂಮಿಯಲ್ಲಿ ಹೂತುಹೋದ ಕೋಟೆಯ ಕಟ್ಟಡವು ಕಂಡುಬರುತ್ತದೆ. ಇಲ್ಲಿ ಬಳಸಿರುವ ಕಾಡುಗಲ್ಲುಗಳು ಸಾಕಷ್ಟು ದೊಡ್ಡವಿವೆ. ವೆಂಕಟೇಶ್ವರ ಬಾವಿಯ ಪಶ್ಚಿಮದಲ್ಲಿ ಅಳಿದುಳಿದ ಕೋಟೆಯ ಗೋಡೆಯ ಅವಶೇಷಗಳನ್ನು ಪತ್ತೆ ಹಚ್ಚಬಹುದು. ವಿದ್ವಾಂಸರ ಅಭಿಪ್ರಾಯದಂತೆ ಈ ಕೋಟೆಯು ಮೊದಲು ಮಣ್ಣಿನಿಂದ ಕಟ್ಟಲ್ಪಟ್ಟಿದ್ದು ಅನಂತರ ಕಟ್ಟಡಕ್ಕೆ ಕಲ್ಲನ್ನು ಬಳಸಿಕೊಳ್ಳಲಾಗಿದೆ. ಅದರ ಬಗೆಗೆ ಇರುವ ಒಂದು ಶಾಸನವು ಹೀಗಿದೆ :

'' ಅಲ್ಲಾಹ ಮಹಮ್ಮದ ಅಲಿ ಬರ್ ಹಕೆ
ದರ್ ಜಮಾನೆ ಷಾಹ ಇಬ್ರಾಹಿಮ್ ಸಾನಿ ಷುದ್ ಹಿಸಾರ
ಬಾದ ಪಾಯಿಂದಾ ವ ಬಾಕಿ ತಾ ಸಲ್ತನತಾರಾ ಕರಾರ
ತಹತೆ ಹಾಕಿಮೆ ಹಫ್ತ ಕಿಷ್ವರ್ ವ ಬಂದಾ ಸರ್ ಕುಷಾನತ್ ವರಾ (?)
ಹಾಸಿದಾನೆ ಗೋರೆ ದರ್ ಕಹರೆನಾರ್ ಕರ್ ದುಷ್ಮನಾನತ್
ಖಾದಿಮ್ ಷಾಹ ಜಮಾ ಸುಲ್ತಾನ ಅಲಿ ಬಸ ನಾಮದಾರ
ಮಿ ನಮೂದಿಷ್ ತರಹ ಬಸತಹಷೆ ಬಾ ಬಜಲಿ ಕಾಮಗಾರ
ಬುವದ್ ಮೋಸಮೆ ಹಂಗಾಮೆ ರಜೀ ವ ಪೆಸ್ಲೆಬಹಾರ್
ಬಾದೆ ಹಿಜರಿ ಅಜ್ಮೆಅಜಾ ದರ್ ಷಹರಿ ಬಿಲ್ಲಜೆ ಷುದ್ ಷಮಾರ
..........ಅಜಿಜ್ ದರಹಾ.............ಕರ್ದ
ಷುದ್ ಮುರತ್ತಬ್ ಬಾಬೆ ಅಲೀ...........ಜಹಾನಿಷಕಾರ್''

ಕನ್ನಡ ಭಾಷಾಂತರ

'' ಅಲ್ಲಾ ಪ್ರವಾದಿ ಮಹಮ್ಮದ್ ಅಲಿ ಸತ್ಯರು
(೧) ಅರಸು ೨ನೆಯ ಇಬ್ರಾಹಿಂ ಕಾಲದಲ್ಲಿ ಕೋಟೆಯ ಆವರಣ ಗೋಡೆ
( ) ಕಟ್ಟಲ್ಪಟ್ಟಿತು. ಈ ರಾಜ್ಯ ಮುಂದುವರಿದಂತೆ ಇದು ಉಳಿಯಲಿ ಮತ್ತು ಬಾಳಲಿ

(೨) ಏಳು ನಾಡಿನ ಅರಸನಾದ (ಈತನ) ಆದೇಶದಂತೆ ನಿನ್ನ ವೈರಿಗಳಿಗೆ ಅಗ್ನಿ ಕುಂಡವು ವಿಶ್ರಾಂತಿ ಧಾಮವಾಗಲಿ.

(೩) ಜಗದೊಡೆಯನ ಸೇವಕ ಕೀರ್ತಿವಂತ ಸುಲ್ತಾನ ಅಲಿ ನಾಮಧಾರ ಇದನ್ನು (ಪ್ರಕಾರ) ಆವರಣದ ಗೋಡೆಯನ್ನು ಅರ್ಹ ಸಹವರ್ತಿಗಳೊಂದಿಗೆ ಭೂ ಮಟ್ಟದವರೆಗೂ ಕಟ್ಟಿಸಿದನು.

(೪) ವಸಂತ ಸಮಯ ಮತ್ತು ಋತು ಅರಳುವ ಕಾಲ ಪವಿತ್ರ ಧರ್ಮಯುದ್ಧ ಸುರುವಿನ ನಂತರ ಇದು ಜುಲ್ ಹಜ್ ತಿಂಗಳಿಗೆ ಹೊಂದಿಕೊಳ್ಳುತ್ತದೆ.

(೫) ವಿನಮ್ರ ಅಲಿಯ ದ್ವಾರ ಕಟ್ಟಲ್ಪಟ್ಟಿತು.

## ಮಣ್ಣಿನ ಕೋಟೆ

ಗಚ್ಚಿನ ಕೋಟೆಯ ಉತ್ತರ ಭಾಗದಿಂದ ಸ್ವಲ್ಪ ಮುಂದಕ್ಕೆ ನಡೆದರೆ ಮಣ್ಣಿನ ಗೋಡೆ ನೇರವಾಗಿ ಉತ್ತರಕ್ಕೆ ಹರಿದಿರುವುದು ಕಂಡುಬರುತ್ತದೆ. ಅನಂತರದಲ್ಲಿ ಇದು ಪೂರ್ವಕ್ಕೆ ತಿರುಗಿ ಈಗಿನ ಖಬರಸ್ಥಾನದ ದಕ್ಷಿಣದ ಅಂಚಿನಗುಂಟ ನೇರವಾಗಿ ಸಾಗುತ್ತದೆ. ನಂತರ ಕೋಟೆಯ ಗೋಡೆಗಳು ದಕ್ಷಿಣಕ್ಕೆ ತಿರುಗುತ್ತವೆ. ಪ್ರಕೃತದಲ್ಲಿ ಈ ಮಣ್ಣಿನ ಕೋಟೆ ತನ್ನ ಸ್ವರೂಪವನ್ನು ಸಂಪೂರ್ಣವಾಗಿ ಕಳೆದುಕೊಂಡಿದೆ. ಈ ಕೋಟೆಯ ಗೋಡೆಯು ಹೆಚ್ಚು ನೇರವಾಗಿದ್ದು ಮಧ್ಯದಲ್ಲಿ ಕಲ್ಲಿನ ಕಂಬಗಳನ್ನು ಜೋಡಿಸಲಾಗಿದೆ. ಈಗ ಇವು ಸುಸ್ಥಿತಿಯಲ್ಲಿಲ್ಲ. ಈ ಭಾಗವನ್ನು ನಾಗರಿಕರು ನೆಲಸಮಮಾಡಿಕೊಂಡು ಅದರ ಕಲ್ಲು ಮಣ್ಣುಗಳನ್ನೇ ಬಳಸಿ ಮನೆ ಕಟ್ಟಿಕೊಂಡಿರುವರು. ಈ ಮಣ್ಣಿನ ಕೋಟೆಯ ಮುಂಭಾಗದ ಕರುಗಲ್ಲಿನಿಂದ ದಕ್ಷಿಣಕ್ಕೆ ಹರಿದು ಮಿಟ್ಟಕೇರಿಯನ್ನು ಅರ್ಧಚಂದ್ರಾಕಾರವಾಗಿ ಬಳಸಿಕೊಂಡಿದೆ. ನಂತರ ಪಶ್ಚಿಮಕ್ಕೆ ಓರೆಯಾಗಿ ತಿರುಗಿ ಮುಂದೆ ಅದು ಗಚ್ಚಿನ ಕೋಟೆಗೆ ಸೇರಿಕೊಳ್ಳುತ್ತದೆ. ಪ್ರಕೃತ ಈ ಭಾಗ ಕೂಡ ನಾಗರಿಕರಿಂದ ಹಾಳಾಗಿದೆ. ಮತ್ತು ಅಲ್ಲಿ ಮನೆಗಳನ್ನು ಕಟ್ಟಿಕೊಳ್ಳಲಾಗಿದೆ. ಈ ಕೋಟೆಯನ್ನು ಕಲ್ಲು ಮತ್ತು ಮಣ್ಣನ್ನು ಬಳಸಿ ಕಟ್ಟಿರುವುದರಿಂದ ಇದನ್ನು ಮಣ್ಣಿನ ಕೋಟೆ ಎಂದು ಕರೆಯುತ್ತಾರೆ. ಆ ಕೋಟೆಗೆ ಬಳಸಿದ ಕಲ್ಲುಗಳು ಈಗ ಅಲ್ಲಿ ಉಳಿದಿಲ್ಲ. ಆದರೆ ಮಣ್ಣಿನ ಕುಪ್ಪೆ ಮಾತ್ರ ಸಿಗುತ್ತದೆ.

ಈ ಮಣ್ಣಿನ ಕೋಟೆಯ ತರುವಾಯ ಗಚ್ಚಿನ ಕೋಟೆಯನ್ನು ಆಳರಸರು ಕಟ್ಟಿಸಿರಬೇಕು. ಈ ಕೋಟೆಯ ಅವಶೇಷವು ಮಿಟ್ಟಿಕೇರಿ ಪೂರ್ವಕ್ಕೆ ನೋಡಲು ಇಂದಿಗೂ ಸಿಗುತ್ತದೆ.

## ಗಚ್ಚಿನ ಕೋಟೆ

ಈ ಕೋಟೆಯು ಭೂಮಟ್ಟದಿಂದ ೧೨ ಮೀಟರ್ ಎತ್ತರದಲ್ಲಿದೆ. ಕೊಪ್ಪಳವು ಮೊದಲು ಕಲ್ಲು ಮತ್ತು ಮಣ್ಣುಗಳನ್ನು ಬಳಸಿ ಕೋಟೆಯನ್ನು ಕಟ್ಟಿಸಿಕೊಂಡಿತ್ತು. ಆದರೆ ಅದರ ಮುಂದುವರಿದ ಹಂತವಾಗಿ ಗಚ್ಚಿನ ಕೋಟೆಯನ್ನು ಹೆಚ್ಚು ಭದ್ರವೆಂದು ಕಟ್ಟಲಾಯಿತು. ಈಗ ಈ ಕೋಟೆಯು ತನ್ನ ಮೂಲ ಸ್ವರೂಪವನ್ನು ಕಳೆದುಕೊಂಡಿದ್ದರೂ ದುಸ್ಥಿತಿಯಲ್ಲಾದರೂ ನೋಡಲು ಸಿಗುತ್ತದೆ. ಗುಂಡುಕಲ್ಲು ಮಣ್ಣಿನಿಂದ ಕೂಡಿದ ಇಳಿಜಾರು ಪ್ರದೇಶದ ಇದನ್ನು ಮೇಲೇರಲು ಸುಲಭವಾದುದನ್ನು ಅರಿತು ರಾಯಚೂರು ಜಿಲ್ಲೆಯ ಜಿಲ್ಲಾಧಿಕಾರಿಗಳು ಈ ಭಾಗವನ್ನು ರಿಪೇರಿ ಮಾಡಿಸಿಟ್ಟಿರುವರು. ಇದರ ಉಳಿದ ಭಾಗವೆಲ್ಲಾ ಗಚ್ಚು ಮತ್ತು ಚಪ್ಪಟೆ ಕಲ್ಲುಗಳಿಂದ ಕಟ್ಟಲಾಗಿದೆ. ಮುನ್ನಡೆದರೆ ಈ ಗಚ್ಚಿನ ಕೋಟೆಯ ಕೆಲ ಅಂತರದಲ್ಲಿ ಹಾಲುಕೋಟೆ ಬಾವಿಯು ಸಿಗುತ್ತದೆ. ಈ ಗಚ್ಚಿನ ಕೋಟೆ ಈಗ ಕುಸಿದಿರುವುದರಿಂದ ಇಲ್ಲಿಯ ಕಲ್ಲುಗಳು ಅಡ್ಡಾದಿಡ್ಡಿಯಾಗಿ ಬಿದ್ದಿವೆ.

ಹಾಲುಕೋಟೆ ಬಾವಿಯಿಂದ ಕೊಂಚ ಬಲಕ್ಕೆ ತಿರುಗಿದರೆ ಚಂದ್ರ ಈಜುಕೊಳ ಸಿಗುತ್ತದೆ. ಆ ಈಜುಕೊಳದ ನೈರುತ್ಯದ ಭಾಗಕ್ಕೆ ಐತಿಹಾಸಿಕ ಕೋಟೆಯು ನಮಗೆ ದೊರೆಯುತ್ತದೆ. ಗಚ್ಚಿನ ಕೋಟೆಯ ಹೊರವಲಯದಲ್ಲಿ ನೀರ್ಗುಂಡಿಗಳನ್ನು ನಿರ್ಮಿಸಲಾಗಿದೆ. ಕೋಟೆಯ ಮೇಲ್ಭಾಗದ ನೀರು ಈ ನೀರ್ಗುಂಡಿಗೆ ಬೀಳುವಂತೆ ಕಲ್ಲುಗಳನ್ನು ಜೋಡಿಸಿರುವರು. ಹೀಗೆ ನಿರ್ಮಿಸಲಾಗಿರುವ ಕಲ್ಲು ಜೋಡಣೆಯು ಕೋಟೆಯನ್ನು ಹೊಂದಿಕೊಂಡು ಉತ್ತರದ ದಿಡ್ಡಿ ಬಾಗಿಲನ್ನು ತಲುಪುತ್ತದೆ. ದಿಡ್ಡಿ ಬಾಗಿಲಿಗೆ ಬಲವಾದ ಲಾಳವಿಂಡಿಗೆಯ ಪದ್ಧತಿಯನ್ನು ಅಳವಡಿಸಲಾಗಿದೆ. ಯುದ್ಧ ಸಮಯದಲ್ಲಿ ಈ ಬಾಗಿಲನ್ನು ಭದ್ರವಾಗಿ ಮುಚ್ಚಿರುತ್ತಿದ್ದರು. ಉಳಿದ ಸಂದರ್ಭದಲ್ಲಿ ಜನಸಂಚಾರಕ್ಕೆ ಈ ಬಾಗಿಲನ್ನು

ತೆರೆದಿಡುತ್ತಿದ್ದರು. ಗೌರಿ ಅಂಗಳದ ಮೋತಿಕೆರೆಗೂ ಮತ್ತು ಇತರ ಕೊಪ್ಪಳದ ಭಾಗಗಳಿಗೂ ನಡೆದು ಹೋಗಲು ಅತಿ ಸಮೀಪದ ದಾರಿಯೊಂದನ್ನು ನಿರ್ಮಿಸಿದ್ದಾರೆ. ಇತ್ತೀಚೆಗೆ ಸರ್ಕಾರದವರು ಈ ದಿಡ್ಡಿ ಬಾಗಿಲಿನ ಪಶ್ಚಿಮದ ಕೋಟೆಯನ್ನೊಡೆದು ವಾಹನ ಸಂಚಾರಕ್ಕೆ ಅನುಕೂಲವಾಗುವಂತೆ ರಸ್ತೆಯನ್ನು ನಿರ್ಮಿಸಿಕೊಂಡಿದ್ದಾರೆ.

ಕೋಟೆಯ ಗೋಡೆಯಲ್ಲಿರುವ ಮಾಡಿನಲ್ಲಿ ಕಾವಲುಗಾರರು ನಿಲ್ಲುತ್ತಿದ್ದರು. ಈ ಕಾವಲುಗಾರರು ದಿಡ್ಡಿಬಾಗಿಲನ್ನು ಕಾಯುತ್ತಿದ್ದರು. ಕೋಟೆಯ ಹೊರಭಾಗವನ್ನು ವೀಕ್ಷಿಸಲು ಕೋಟೆಯ ಸುತ್ತಲೂ ಅಲ್ಲಲ್ಲಿ ವೀಕ್ಷಣಾಲಯಗಳನ್ನು ನಿರ್ಮಿಸಲಾಗಿದೆ. ಶತ್ರುಗಳ ಪಥಸಂಚಲನದಿಂದ ಎದ್ದ ಧೂಳನ್ನು ದೂರದಿಂದಲೇ ವೀಕ್ಷಿಸಬಹುದಾಗಿತ್ತು. ರಾತ್ರಿಯಲ್ಲಿ ಪಂಜಿನ ಬೆಳಕಿನಲ್ಲಿ ಚಲಿಸುವ ವೈರಿಯ ಚಲನವಲನವನ್ನು ಅಲ್ಲಿಂದ ವೀಕ್ಷಿಸಬಹುದಾಗಿತ್ತು. ಪ್ರತಿಯೊಂದು ಕೋಟೆಯಲ್ಲಿಯೂ ಕಡ್ಡಾಯವಾಗಿ ಗುಪ್ತದ್ವಾರಗಳಿರುವಂತೆ ಇಲ್ಲಿಯೂ ಗುಪ್ತ ದ್ವಾರಗಳನ್ನು ನಿರ್ಮಿಸಲಾಗಿದೆ. ಜೋಗಿ ಬಂಡೆಯ ಮಧ್ಯದಲ್ಲಿರುವ ಗುಪ್ತದ್ವಾರ ಮೊದಲು ದಕ್ಷಿಣಕ್ಕೆ ತಿರುಗಿ ಪಶ್ಚಿಮದಿಂದ ಹೊರಬರಬೇಕಾಗಿದೆ. ಅದರ ಮುಂದಿನ ಭಾಗ ಮಣ್ಣಿನಲ್ಲಿ ಹೂತುಹೋಗಿರುವುದರಿಂದ ಮುಂದೆ ಯಾವ ದಿಕ್ಕಿಗೆ ದಾರಿ ಮುಂದುವರಿಯುತ್ತಿತ್ತೆಂಬುದು ತಿಳಿಯದು. ಆದರೆ ಮತ್ತೊಂದು ಗುಪ್ತದ್ವಾರವು ಕೋಟೆಯು ವೈರಿಯ ಕೈವಶವಾಗುವುದು ಖಚಿತವೆನ್ನಿಸಿದಾಗ ತುರ್ತುಪರಿಸ್ಥಿತಿಯಲ್ಲಿ ಬಳಕೆಯಾಗುತ್ತಿತ್ತು. ಕೋಟೆಯೊಳಗಿನವರು ಅರಸರನ್ನು, ಅರಸಿಯರನ್ನು ಈ ಗುಪ್ತಮಾರ್ಗದಿಂದ ಸುರಕ್ಷಿತ ಸ್ಥಳಕ್ಕೆ ತರುವುದಕ್ಕಾಗಿ ಈ ಗುಪ್ತ ದ್ವಾರ ನಿರ್ಮಾಣಗೊಂಡಿದೆ.

ಜೋಗಿಬಂಡೆಯಿಂದ ದಕ್ಷಿಣಕ್ಕೆ ಸಾಗಿದರೆ ಗಚ್ಚಿನ ಕೋಟೆಯು ರಾಜಬೀದಿಯನ್ನು ತಲುಪುತ್ತದೆ. ಇದರ ಎರಡೂ ಬದಿಗಳಲ್ಲೂ ಸಮಾನ ಎತ್ತರದ, ಸಮಾನ ಅಂತರದಲ್ಲಿ ಎರಡು ಭಯಂಕರ ಕೋಟೆಯ ಗೋಡೆಗಳನ್ನು ಕಾಣಬಹುದು. ಈ ಕೋಟೆಯ ಮುಂಭಾಗವು ಭಟರ ಮಹಾದ್ವಾರವೆಂದು ಗುರುತಿಸುತ್ತಾರೆ. ಇಲ್ಲಿ ಭಟರು ಕೋಟೆಯನ್ನು ಎಚ್ಚೆತ್ತು ಕಾದು ಗುಪ್ತವಾಗಿ

ಸೈನ್ಯವನ್ನು ಎಚ್ಚರಿಸುತ್ತಿದ್ದರು ಎಂಬುದು ತಿಳಿದುಬರುತ್ತದೆ. ಇಲ್ಲಿ ಒಂದು ಮಹಮ್ಮದ್‌ನ ಬುರುಜೆ ಶಾಸನವು ನೆಲೆಗೊಂಡಿದೆ. ಆ ಶಾಸನದ ಪಾಠ ಮತ್ತು ಅದರ ಕನ್ನಡ ಭಾಷಾಂತರ ಈ ರೀತಿಯಿದೆ:

ಜೆ ಬುರ್‌ಜೇ ಮುಹಮ್ಮದ್ ಬ ಮರ್ದುಮ್ ಪನಾಹ
ಖುದಾ ಜೆ ಅಫತ್ ತೋಪಗಾರದ್ ನಿಗಾಹ
ಖಿರ್ದ್ ಗುಪ್ತ ಜೆ ತಾರೀಖಿಕಮ್ ಸೌಜದಾ
ಜೆ ಮಜ್ಬೂತ ಕಾರೀಸ್ತ ಫಜಲೆ ಇಲಾಹ
ಷುದ್ ಮುರತ್ತಬ್ ಕಾಲ್ ಕೊಪ್ಪಲ್

ಕನ್ನಡ ಭಾಷಾಂತರ

ಅಲ್ಲಾ,
ಜಗದ್ ರಕ್ಷಕ, ಮುಹಮ್ಮದ್ ಬುರುಜನನ್ನು ಅಲ್ಲಾಹನು
ತೋಫಿನಿಂದ ಸುರಿವ ಗುಂಡುಗಳ ಭೀಕರವಾದ
ಅಪ್ಪಳಿಕೆಯಿಂದ ರಕ್ಷಿಸಲಿ

ಈ ಕೊತ್ತಲದ ಸನಿಹದಲ್ಲಿಯ ನೀರ್ಗುಂಡಿಯ ಮೂಲಕ ಕೋಟೆಯ ಒಳಭಾಗದ ನೀರು ಹರಿದು ಅಂಗಳಕ್ಕೆ ಬೀಳುತ್ತದೆ. ಈ ಕೋಟೆಯ ದಕ್ಷಿಣಕ್ಕೆ ಸ್ವಲ್ಪ ಅಂತರದಲ್ಲಿ ಪೂರ್ವದ ದಿಡ್ಡಿ ಬಾಗಿಲಿದೆ. ಇದು ಎರಡುಬಾರಿ ಕಟ್ಟಲ್ಪಟ್ಟಿದೆ ಎಂದು ಹೇಳಲಾಗುತ್ತಿದೆ. ಈ ಭಾಗವನ್ನು ಸ್ಥಳೀಯರು ಕೊರವೆಕೋಟೆ ಎಂದು ಕರೆದಿದ್ದಾರೆ. ಗಚ್ಚಿನ ಕೋಟೆಯ ಮೇಲಿನ ತ್ರಿಕೋನಾಕೃತಿಯ ಚಿಕ್ಕ ಚಿಕ್ಕ ರಂಧ್ರಗಳಿವೆ ಮತ್ತು ಇವುಗಳು ಕೋಟೆಯ ಸೌಂದರ್ಯವನ್ನು ಹೆಚ್ಚಿಸುತ್ತಿವೆ. ಕೋಟೆಯ ಒಳಗಿನವರು ಇವುಗಳ ಆಸರೆಯಲ್ಲಿ ನಿಂತು ವೈರಿಯ ಚಲನವಲನಗಳನ್ನು ಗುರುತಿಸಿ ಕ್ರಮ ತೆಗೆದುಕೊಳ್ಳಬಹುದಾಗಿತ್ತು. ಇದನ್ನು ಲೆಕ್ಕಿಸದೆ ವೈರಿಗಳು ಮುನ್ನುಗ್ಗಲು ಬಂದರೆ ಅವರ ಮೇಲೆ ಕಾರ್ಯಾಚರಣೆ ನಡೆಸಲು ಇದು ಸಹಾಯ ಮಾಡುತ್ತಿತ್ತು. ಈ ಕಾರಣದಿಂದ ಶತ್ರುಗಳು ಅದನ್ನು ದಾಟುವ ಸಾಹಸಕ್ಕೆ ಇಳಿಯುತ್ತಿರಲಿಲ್ಲ. ಗಚ್ಚಿನ ಕೋಟೆಯನ್ನು ಸಮಗ್ರವಾಗಿ ಅವಲೋಕಿಸಿದಾಗ ಈ ಕೋಟೆಯ ದಕ್ಷಿಣ ಭಾಗದಲ್ಲಿರುವ ಈಗಿನ

## ಕೋಟೆಗೆ ಕುಡಿಯುವ ನೀರಿನ ಸರಬರಾಜು

ಗಿರಿದುರ್ಗದಲ್ಲಿ ಕುಡಿಯುವ ನೀರಿಗೆ ಅಂದಿನ ಅರಸರು, ಮಾಂಡಲಿಕರು ಸಾಕಷ್ಟು ಗಮನಹರಿಸಿರುವುದು ಕಂಡುಬರುತ್ತದೆ. ಕೋಟೆಯನ್ನು ಒಳಗೊಂಡ ಬೆಟ್ಟಗುಡ್ಡಗಳಲ್ಲಿ ಚಿಕ್ಕ ದೊಡ್ಡ ಬಂಡೆಯ ಸಂದುಗಳಿಗೆ ಗೋಡೆಗಳನ್ನು ಅಡ್ಡಗಟ್ಟಿ ಮಳೆಯ ನೀರನ್ನು ಸಂಗ್ರಹಿಸಲಾಗುತ್ತಿತ್ತು. ನೀರು ಶಾಶ್ವತವಾಗಿರಲೆಂದು ಕೋಟೆಯ ಹೊರಭಾಗದಲ್ಲಿ ಕೆರೆಗಳನ್ನು ಕಟ್ಟಿಸಿದ್ದರು. ಈ ಕೆರೆಗಳು ಅಂತರ್ಜಲದ ಮಟ್ಟವನ್ನು ಕಾಪಾಡಿಕೊಳ್ಳುತ್ತಿದ್ದವು. ಗಿರಿಯ ಮೇಲ್ಭಾಗದ ಕೋಟೆಯಲ್ಲಿ ಅರಮನೆಗೆ ಬೇಕಾಗುವಷ್ಟು ನೀರನ್ನು ಬಂಡೆಯ ಸಂದುಗಳಿಗೆ ಗೋಡೆಯನ್ನು ಅಡ್ಡಕಟ್ಟಿ ಅರಮನೆಯ ಆವರಣದಲ್ಲೇ ನೀರನ್ನು ಸಂಗ್ರಹಿಸುತ್ತಿದ್ದರು. ಈ ಸಂಗ್ರಹತಾಣಗಳು ಹೊಂಡಗಳಾಗಿ ಪರಿವರ್ತನೆಯಾಗಿವೆ. ಈ ಹೊಂಡಗಳಲ್ಲಿ ನಿಂತ ನೀರು ಅವರಿಗೆ ವರ್ಷವಿಡೀ ಬಳಸಲು ಸಾಕಾಗುತ್ತಿತ್ತು. ಈ ಹೊಂಡಗಳಲ್ಲಿ ಒಂದರ ರಚನೆ ಉಳಿದವುಗಳಿಗಿಂತ ಭಿನ್ನವಾಗಿದೆ. ಇದನ್ನು ರಾಜರಾಣಿಯರ ಜಲಕ್ರೀಡೆಗೆ ನಿರ್ಮಿಸಿರಬಹುದೆಂದು ಶಂಕಿಸಬಹುದಾಗಿದೆ. ಈ ಹೊಂಡಗಳಲ್ಲಿ ಈಗ ಹೂಳು ತುಂಬಿದೆ. ಸಂಗ್ರಹಕ್ಕಿಂತ ಹೆಚ್ಚಿನ ನೀರು ಮಳೆಯಿಂದ ಸಿಕ್ಕಾಗಲದನ್ನು ಹೊರಗೆ ಹರಿಬಿಡಲು ಕೋಟೆಯ ಗೋಡೆಯ ಅಲ್ಲಲ್ಲಿ ಹರಿಗಳನ್ನು ನಿರ್ಮಾಣಮಾಡಿದ್ದಾರೆ. ದುರ್ಗಾದೇವಿಯ ಗುಡಿ, ಆಸ್ಥಾನ, ಉನ್ನತಾಧಿಕಾರಿಗಳಿರುವ ವಿಶ್ರಾಂತಿ ಗೃಹಗಳು ಇವು ಹೆಚ್ಚು ಜನನಿಬಿಡವಾಗಿರುತ್ತಿದ್ದವು. ಈ ಕಾರಣಕ್ಕಾಗಿ ಇಲ್ಲಿ ಕುಡಿಯಲು ಹೊಂಡಗಳನ್ನು ನಿರ್ಮಿಸಿದ್ದಾರೆ . ಈ ಹೊಂಡಗಳಿಗೆ ಮೆಟ್ಟಿಲುಗಳಿದ್ದು ಕೋಟೆಯ ನಾಲ್ಕನೆಯ ಬಾಗಿಲಿನ ಎದುರಿಗೆ ವಿಶಾಲವಾದ ಮತ್ತು ಆಳವಾದ ಹೊಂಡದ ನಿರ್ಮಾಣವಿದೆ. ಅದರ ಪೂರ್ವದ ದಡವು ಕೋಟೆಯ ಗೋಡೆಯವರೆಗೂ ಹಬ್ಬಿದೆ. ಈ ಹೊಂಡದಲ್ಲಿ ಇಳಿಯಲು ನೈರುತ್ಯದಿಂದ ಸರಳ ಮತ್ತು ಅಗಲವಾದ ಮೆಟ್ಟಿಲುಗಳಿವೆ. ಗ್ರಾಮಮಂಟಪದ ಸಮೀಪದಲ್ಲಿ ಪೂರ್ವಕ್ಕೆ ಓರೆಯಾದ ಗುಡ್ಡಕ್ಕನುಗುಣವಾಗಿ ಹೊಂಡವನ್ನು ನಿರ್ಮಿಸಲಾಗಿದೆ. ಗಚ್ಚಿನ ಕೋಟೆಯ ಆಯಕಟ್ಟಿನ ಸ್ಥಳವಾದ ಜೋಗಿಬಂಡೆಯಲ್ಲಿ ಸೈನಿಕ

ಅಧಿಕಾರಿಗಳಿಗೆ ವೀಕ್ಷಣಾಧಿಕಾರಿಗಳಿಗೆ ಮತ್ತು ಕಾವಲುಗಾರರಿಗೆ ಕುಡಿಯಲು ನೀರು ಸಂಗ್ರಹಿಸುವ ಹೊಂಡಗಳಿವೆ.

ಕೋಟೆಯೊಳಗಿನ ಜನಸಾಮಾನ್ಯರಿಗೆ ನೀರು ಪೂರೈಸುವುದು ರಾಜನ ಕರ್ತವ್ಯವೆಂದೇ ಭಾವಿಸಲಾಗಿತ್ತು. ಈ ಹಿನ್ನೆಲೆಯಲ್ಲಿ ರಾಜನು ಗಿರಿದುರ್ಗದ ಮಹಾದ್ವಾರದ ಈಶಾನ್ಯಕ್ಕೆ ಆಳವಾದ ಮತ್ತು ವಿಶಾಲವಾದ ಬಾವಿಯನ್ನು ತೋಡಿಸಿದ್ದಾನೆ. ಈ ಬಾವಿಯಲ್ಲಿ ನೀರು ಯಾವುದೇ ಕಾರಣಕ್ಕೂ ಹಿಂಗುತ್ತಿರಲಿಲ್ಲವೆಂದೂ ಆ ನೀರು ಬಿಳಿ ಬಣ್ಣದ್ದಾಗಿತ್ತು ಎಂದು ಪ್ರತೀತಿ ಇದೆ. ಆದುದರಿಂದ ಇದನ್ನು ಹಾಲುಬಾವಿ ಎಂದು ಕರೆಯುತ್ತಾರೆ. ಅದರ ಸಮೀಪದ ಕೋಟೆಯನ್ನು ಹಾಲುಕೋಟೆ ಎಂದು ಕರೆಯುತ್ತಾರೆ. ಈ ಬಾವಿಯಲ್ಲಿ ಇಳಿಯಲು ಮೆಟ್ಟಿಲುಗಳಿವೆ. ಹೆಚ್ಚು ಮಳೆಬಂದು ಬಾವಿ ತುಂಬಿದರೆ ಕೋಟೆಯಿಂದ ನೀರು ಹೊರಗೆ ಹೋಗಲು ಮೋರಿಗಳನ್ನು ನಿರ್ಮಾಣಮಾಡಲಾಗಿದೆ. ಹೊರಾಂಗಣ ಕೋಟೆಯಲ್ಲೂ ಮಳೆಯ ಹೆಚ್ಚಿನ ನೀರು ಕಂದಕಕ್ಕೆ ಬೀಳುವಂತೆ ಗಚ್ಚಿನ ಕೋಟೆಯ ಉತ್ತರದ ಮತ್ತು ಪೂರ್ವಭಾಗಗಳಲ್ಲಿ ಹರಿಗಳನ್ನು ನಿರ್ಮಾಣಮಾಡಲಾಗಿದೆ. ಹುಲಿಕೆರೆಗೆ ಹೋಗುವ ಮಾರ್ಗದ ಎಡಬದಿಯಲ್ಲಿ ಸಾಕಷ್ಟು ಎತ್ತರದ ಕೋಟೆಯ ಗೋಡೆಯಿಂದ ನೀರು ಕಂದಕಕ್ಕೆ ಬೀಳುವಂತೆ ಮಾಡಿರುವುದನ್ನು ಕಾಣಬಹುದು. ಇದರ ಬಗೆಗೆ ಶಾಸನವೊಂದರ ಉಲ್ಲೇಖವಿದೆ.

ವ ಜಅಲನಾ ಮಿನಲ್ ಮಾಯಿ ಕುಲ್ಲಿಷ್ಯಯಿನ್ ಹೈಯಿ
ಬರ್ ಆಮದ್ ಜೆ ತಾಲಾಬೆ ಕುಪ್ಪಲ್ ನಹರ್
ದರ್ ಆಮದ್ ಬಜಾಹಿ ಕ ಅಂದರ್ ಷಹರ್
ತಹರೀರ ಫಿತ್ತುರೀಖ ಬೀಸ್ತದೊಎಮ್ ಮಾಹೆ ರಜ್ಜಬುಲ್ ಮುರಜ್ಜಬ್''
(ಸನ್ ೧೧೯೩ ಹಿಜರಿ)
' ಜೆ ಉಸ್ಮಾನ ಷುದ್ ಮುರತ್ತಬ್ ಕಾರ್ ಈಂನಹರ್'

ಕನ್ನಡ ಭಾಷಾಂತರ

ಪ್ರತಿಯೊಂದು ಸಜೀವಿಗಳಿಗೆ ನೀರನ್ನಿಡಲಾಗಿದೆ
ಕೊಪ್ಪಳದ ಕೆರೆಯಿಂದ ಹೊರಟ ಕಾಲುವೆ ನಗರದ ಬಾವಿಗೆ
ನೀರನ್ನು ಸುರಿಸಿದೆ.

(೨೨ ರಜಬ, ೧೧೯೩ ಹಿಜರಿಯಲ್ಲಿ ಬರೆಯಲ್ಪಟ್ಟಿದೆ.)

ಈ ಕೊಪ್ಪಳದ ಗಿರಿದುರ್ಗವು ಮೂರು ನಾಲ್ಕು ಹಂತಗಳಲ್ಲಿ ನಿರ್ಮಾಣವಾಗಿದೆ. ಇದನ್ನು ಕಟ್ಟಿಸಿದವರು ಯಾರು ಎಂಬುದಕ್ಕೆ ಎಲ್ಲಿಯೂ ಸ್ಪಷ್ಟವಾದ ಉಲ್ಲೇಖಗಳಿಲ್ಲ. ಕೋಟೆಯನ್ನು ಕಟ್ಟಿಸಿಕೊಂಡ ದುರ್ಗವು ಎತ್ತರವಾಗಿದ್ದು ಕೊಂಚ ದುಂಡಾಕಾರವಾಗಿಯೂ ಮತ್ತು ಕಡಿದಾಗಿಯೂ ಇದೆ. ಇದರ ದಕ್ಷಿಣದ ಭಾಗ ಸುಮಾರು ೧೫೪ ಮೀಟರ್ ಪಶ್ಚಿಮದ ಭಾಗ ಸುಮಾರು ೧೭೦ ಮೀಟರ್ ಪೂರ್ವದ ಭಾಗ ಸುವಮಾರು ೧೩೦ ಮೀಟರ್ ಮತ್ತು ಉತ್ತರದ ಭಾಗವು ಆಂಶಿಕವಾಗಿ ೫೦ ಮೀಟರ್‌ನಷ್ಟಿದೆ. ಕೆಲವು ಕಡೆ ೧೧೦ ಮೀಟರ್ ಎತ್ತರದವರೆಗೂ ಕಟ್ಟಲ್ಪಟ್ಟಿದೆ. ಭೂಮಿಯಿಂದ ೩೩ ಮೆಟ್ಟಿಲುಗಳ ಮೇಲಕ್ಕೆ ಆಯತಾಕಾರದ ಕೋಟೆಯ ಮಹಾದ್ವಾರವಿದೆ. ಇದಕ್ಕೆ ಬಳಸಿದ ಕಲ್ಲಿನ ಕಂಬಗಳು, ತೊಲೆಗಳು, ಬೋದಿಗೆಗಳು, ಸಮಮಟ್ಟದ ಆಯತಾಕಾರವನ್ನು ಹೊಂದಿವೆ. ಮಹಾದ್ವಾರದ ಪ್ರವೇಶದ ಎಡಬಲದ ಎತ್ತರದ ಕಟ್ಟೆಗಳಿಗೆ ಸಮಮಟ್ಟದ ಉದ್ದನೆಯ ಮತ್ತು ದಪ್ಪವಾದ ಕಲ್ಲುಗಳನ್ನು ಬಳಸಿಕೊಂಡಿದ್ದಾರೆ. ಈ ಕಲ್ಲುಗಳಲ್ಲಿ ಆನೆಗಳ ಉಬ್ಬು ಚಿತ್ರಗಳಿವೆ. ಈ ಕಟ್ಟೆಗಳನ್ನು ಏರಲು ಪಶ್ಚಿಮ ತುದಿಯಲ್ಲಿ ಮೆಟ್ಟಿಲುಗಳಿವೆ. ಇದರ ಒಳಭಾಗದಲ್ಲಿ ಆಯತಾಕಾರದ ಉದ್ದನೆಯ ಒಂದು ಕಲ್ಲಿಗೆ ಚೌಕ ಮತ್ತು ಅದರೊಳಗೆ ವರ್ತುಳಗಳ ಮಧ್ಯದಲ್ಲಿ ಹೂಗಳ ಚಿತ್ರವಿದೆ. ಈ ಚೌಕದ ಪ್ರತಿ ಮೂಲೆಗೆ ಸರ್ಪದ ಚಿತ್ರ ಹೀಗೆ ಹಲವು ರೇಖಾ ಚಿತ್ರಗಳಿವೆ. ಇದನ್ನು ಸ್ಥಳೀಯರು ಸುಲ್ತಾನ್ ದರ್‌ವಾಜ ಎಂದು ಮಹಾದ್ವಾರವನ್ನು ಕರೆಯುತ್ತಾರೆ. ಇಡೀ ಕೊಪ್ಪಳದ ಕೋಟೆಯಲ್ಲಿ ಇದೊಂದೇ ಸುಸ್ಥಿರವಾದ ಕಟ್ಟಡ. ಟಿಪ್ಪು ಸುಲ್ತಾನನ ಕೋಟೆಯ ನಾಯಕ ಮುಹಮ್ಮದ್ ಖಾನ್ ಬಹಲ್ಲುಮಿ ಈ ದ್ವಾರಕ್ಕೆ ಸುಲ್ತಾನ್ ದರ್‌ವಾಜ್ ಎಂದು ಹೆಸರಿಸಿರುದುದನ್ನು ಈ ದ್ವಾರದ ಮೇಲ್ಭಾಗದಲ್ಲಿರಿಸಿದ ಶಾಸನವು ತಿಳಿಸುತ್ತದೆ. ಈ

ಶಾಸನದಲ್ಲಿ ಕುರಾನಿನ ಸೂಕ್ತಿ ಇದೆ. ಈ ಶಾಸನವು ಕೊಪ್ಪಳದ ಕೋಟೆಯ ಎರಡನೆಯ ಸುತ್ತಿನ ಕೋಟೆಯಲ್ಲಿದೆ. ಸ್ಥಳೀಯರು ಕರೆಯುವ ದರ್ವಾಜಾದ ಮೇಲ್ಗಡೆ ಕೆತ್ತಲ್ಪಟ್ಟಿದೆ. ಆ ಶಾಸನದ ಪಾಠ ಹೀಗಿದೆ :

ಅಲ್ಲಾಹ

ಬಿಸ್ಮಿಲ್ಲಾಹಿರ್ರಹಮಾನಿರ್ರಹೀಮು

ವ ನುಜ್ಜಿಲ್ ಮಿನಲ್ ಕುರಾನಿ ಮಾ ಹುವ ಷಿಫಾವುನ್ ವ ರಹಮತುನ್

ಲಿಲ್ ಮೋಮಿನೀನ

ಮಾಲಿಕೆ ಈ ಕಿಲಾರಾಬುವದ್ ಬಹಾದ್ದೂರ್ ನವಾಬ

ಟೀಪು ಸುಲ್ತಾನ, ಅಜ್ ವಿತಾಲಿ ಷುದಾ ಅಸಾರೆ ಕುಲ್ ಇಮಾರತ್

ತೈಯಾರ್ ಕರದ್

ಫಿದ್ವಿ ಕಿಲಾದಾರ ಮಹಮ್ಮದ್‌ಖಾನ ಬಹಲ್ಲಮಿ ನಿಹಾದಮ್‌ದರ್

ಸುಲ್ತಾನ ಬಾಬ (ಸನ್ ೧೧೯೮ ಹಿಜರಿ)

ಕನ್ನಡ ಭಾಷಾಂತರ

ಅಲ್ಲಾಹ,

ದಯಾಮಯಿ, ಕರುಣಾನಿಧಿ

ಕುರಆನ್ ಸೂಕ್ತದ ಪ್ರಕಾರ ಧರ್ಮಿಷ್ಟರ ಮೇಲೆ ದೇವರ ಕೃಪೆ

ಕಿಲ್ಲೆದಾರ ಮುಹಮ್ಮದ ಖಾನ್ ಬಹಲ್ಲಮಿಯು

ಸುಲ್ತಾನ ದರವಾಜಾ ಎಂದು ಹೆಸರಿಸಿದನು (ಹಿಜರಿ ಸನ್ ೧೧೯೮)ಕಾಲುವೆಯ ಕೆಲಸ ಉಸ್ಮಾನನು ನಿರ್ವಹಿಸಿದನು.

ಹೀಗೆ ಕೊಪ್ಪಳವು ನಾಲ್ಕು ಬಾರಿ ಪುನಃ ಕಟ್ಟಿಸಿಕೊಂಡಿದ್ದರೂ ಆದಕ್ಕೆ ಆಧಾರಗಳು ನಮಗೆ ದೊರೆಯುತ್ತಿಲ್ಲ. ಸಿಕ್ಕಿರುವ ಆಧಾರಗಳ ಮಾತ್ರದಿಂದ ಕೊಪ್ಪಳ ಕೋಟೆಯನ್ನು ಈ ಮೇಲಿನಂತೆ

ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಅದೇನೇ ಇದ್ದರೂ ಕೊಪ್ಪಳದ ಕೋಟೆಯ ರಚನೆ ತುಂಬಾ ಕುತೂಹಲಕಾರಿಯಾಗಿದೆ. ಈ ಕೊಪ್ಪಳದ ಕೋಟೆಯ ವಿಹಂಗಮ ದೃಶ್ಯವನ್ನು ಅನುಬಂಧದಲ್ಲಿ ಕೊಡಲಾಗಿದೆ.

## ಕೋಟೆ ಕಟ್ಟಿದವರಾರು?

ಕೊಪ್ಪಳವು ರಾಜಕೀಯವಾಗಿ ಅನೇಕ ಏರಿಳಿತಗಳನ್ನು ಕಂಡುಂಡಿದೆ. ಹಲವು ಸಾಮ್ರಾಜ್ಯಗಳಿಗೆ ಇದು ವಾಣಿಜ್ಯಕೇಂದ್ರವಾಗಿ ಶೈಕ್ಷಣಿಕ ಕೇಂದ್ರವಾಗಿ ಧಾರ್ಮಿಕ ಕೇಂದ್ರವಾಗಿ ಪ್ರಮುಖ ಪಾತ್ರವನ್ನು ವಹಿಸಿದೆ. ಕೊಪ್ಪಳವನ್ನಾಳಿದ೧೮-೨೦ ಅರಸುಮನೆತನಗಳಲ್ಲಿ ಯಾವ ಅರಸರು ಕೊಪ್ಪಳದ ಕೋಟಗೆ ಭದ್ರ ಬುನಾದಿಯನ್ನು ಹಾಕಿದರೋ ತಿಳಿಯುತ್ತಿಲ್ಲ. ಅದರ ಬಗೆಗೆ ಯಾವ ಶಾಸನಗಳಲ್ಲೂ ಉಲ್ಲೇಖವಿಲ್ಲ. ಕಾಲವನ್ನು ನಿರ್ದಿಷ್ಟಪಡಿಸುವಂಥ ನಿರ್ದಿಷ್ಟ ಅವಶೇಷಗಳೂ ಸಿಗುತ್ತಿಲ್ಲ. ಪೂರಕವಾದ ಸಾಹಿತ್ಯವೂ ದೊರಕುತ್ತಿಲ್ಲ. ಈ ಎಲ್ಲಾ ಕಾರಣಗಳಿಂದ ಕೊಪ್ಪಳದ ಕೋಟೆಗೆ ಭದ್ರಬುನಾದಿ ಹಾಕಿದವರಾರು ಎಂಬುದು ಚರಿತ್ರೆಕಾರರಿಗೆ ಸವಾಲಾಗಿದೆ. ಈಸ್ಟ್ ಇಂಡಿಯಾ ಕಂಪನಿಯ ಮಹಾದಂಡನಾಯಕ ಸರ್.ಜಾನ್ ಮಲ್ಕ್ಯಂನು '' ..........The Koppal Fort is undoubtedly one of the finest examples of the military architecture of the Deccen ಎಂದು ಮನಸಾರೆ ಈ ಕೋಟೆಯನ್ನು ಬಣ್ಣಿಸಿರುವನು. ಹಲವು ಯುದ್ಧಗಳಲ್ಲಿ ಸಹಜ ಶಕ್ತಿಯನ್ನು ಹೊಂದಿದ್ದ ಸಶಸ್ತ್ರಸಜ್ಜಿತ ಕೋಟೆಯಾಗಿತ್ತೆಂಬುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಕೊಪ್ಪಳವು ಬಿಜಾಪುರದ ಅರಸರಿಗೆ ಪ್ರಪ್ರಥಮವಾಗಿ ಹೆಚ್ಚು ಒಡನಾಟವುಳ್ಳ ನಗರವಾಗಿತ್ತು. ಆ ತರುವಾಯ ಈ ಕೋಟೆ ಹೈದರಾಲಿ ಟಿಪ್ಪು ಸುಲ್ತಾನನಿಂದ ದುರಸ್ತಿಯನ್ನು ಕಂಡುಕೊಂಡಿತು ಎಂಬುದಕ್ಕೆ ಸಾಕ್ಷ್ಯಾಧಾರಗಳಿವೆ. ಅರಸು ವೀರಪ್ಪ, ಕೆಂಚನಗೌಡ ಭೀಮರಾಯನಿಗೆ ಈ ಕೋಟೆ ಆಸರೆ ನೀಡಿದೆ. ಸಮಕಾಲೀನ ಇತಿಹಾಸದಲ್ಲಿ ಕೊಪ್ಪಳ ಕೋಟೆಯು ಶಾಸನಗಳು, ಕಾವ್ಯಗಳು ಸಂದರ್ಶಕರ ದಿನಚರಿಗಳು ಅದರ ನಿರ್ಮಾಣದ ಬಗೆಗೆ ತಿಳಿಸುತ್ತಾವಾದರೂ ಆರಂಭದ ಕೋಟೆಯನ್ನು ಕಟ್ಟಿಸಿದವರಾರು ಎಂದು ತಿಳಿಯುತ್ತಿಲ್ಲ. ಭಾರತ

ಸರ್ಕಾರವು ಕ್ರಿ.ಶ. ೧೯೩೭ರಲ್ಲಿ ಪ್ರಕಟಿಸಿದ ಇಂಡೋ ಇಸ್ಲಾಮಿಕ್ ಶಾಸನಗಳು ಸಂಪುಟದಲ್ಲಿ ಮತ್ತು ಹೈದರಾಬಾದ್ ಪುರಾತತ್ವ ಇಲಾಖೆಯು ೧೯೧೬ರಲ್ಲಿ ಪ್ರಕಟಿಸಿದ ಸಂಪುಟದಲ್ಲೂ ಕೊಪ್ಪಳವು ನಗರ ಪ್ರದೇಶದ ಕೋಟೆಯನ್ನು ಹೊಂದಿತ್ತೆಂದು ತಿಳಿದುಬರುತ್ತದೆ. ಈ ಎರಡೂ ಪ್ರಕಟಣೆಗಳು ಪ್ರಥಮವಾಗಿ ಕೊಪ್ಪಳದ ಕೋಟೆಯ ಮೇಲೆ ಬೆಳಕು ಚೆಲ್ಲುತ್ತವೆ. ಆ ಸಂಪುಟಗಳಲ್ಲಿ ಪ್ರಕಟವಾದ ಒಂದು ಶಾಸನವು ಜಗದ್ರಕ್ಷಕ ದ್ವಿತೀಯ ಇಬ್ರಾಹಿಂ ಅದಿಲ್ ಷಾನ ಆಳ್ವಿಕೆಯಲ್ಲಿ ಮತ್ತು ಘನವಂತ್‌ಖಾನ್ ಮತ್ತು ಯಾಖೂದ್ ಖಾನನ ಅವಧಿಯಲ್ಲಿ ಕೊಪ್ಪಳ ಕೋಟೆಯ ನಾಯಕನಾದ ಘಜಾಖಾನನು ಈ ಕೋಟೆಯ ಮೇಲೆ ಮಸೀದಿಯನ್ನು ಕಟ್ಟಿದನು ಎಂದು ಉಲ್ಲೇಖವಿದೆ. ಅದರ ಕಾಲ ಹಿಜರಿ ೧೦೧೮ ಅಂದರೆ ಕ್ರಿ.ಶ. ೧೬೦೯. ಆ ಶಾಸನದ ಪೂರ್ಣ ಪಾಠವು ಈ ರೀತಿಯಿದೆ :

> '' ದರ್ ಜಮಾನ ಸಲ್ತನತ್ ಷಾಹಅಲಮ್‌ಪನಾಹ ಇಬ್ರಾಹಿಂ ಅದಿಲ್‌ಷಹಾ
> ಖಿಲ್ಲದ್ ಅಯ್ಯಾಮ ಸಲ್ತನತ್ ವ ದರವಕ್ತೆ ಇಸ್ತೆಖಾವತ್‌ಖಾನ್ ಅಲಿ
> ಷಾನ ಯಾಕುತ ಖಾನ ಇದಮುಲ್ಲಾ ಇಕ್ಬಾಲಹು ಗಾಜೀಖಾನ ಸರೆನೌಬತೆ ಕಿಲಾ
> ಕುಪ್ಪಲ್ ಈಮಸ್ಜಿದ್ ರಾ ಜಿನಾ ನಮೂದಾದ ಸನ್ ಸಮಾನೆ ಅಕ್ಷರ್ ಅಲಿಫ್
> ಮಿನ್ ಹಿಜರತುನ್ನ ಬುವಿಯಸನ್ ೧೦೧೮ ಹಿ''

ಎಪಿಗ್ರಾಫಿಯಾ ಇಂಡೋ ಮುಸ್ಲಿಂ ಒಂಬತ್ತರಲ್ಲಿ ಇದು ದಾಖಲಾಗಿದೆ. ಈ ಮಸೀದಿಗೆ ಇಂದು ದೂದ್‌ಪೀರ ಮಸೀದಿ ಎಂದು ಇಲ್ಲಿಯವರುಕರೆಯುವರು. ಕೊಪ್ಪಳದ ಕೋಟೆಯ ನಿರ್ಮಾಣ ಎಂದಿನಿಂದ ಆರಂಭವಾಯಿತು ಎನ್ನುವುದಕ್ಕಿಂತ ಕೊಪ್ಪಳದ ಕೋಟೆಯ ಉಲ್ಲೇಖವು ಎಂದಿನಿಂದ ಸಿಗುತ್ತದೆ ಎಂಬುದು ನಮಗೆ ಮುಖ್ಯವಾಗುತ್ತದೆ. ಅದೇನೇ ಇದ್ದರೂ ೧೬೦೯ರ ಪೂರ್ವದಲ್ಲಿ ಕೋಟೆ ಇತ್ತೆಂಬುದಂತೂ ಸತ್ಯ. ಈ ಕೋಟೆಯನ್ನು ಕಟ್ಟಲು ಅನೇಕ ವರ್ಷಗಳು ಗತಿಸಿರಬೇಕು. ಆ ಕಾರಣದಿಂದಾಗಿ ಈ ಕೋಟೆಯನ್ನು ಕಟ್ಟಿದ ಕಾಲ ಇನ್ನೂ ಹಿಂದೆ ಸರಿಯುತ್ತದೆ. ಕೊಪ್ಪಳದ ಕೋಟೆಯ ಮೇಲೆ ಸಿಕ್ಕ ಶಾಸನವೊಂದರಲ್ಲಿ ಇದು ಎಷ್ಟು ವರ್ಷಗಳಿಂದ ಕಟ್ಟಲ್ಪಟ್ಟಿತು ಎನ್ನುವುದಕ್ಕೆ ದೂರಾನ್ವಯದ ಮಾಹಿತಿಯನ್ನು ನೀಡುತ್ತದೆ. ಅದರ ಪೂರ್ಣ ಪಾಠವು ಹೀಗಿದೆ.

'' ಅಲ್ಲಾಹ ಮಹಮ್ಮದ ಅಲಿ ಬರ್ ಹಕ್

ದರ್ ಜಮಾನೆ ಷಾಹ ಇಬ್ರಾಹಿಮ್‌ಸಾನಿ ಷುದ್ ಹಿಸಾರ

ಬಾದ ಪಾಯಿಂದಾ ವ ಬಾಕಿ ತಾ ಸಲ್ತನತಾರಾ ಕರಾರ

ತಹತೆ ಹಾಕಿಮೆ ಹಫ್ತ ಕಿಷ್ವರ್ ವ ಬಂದಾ ಸರ್ ಕುಷಾನತ್ ವರಾ (?)

ಹಾಸಿದಾನ್ ಗೋರೆ ದರ್ ಕಹರೆನಾರ್ ಕರೆದಂದೆ ದುಷ್ಮನಾನತ್

ಖಾದಿಮ್ ಷಾಹ ಜಮಾ ಸುಲ್ತಾನ ಅಲಿ ಬಸ್ ನಾಮದಾರ

ಮಿ ನಮೂದಿಷ್ ತರಹ ಭಸತಹಷ್ ಬಾ ಬಜಲಿ ಕಾಮಗಾರ

ಬುವದ್ ಮೋಸಮೆ ಹಂಗಾಮೆ ರಚೀ ವ ಫಸ್ಲೆಬಹಾರ್

ಬಾದೆ ಹಿಜರಿ ಅಜ್ಮೆಅಜಾ ದರ್ ಷಹರಿ ಬಿಲ್ಲಜ್ ಷುದ್ ಷುಮಾರ್

...........ಅಜಿಜ್ ದರಹಾ..........ಕರ್ದ

ಷುದ್ ಮುರತ್ತಬ್ ಬಾಬೆ ಅಲೀ......... ಜಹಾನಿಷ್‌ಕಾರ''?

ಕನ್ನಡ ಭಾಷಾಂತರ

ಅಲ್ಲಾ ಪ್ರವಾದಿ ಮುಹಮ್ಮದ್ ಅಲಿ ಸತ್ಯರು.

೧) ಅರಸು ೨ನೆಯ ಇಬ್ರಾಹಿಮ್‌ನ ಕಾಲದಲ್ಲಿ ಕೋಟೆಯ ಆವರಣ ಗೋಡೆ(      ) ಕಟ್ಟಲ್ಪಟ್ಟಿತು. ಈ ರಾಜ್ಯ ಮುಂದುವರೆದಂತೆ ಇದು ಉಳಿಯಲಿ ಮತ್ತು ಬಾಳಲಿ.

೨) ಏಳು ನಾಡಿನ ಅರಸನಾದ (ಈತನ) ಆದೇಶದಂತೆ ನಿನ್ನ ವೈರಿಗಳಿಗೆ ಅಗ್ನಿ ಕುಮಡವು ವಿಶ್ರಾಂತಿ ಧಾಮವಾಗಲಿ.

೩) ಜಗದೊಡೆಯನ ಸೇವಕ ಕೀರ್ತಿವಂತ ಸುಲ್ತಾನ ಅಲಿ ನಾಮದಾರ ಇದನ್ನು (ಪ್ರಕಾರ ಆವರಣದ ಗೋಡೆಯನ್ನು ಅರ್ಹ ಸಹವರ್ತಿಗಳೊಂದಿಗೆ ಭೂಮಟ್ಟದವರೆಗೂ ಕಟ್ಟಿಸಿದನು.

೪) ವಸಂತ ಸಮಯ ಮತ್ತು ಋತು ಅರಳುವ ಕಾಲ, ಪವಿತ್ರ ಧರ್ಮಯುದ್ಧ ಸುರುವಿನ ನಂತರ ಇದು ಜುಲ್ ಹಜ್ ತಿಂಗಳಿಗೆ ಹೊಂದಿಕೊಳ್ಳುತ್ತದೆ.

೫) ವಿನಮ್ರ ಅಲಿಯ ದ್ವಾರ ಕಟ್ಟಲ್ಪಟ್ಟಿತು.''

ಈ ಶಾಸನವು ಬಿಜಾಪುರದ ಅರಸ ಎರಡನೇ ಇಬ್ರಾಹಿಂ ಆದಿಲ್ ಷಾಹನ ಕಾಲದಲ್ಲಿ ಕೆತ್ತಲ್ಪಟ್ಟಿದೆ. ಘನ ಸುಲ್ತಾನನು ತನ್ನ ಸಮಾನಸ್ಕಂದರೊಡನೆ ಭೂಮಟ್ಟದಿಂದ ತುಸು ಎತ್ತರದವರೆಗೂ ಹೊರಾಂಗಣದ ಕೋಟೆಯನ್ನು ರಚಿಸಿದ್ದನೆಂದು ತಿಳಿದುಬರುತ್ತದೆ. ಆದರೆ ಈ ಕೋಟೆಯನ್ನು ಇವನೇ ಕಟ್ಟಿಸಿದನೆಂಬುದಕ್ಕೆ ವಿವರಣೆಗಳಿಲ್ಲ. ಗಚ್ಚಿನಕೋಟೆ ಮತ್ತು ಮಣ್ಣಿನ ಕೋಟೆಗಳು ಈ ಅರಸನ ಕಾಲದಲ್ಲಿ ಕಟ್ಟಲ್ಪಟ್ಟಿವೆ ಎಂದು ಬಲವಾಗಿ ಶಂಕಿಸಬಹುದು. ಕೋಟೆಯ ಆವರಣದಲ್ಲಿ ಸಿಕ್ಕ ಒಂದು ಶಾಸನದಲ್ಲಿ ಈ ಅರಸನು ಲೋಕೋಪಯೋಗಿ ಕಾರ್ಯಗಳ ಕೈಗೊಂಡುದುದರ ಬಗೆಗಿನ ವಿವರಗಳ ಪಾಠವು ಹೀಗಿದೆ. ಅನೇಕ ಕಟ್ಟಡಗಳನ್ನು ಕಟ್ಟಿಸಿದನು ಎಂಬುದರ ಬಗೆಗೆ ಈ ಶಾಸನವು ಸ್ಪಷ್ಟ ನಿದರ್ಶನಗಳನ್ನು ನೀಡುತ್ತದೆ. ಈ ಶಾಸನದ ಪಾಠ ಹೀಗಿದೆ :

'' ದರ್ ಈ ಆಯಾಮ ಅಮಲ್ ನವಾಬಬಹಾದೂರ
ಇಮಾರತ್ ಸಾಖ್ತದರ್ ಕುಪ್ಪಲ್ ನವಾದಿರ್
ನವಾದಿರ್ ಕಾರಷುದ್ ಊಯಾಫ್ತ ನಾಮ
ಖಿಲಾದಾರ ಅಜ್ ಮಹಮ್ಮದ್ ಖಾನ ಬಹಲಮೀ
ನಖಸ್ತೆ ಅಜ್ ಅಬೆ ಕಿಲ್ಲತ್ ಯಾ
ನಖಸ್ತೆ ಅಜ್ ಅಬೆ ಕಿಲ್ಲತ್ ಯಾಫ್ತ ಆಲಮ್
ಬಹೌಯಮ್ ತೈರೆ ಜುಮಾಲಾ ನಸ್ಲೆ ಆದಮ್
ಜೆ ದರಿಯಾ ಫೈಜ ಬಕುಷಾಯಂದೆ ಊಷಾನೆ
ಕಿಲಾ ಕಚ್ಚೀ ವ ಮಿಟ್ಟೀ ರಾಹತ್ ದಾನ
ನಿಹಾದಂದೆ ನಾಮೆ ಊರಾ ಚಾಂದ ಕುಂಟಾ
ಬನಿಜ್ಜ ಅಸ್ತ ಬರ್ ಸರೇ ಊ ಜೋಗೇ ಬಂಡಾ
ಬಹ ಅಕ್ಲಷ್ ಅಂಕಷುದ್ ಅತರಾಫೆ ತಾಲಾಬ
ಮ್ಯಾನೆ ಜಲಪರಿ ಪುರ್ ಅಬ್ ಸಹಲಾಬ
ಬಿಮಾನಿದ್ ಯಾದಗಾರಿ ತು ಕಿಯಾಮತ್

ನಮೂನಾ ಕರಿಯಾ ಕುಪ್ಪಲ್ ರಾ ಸಲಾಮತ್

ಮುರತ್ತಬ್ ಷುದ್ ದರ್ ಈ ರಜ್ಜಬ್ ಮಾಹೆ ನೌ

ಸನ ಹಿಜರಿ ಎಕ್ಯಾರಾ ಸದ್ ಪಂಜಾನ ನೌ''

ಕನ್ನಡ ಭಾಷಾಂತರ

೧) '' ನವಾಬ ಬಹಾದ್ದೂರ (ಹೈದರ್ ಆಲಿ) ಆಡಳಿತದಲ್ಲಿ ಈ ಬಹದ್ದೂರನು ಕೊಪ್ಪಳದಲ್ಲಿ ಅಭೂತಪೂರ್ವ ಕಟ್ಟಡಗಳನ್ನು ಕಟ್ಟಿಸಿದನು.

೨) ಈತನ ಸಾಧಾರಣ ಕಾರ್ಯಗಳು ಕೀರ್ತಿಯನ್ನು ಗಳಿಸಿದವು. ಮುಹಮ್ಮದಖಾನನ ಬಹಲ್ಲಮಿ ಕಿಲ್ಲೆದಾರನಾಗಿದ್ದನು.

೩) ಪ್ರಥಮ ಬಾರಿಗೆ ಪ್ರಪಂಚದಲ್ಲಿ ನೀರಿನ ಕೊರತೆ ಅನಿಸಿತು. ಪಶುಗಳು, ಪಕ್ಷಿಗಳು ಮತ್ತು ಅದಮನ ಯಾವತ್ತೂ ಸಂತಾನ.

೪) ಅವನು (ನವಾಬ ಬಹಾದ್ದೂರ) ಔದಾರ್ಯದ ಝರಿಯನ್ನೇ ತೆರೆದನು. ಕೋಟೆ (ಗೋಡೆಗಳು) ಗಚ್ಚು ಮತ್ತು ಮಣ್ಣಿನಿಂದ ಕಟ್ಟಲ್ಪಟ್ಟಿದ್ದವು. ಗೌರವಾದರ ವರದಾನವೆಂದು.

೫) ಇದು (ಬಾವಿ) ಚಾಂದ ಕುಂಟಾ ಎಂದು ಕರೆಯಲ್ಪಡುತ್ತಿದೆ. ಇದಕ್ಕೆ ಸನಿಹದಲ್ಲಿ ಜೋಗಿ ಬಂಡೆ ಬುರುಜು ಇದೆ.

೬) ಅವನ ತಿಳುವಳಿಕೆಯಂತೆ ವಿವಿಧ ದಿಕ್ಕುಗಳಲ್ಲಿ ಈತನ ಕೆರೆಗಳನ್ನು ಕಟ್ಟಿಸಿದನು. ಇವುಗಳ ಮಧ್ಯದಲ್ಲಿನ ಜಲಾಶಯ ನೀರಿನಿಂದ ತುಂಬಿ ತುಳುಕುತ್ತಿತ್ತು.

೭) ಜಗವಿರುವವರೆಗೂ ಇದು ಸ್ಮಾರಕವಾಗಿರಲಿ ಕೊಪ್ಪಳದ ಗ್ರಾಮದವರು ಈ ಮಾದರೀ ಕೃತಿಯನ್ನು ಆನಂದಿಸಲಿ.

೮) ೧೧೫೯ ಹಿಜರಿ ರಜಬ ತಿಂಗಳ ಪ್ರಾರಂಭದಲ್ಲಿ (ಜುಲೈ ೧೭೪೬) ಪೂರ್ತಿಯಾಯಿತು. ''

ಹೈದರಾಲಿಯು ಕೊಪ್ಪಳದ ಕೋಟೆಯ ನಿರ್ಮಾಣದಲ್ಲಿ ಆಸಕ್ತಿವಹಿಸಿದ್ದನೆಂಬುದು ಇದರಿಂದ ತಿಳಿದುಬರುತ್ತದೆ. ಹೈದರಾಲಿ ಈ ಕೋಟೆಗಳ ನಿರ್ಮಾಣದ ಉಸ್ತುವಾರಿಗೆ ಒಬ್ಬ ಅಧಿಕಾರಿಯನ್ನು ನೇಮಿಸಿದ್ದನು ಮತ್ತು ಅದರ ಬಗ್ಗೆ ಹೆಚ್ಚು ಆಸಕ್ತಿಯನ್ನು ಪಡೆದುಕೊಂಡಿದ್ದನು ಅದು ಇಸ್ಲಾಂ ಧರ್ಮಕ್ಕೆ ಪ್ರಿಯವಾಗಿತ್ತು, ಆ ಧರ್ಮದ ತಾತ್ವಿಕ ತಳಹದಿಯಲ್ಲಿ ಕೋಟೆಯ ನಿರ್ಮಾಣ

ಅವಶ್ಯವಾಗಿತ್ತು ಎನ್ನುವುದು ಮತ್ತೊಂದು ಶಾಸನದಲ್ಲಿ ತಿಳಿದು ಬರುವ ಸಂಗತಿ. ಹೈದರಾಲಿ ಈ ಕೋಟೆಯನ್ನು ಯುರೋಪ್‌ನ ಮಾದರಿಯಲ್ಲಿ ನಿರ್ಮಿಸಿದನು. ಕೋಟೆಯ ಸುತ್ತ ಕಂದಕಗಳನ್ನು ಅಗತ್ಯವಿರುವಲ್ಲಿ ಕೆರೆ-ಕಾಲುವೆಗಳನ್ನು ನಿರ್ಮಿಸಿದನು ಎಂಬುದರ ಬಗೆಗೆ ಈ ಶಾಸನವು ಸ್ಪಷ್ಟವಾಗಿ ತಿಳಿಸುತ್ತದೆ.

'' ಬಂದಾ ನ್ಯಾಜಷಾನೆ ಮುಹಮ್ಮದ ಉಸ್ಮಾನ ಸಾಕಿನ ಕೋಲಾರ ಖೂಪಾ
ವಿಸಾರ್ ಬ ಹಸ್ಬೆ ಆಬದ್ ಖೂರಿಷ್ ಹಸ್ಬುಲ್ ಅಮರ್ ಜಲೀಲು
ಖದರ್ ನವಾಬ ನಾಮದಾರ ಫಲಕ ಇಖ್ತೆದಾರ ಸೆಫಹರೆ
ಮ ದಾರೆ ಖುರ್ಷೀದ್ ರಿಕಾಬ ಅಲಿ ಅಲ್‌ಖಾಬ್ ಸೈ ಅಲಿಫ
ವಲ್ ಕಲ್ಮಿ ಹಾಕಿಮುಲ್ ಮುಲ್ಕ್ ವಲ್ ಇಲ್ಮ ಎಲಅನಿಹಿಜ್ ನವಾಬ
ಸಲ್ತನಹತು ಬಿನಾಬಿರ್ ತಯಾರಿಯೆ ಕಿಲಾಕುಪ್ಪಲ್ ಇತ್ತೆಫಾಖ
ಟಾಂಕಾ ವ ನಹರ ವ ಖಂದಖ್ ವಗೈರಾ
ಯಾಜದಹುವ್ ಫರ್‌ಕ ಅಸನ್

ಕನ್ನಡ ಭಾಷಾಂತರ

ಸೂರ್ಯನಂತೆ ತೇಜೋಮಯ, ನಕ್ಷತ್ರಗಳ ಕೃಪೆಗೆ ಪಾತ್ರನಾದವನು, ದೈವಿಶಕ್ತಿಯುಳ್ಳ ಘನ ಅಧಿಕಾರಿಯು ಅತ್ಯುನ್ನತ ಬಿರುದಾಂಕಿತನು, ಕೀರ್ತಿವಂತನು ನವಾಬನ ರಣಧೀರನು, ಅದ್ವಿತೀಯ ಆಡಳಿತಗಾರನು, ರಾಜ್ಯದ ಮತ್ತು ಅದರ ಧ್ವಜದ ಪ್ರಭು, ನವಾಬ ಹೈದರಾಲಿಖಾನ್ ಬಹದ್ದೂರ್ ಉರುಫ್ ಪತಃ ಹೈದರ್ ಇವರ ರಾಜ್ಯ ಮತ್ತು ವೈಭವ ಶಾಶ್ವತವಾಗಿರಲಿ .

ಆನಂದದಿಂದೊಡಗೂಡಿದ ಕೋಲಾರದ ನಿವಾಸಿ (ಹೈದರಾಲಿಯು)ಮಹಮ್ಮದ್‌ನು ವಿನಮ್ರ ಸೇವಕ. ಆ ಸೇವಕನಾದ ಮಹಮ್ಮದ್ ಉಸ್ಮಾನನು ಈ ಕೋಟೆಯನ್ನು ಬಲಪಡಿಸಿದನು.

ಯುರೋಪಿಯನ್ ಮಾದರಿಯಲ್ಲಿ ಅನೇಕ ಸ್ಥಳಗಳಲ್ಲಿ ಬತ್ತೇರಿಗಳನ್ನು ಕಟ್ಟಿಸಿದನು, ಕೆರೆ ಮತ್ತು ಕಾಲುವೆಗಳನ್ನು ನಿರ್ಮಿಸಿದನು.

ಸನ್ ೧೧ ಜಾ ಖಯಾದಾ ೧೧೯೨ ಹಿಜರಿ (ಡಿಸೆಂಬರ್ ೧೯೭೮).

ಅದೇನೇ ಇದ್ದರೂ ಗಿರಿಕೋಟೆಯ ನಿರ್ಮಾಣ ಸಣ್ಣ ಕೆಲಸವಲ್ಲ. ಒಂದು ರಾಜ್ಯವನ್ನು ಕಟ್ಟಿದ ಶಕ್ತಿ ಒಂದು ಕೋಟೆಯನ್ನು ಕಟ್ಟಲು ಬೇಕಾಗುವುದು. ಒಂದು ಕೋಟೆಯ ನಿರ್ಮಾಣ ಕೇವಲ ಒಬ್ಬ ರಾಜನ ಅಥವಾ ಕೇವಲ ಒಂದು ಕಾಲಬದ್ಧವಾದ ಆವಶ್ಯಕತೆಯಾಗಿರದೆ ಅದು ನಿರಂತರ ಪ್ರಕ್ರಿಯೆಯಾಗಿದೆ. ರಾಜ್ಯ ಸಾಮ್ರಾಜ್ಯಗಳು ಹುಟ್ಟುವಾಗಲೇ ಕೋಟೆ ಕೊತ್ತಲಗಳ ಆಲೋಚನೆಯೂ ಹುಟ್ಟುತ್ತದೆ. ರಾಜಧಾನಿ ಮತ್ತು ಅದರ ಸುರಕ್ಷತೆ, ರಾಜಭಂಡಾರದ ಭದ್ರತೆ, ಸೈನ್ಯ ಶಕ್ತಿಯ ನಿರ್ವಹಣೆ, ಆಡಳಿತಾತ್ಮಕ ಜಾರಿಕ್ರಮಗಳು ಈ ಎಲ್ಲಾ ಸಂಗತಿಗಳಿಗೂ ಕೋಟೆಯ ಅಗತ್ಯವಿರುತ್ತದೆ. ಇದನ್ನು ಮನಗಂಡು ಭಾರತೀಯ ಅರಸರುಗಳೆಲ್ಲರೂ ಕೋಟೆಗಳನ್ನು ನಿರ್ಮಾಣ ಮಾಡಿದ್ದಾರೆ. ಅವು ಅವರ ಅರ್ಹತೆಗಳನ್ನು ತೋರಿಸುತ್ತವೆ. ಅವರ ಸಾಮರ್ಥ್ಯವನ್ನು ಹೆಚ್ಚಿಸುತ್ತವೆ. ವೈರಿಗಳಿಂದ ಸಾಮ್ರಾಜ್ಯದ ರಕ್ಷಣೆ, ಜನರ ಯೋಗಕ್ಷೇಮ ಅರಮನೆಯ ಉಸ್ತುವಾರಿಗಳು ಭದ್ರಕೋಟೆಯಿಂದ ಮಾತ್ರ ಸಾಧ್ಯ. ಭದ್ರ ಕೋಟೆಗೆ ಸಮರ್ಥ ಸೇನೆಯ ಅಗತ್ಯವೂ ಇರುತ್ತದೆ. ಏಕೆಂದರೆ ಶಸ್ತ್ರಾಗಾರವಿಲ್ಲದ ಕೋಟೆ ಕೋಟೆಯೇ ಅಲ್ಲ. ಕೋಟೆಯಿದ್ದ ಮೇಲೆ ಅದನ್ನು ರಕ್ಷಿಸಲು ಸಮರ್ಥ ಸೇನೆಯ ಅಗತ್ಯವೂ ಇರುತ್ತದೆ. ಕೊಪ್ಪಳದ ಅರಸರು, ಕೊಪ್ಪಳದಲ್ಲಿ ಆಳ್ವಿಕೆ ನಡೆಸಿದ ಅರಸುಮನೆತನಗಳು ಈ ಎಲ್ಲ ಅಂಶಗಳನ್ನು ಮನಗಂಡು ಕೋಟೆಯನ್ನು ನಿರಂತರವಾಗಿ ನಿರ್ಮಿಸಿಕೊಂಡು ಬಂದಿದ್ದಾರೆ.

## ೫. ೨. ದೇಗುಲ ವಾಸ್ತುಶಿಲ್ಪದ ಮಾದರಿಗಳು

ಭಾರತದಲ್ಲಿ ದೇವಾಲಯಗಳ ವಾಸ್ತುಶಿಲ್ಪದ ರಚನೆ ಮತ್ತು ಅದರ ಬೆಳವಣಿಗೆಯನ್ನು ಪ್ರಾಚೀನ ಕಾಲದಿಂದ ಗುರುತಿಸಬಹುದು. ಆರಂಭಕಾಲದ ದೇವಾಲಯದ ವಾಸ್ತುಗಳು ಸ್ಪಷ್ಟವಾಗಿ ಗೋಚರವಾಗುವುದಿಲ್ಲ. ಆದರೂ ಆಗ ಮರ ಬೊಂಬು ಮಣ್ಣು ಮುಂತಾದ ವಸ್ತುಗಳಿಂದ ಕಟ್ಟಿದ ಸಾಧ್ಯತೆಯನ್ನು ತಳ್ಳಿ ಹಾಕುವಂತಿಲ್ಲ. ಮಾನವನ ಆರಂಭದ ಹಂತದಲ್ಲಿ ಕಟ್ಟಡಗಳ ನಿರ್ಮಾಣಕ್ಕೆ ಬಳಸಿದ ಪರಿಕರಗಳು ಇವೇ ಆಗಿವೆ. ಅವನು ತನ್ನ ಬೇಟೆ ಸಂಸ್ಕೃತಿಯ ಹಂತದಲ್ಲಿದ್ದಾಗ ಬೇಟೆಗೆ ಹೊರಡುವ ಮೊದಲು ತಾನು ಬೇಟೆಯಾಡಬೇಕು ಎಂದುಕೊಂಡಿರುವ ಪ್ರಾಣಿ ಸತ್ತಿರುವಂತೆಯೂ ಅದಕ್ಕೆ ತನ್ನ ಆಯುಧವು ತಗುಲಿದೆ ಎಂತಲೂ ಬಂಡೆಗಲ್ಲುಗಳ ಮೇಲೆ ರೇಖಾಚಿತ್ರಗಳ ಮೂಲಕ ಅದನ್ನು ಮೂಡಿಸುತ್ತಿದ್ದನು. ಕೊಪ್ಪಳದದಂಥ ಸ್ಥಳಗಳಲ್ಲಿ ಈ ತೆರನಾದ ರೇಖಾಚಿತ್ರಗಳನ್ನು ಕಾಣಬಹುದು. ಈ ರೀತಿ ಕೊರೆದ ಚಿತ್ರಗಳ ಸುತ್ತ ಒಂದು ಮಂಡಲವನ್ನು ಎಳೆಯುವ ಮೂಲಕ ಅದನ್ನು ಪವಿತ್ರವೆಂದು ಭಾವಿಸಿದ . ನಂತರ ಈ ಸ್ಥಳಗಳನ್ನು ಪವಿತ್ರ ಎಂದು ಭಾವಿಸಿ ಅಲ್ಲಿ ಜಾಗರೂಕತೆಯಿಂದ ವರ್ತಿಸಲು ತೊಡಗಿದ. ಅದಕ್ಕೆ ರಕ್ಷಣೆಯನ್ನು ಒದಗಿಸಲು ಯತ್ನಿಸಿದ. ಇದೇ ದೇವಾಲಯದ ರಚನೆಗೆ ಕಾರಣವಾಯಿತು ಎನ್ನಬಹುದು. ಇದು ಆರಂಭದ ಬೆಳವಣಿಗೆಯಾದರೆ ಬೃಹತ್ ಶಿಲಾಯುಗದ ಕಾಲದಲ್ಲಿ ಬೆಳೆದು ಬಂದ ಕಲ್ಪನೆ ಮತ್ತೊಂದು ರೀತಿಯದು. ಈ ಅವಧಿಯಲ್ಲಿ ಸತ್ತವರ ನೆನಪಿಗಾಗಿ ಸಮಾಧಿಯನ್ನು ನಿರ್ಮಿಸಿರುವುದು ವಿಶಿಷ್ಟವಾಗಿದೆ. ಈ ಸಮಾಧಿಗಳನ್ನು ವಾಸದ ಮನೆಗಳಂತೆಯೇ ಕಟ್ಟಲಾಗುತ್ತಿತ್ತು. ಕೊಪ್ಪಳದಲ್ಲಿ ಇಂತಹ ಕಲ್ಗೋರಿಗಳನ್ನು ಕಾಣಬಹುದು. ಇವನ್ನು ಬೃಹತ್ ಶಿಲಾಗೋರಿಗಳೆಂದು ಕರೆಯುತ್ತಾರೆ. ಈ ಗೋರಿಗಳು ಪ್ರಾಚೀನ ಮಾನವನು ಅನುಸರಿಸಿದ ವಾಸ್ತುಪ್ರಕಾರಗಳಾಗಿವೆ. ಅಂದು ಮನುಷ್ಯ ಅಂದರೆ ಹಿರಿಯರು ಸತ್ತ ಬಳಿಕ ಮತ್ತೆ ಮರಳಿ ಬರುವರೆಂಬ ಕಲ್ಪನೆ ಗಾಢವಾಗಿದ್ದವೆಂಬುದನ್ನು ಈ ಗೋರಿಗಳು ದೃಢಪಡಿಸುತ್ತವೆ. ಇದಕ್ಕೆ ಸಾಕ್ಷಿಗಳಾಗಿ ಕೊಪ್ಪಳದ ಮಳೆಮಲ್ಲಪ್ಪನ ಗುಡ್ಡಗಳಲ್ಲಿ ಅಂದು ಕಟ್ಟಿದ ಗೋರಿಗಳನ್ನು ಕಾಣಬಹುದು. ಸತ್ತ ವ್ಯಕ್ತಿಯು

ಶವದೊಂದಿಗೆ ಅವನು ಬದುಕಿದ್ದಾಗ ಬಳಸಿದ ವಸ್ತುಗಳು ಆಹಾರಪದಾರ್ಥಗಳನ್ನು ಅವನ ಶವದ ಪಕ್ಕದಲ್ಲಿ ಹೂಳುತ್ತಿದ್ದರು. ಇದಲ್ಲದೆ ಸತ್ತ ವ್ಯಕ್ತಿಗೆ ಕಾಲಕಾಲಕ್ಕೆ ಬೇಕಾಗುವ ಆಹಾರ ಪದಾರ್ಥಗಳನ್ನು ಒಯ್ಯುವ ಸಲುವಾಗಿ ಸಮಾಧಿಯ ಒಳಗೆ ಹೋಗಿ ಬರಲು ಅನುಕೂಲವಾಗುವಂತೆ ವಿವಿಧ ಪ್ರಕಾರದ ಗೋರಿಗಳನ್ನು ನಿರ್ಮಿಸಿದ್ದಾರೆ. ಇವನ್ನು ಕಂಡಿಕೋಣೆ ಮತ್ತು ಹಾದಿಕೋಣೆ ಗೋರಿಗಳೆಂದು ಗುರುತಿಸುತ್ತಾರೆ. ಪ್ರಕೃತಿಯ ವೈಚಿತ್ರ್ಯ ಹಾಗೂ ಮಾನವನನ್ನು ಚಿಂತೆಗೀಡು ಮಾಡುತ್ತಿದ್ದ ಸಾವು ಮಾನವನಲ್ಲಿ ಭಯ, ಆತಂಕಗಳ ಜೊತೆಗೆ ಗೌರವದ ಭಾವನೆಗಳನ್ನೂ ಮೂಡಿಸಿದವು. ಈ ಬಗೆಯ ಬೆಳವಣಿಗೆಗಳು ಮುಂದೆ ದೇವಾಲಯದ ನಿರ್ಮಾಣಕ್ಕೆ ಕಾರಣವಾದವು ಎಂಬ ಅಂಶ ತಿಳಿದುಬರುತ್ತದೆ. **ಕೊಪ್ಪಳದ ಈ ಕಲ್ಗೋರಿಗಳು ಬೃಹತ್ ಶಿಲಾಯುಗದ ಕಾಲಘಟ್ಟದಲ್ಲಿ ನಿರ್ಮಾಣವಾಗಿದ್ದು ಪ್ರಾಚೀನ ಈಜಿಪ್ಟಿನ ಸಂಸ್ಕೃತಿಯಲ್ಲಿ ಕಟ್ಟಲಾದ ಪಿರಮಿಡ್‌ಗಳಿಗೆ ಹೋಲುತ್ತವೆ. ಆದರೆ ಪಿರಮಿಡ್‌ಗಳು ತ್ರಿಕೋಣಾಕೃತಿಯಲ್ಲಿ ಕಂಡುಬಂದರೆ ಇವು ಚೌಕೋಣಾಕಾರದವಾಗಿವೆ.** ಅದೇನೇ ಇದ್ದರೂ ಈಜಿಪ್ಟ್ ಸಂಸ್ಕೃತಿಯಲ್ಲಿ ಕಂಡುಬಂದಿರುವ ಪಿರಮಿಡ್‌ಗಳು ಮತ್ತು ಕೊಪ್ಪಳದಲ್ಲಿ ಕಂಡುಬರುವ ಕಲ್ಗೋರಿಗಳ ನಿರ್ಮಾಣದ ಆಶಯ ಒಂದೇ ಆಗಿದೆ.

ಮನುಷ್ಯ ತನ್ನ ರಕ್ಷಣೆಗೆಂದು ಕಟ್ಟಿಕೊಂಡ ಕಟ್ಟಡವು ಗೃಹವಾಸ್ತುಶಿಲ್ಪವಾದರೆ ಹಿರಿಯರು ದೇವರು ಹಾಗೂ ಇತರ ಶಕ್ತಿಗಳಿಗೆಂದು ನಿರ್ಮಿಸಿದ ಕಟ್ಟಡಗಳನ್ನು ದೇವಸ್ಥಾನಗಳ ವಾಸ್ತು ಅಥವಾ ಧಾರ್ಮಿಕ ವಾಸ್ತು ಎಂದು ಕರೆಯಬಹುದು. ದೇವಸ್ಥಾನಗಳು ದೇವರ ನೆಲೆಗಳಾಗಿದ್ದರೂ ಇದು ಸಮಾಧಿಯ ಪರಿಕಲ್ಪನೆಗೆ ಬಹು ಹತ್ತಿರವಾಗಿದೆ ಮತ್ತು ಅದನ್ನು ಹೋಲುತ್ತದೆ. ಈ ಕಾರಣದಿಂದಲೆ ದೇವಾಲಯದ ವಿವಿಧ ಭಾಗಗಳನ್ನು ದೇಹಕ್ಕೂ ಹೋಲಿಸಿದ್ದಾರೆ. ಶ್ರೀ ಬಸವಣ್ಣನವರ 'ಉಳ್ಳವರು ಶಿವಾಲಯವ ಕಟ್ಟುವರು ನಾನೇನು ಮಾಡಲಿ ಬಡವನಯ್ಯ, ಎನ್ನ ಕಾಲೇ ಕಂಬ, ದೇಹವೇ ದೇಗುಲ ಶಿರವೇ ಹೊನ್ನ ಕಳಸವಯ್ಯ...........' ಈ ವಚನವು ಅದನ್ನು ಮತ್ತಷ್ಟು ಬಲವಾಗಿ ಸಮರ್ಥಿಸುತ್ತದೆ. ದೇವರು ಶಾಶ್ವತವೆಂಬ ಕಲ್ಪನೆ ನಮ್ಮ ಪ್ರಾಚೀನರಲ್ಲಿತ್ತು. ಈ ಹಿನ್ನೆಲೆಯಲ್ಲಿಯೇ ದೇವರಿಗಾಗಿ ಕಟ್ಟುವ

ಕಟ್ಟಡ ಕೂಡ ಶಾಶ್ವತವಾಗಿರಬೇಕೆಂಬ ಆಶಯವನ್ನು ಮಾನವನು ಹೊಂದಿದ್ದಿರಬೇಕು. ಈ ಕಾರಣದಿಂದ ಬಹುಕಾಲ ಬಾಳಿಕೆ ಬರುವಂತಹ ದೇವಾಲಯಗಳನ್ನು ನಿರ್ಮಾಣಮಾಡುತ್ತಿದ್ದನು. ದೂರದೂರುಗಳಿಂದ ಶಿಲೆಗಳನ್ನು ತರಿಸಿಕೊಳ್ಳುತ್ತಿದ್ದರು. ದೇವಾಲಯ ಶಾಶ್ವತವಾಗಿ ಉಳಿಯಬೇಕೆನ್ನುವುದು ಒಂದೆಡೆಯಾದರೆ ಅದನ್ನು ಕಲಾತ್ಮಕವಾಗಿ ನಿರ್ಮಿಸುವುದು ಕೂಡಾ ಮಹತ್ವದ ಅಂಶವಾಗಿ ಬೆಳೆಯಿತು. ಈ ಕಾರಣದಿಂದ ವಿವಿಧ ಬಗೆಯ ಅಲಂಕಾರಗಳಿಂದ ದೇಗುಲಗಳ ವಾಸ್ತು ಮಾದರಿ ಹಾಗೂ ವಿನ್ಯಾಸಗಳಲ್ಲಿ ಕಾಲಕಾಲಕ್ಕೆ ಮತ್ತು ಪ್ರಾದೇಶಿಕವಾಗಿ ಮಾರ್ಪಡುತ್ತಾ ಬಂದಿವೆ. ಕರ್ನಾಟಕ ವಾಸ್ತುಶಿಲ್ಪ ಶೈಲಿಯಲ್ಲಿ ಅನೇಕ ಬಗೆಯ ಪ್ರಕಾರಗಳನ್ನು ಗುರುತಿಸಬಹುದು. ಕರ್ನಾಟಕವು ವಾಸ್ತುಶಿಲ್ಪ ಶೈಲಿಯ ಪ್ರಯೋಗಾಲಯವೇ ಆಗಿದೆ. ಇವರ ಮೊದಲ ಪ್ರಯೋಗಶಾಲೆ ಎಂದರೆ ಬಾದಾಮಿ ಚಾಲುಕ್ಯರ ಮನೆತನದ ಕಾಲಘಟ್ಟ. ಇವರನ್ನು ಕರ್ನಾಟಕದ ವಿಶಿಷ್ಟ ವಾಸ್ತುಶೈಲಿಯ ಆದ್ಯ ಪ್ರವರ್ತಕರೆಂದು ಕರೆಯಲಾಗಿದೆ. ಬಾದಾಮಿ ಚಾಲುಕ್ಯರ ಕಾಲದಲ್ಲಿ ಭಾರತದಲ್ಲಿ ವಿವಿಧೆಡೆ ಅಸ್ತಿತ್ವದಲ್ಲಿದ್ದ ಮೂರು ಮುಖ್ಯ ಶೈಲಿಗಳಾದ ನಾಗರ, ದ್ರಾವಿಡ ಮತ್ತು ವೇಸರ ಶೈಲಿಗಳ ದೇಗುಲಗಳನ್ನು ಕಟ್ಟಿಸಿ ಪ್ರಯೋಗಗಳನ್ನು ನಡೆಸಿರುವುದು ಕಂಡುಬರುತ್ತದೆ. ಪ್ರಸ್ತುತ ಅಧ್ಯಯನವು ದೇವಾಲಯಗಳನ್ನು ಕುರಿತಿದ್ದರೂ ಇದನ್ನು ಮುಖ್ಯವಾಗಿ ಆಡಳಿತಾತ್ಮಕ ಮತ್ತು ಪ್ರಾದೇಶಿಕ ಚೌಕಟ್ಟಿನಲ್ಲಿ ಅಭ್ಯಸಿಸುವ ಆಶಯವನ್ನು ಹೊಂದಲಾಗಿದೆ. ಕೊಪ್ಪಳವು ಅತ್ಯಂತ ಪ್ರಾಚೀನ ನಗರ. ಇತ್ತೀಚೆಗೆ ಅದು ಜಿಲ್ಲಾ ಕೇಂದ್ರವಾಗಿ ರಚನೆಯಾಗಿದೆ. ಪ್ರಕೃತ ಅಧ್ಯಯನವು ಒಳಗೊಂಡಂತೆ ಕೊಪ್ಪಳ ನಗರ ಮತ್ತು ಕಸಬಾ ಹೋಬಳಿಯಲ್ಲಿ ಕಂಡುಬರುವ ದೇವಾಲಯಗಳನ್ನು ಕುರಿತು ಅಧ್ಯಯನ ನಡೆಸಲಾಗಿದೆ. ಕೊಪ್ಪಳವು ಮೂಲತಃ ಪ್ರಾಚೀನ ನೆಲೆ ಆದಿಮಾನವನ ಕಾಲದಿಂದಲೂ ಅದು ಜನವಸತಿ ಪ್ರದೇಶವಾಗಿದೆ. ಕೊಪ್ಪಳ ಪ್ರದೇಶಕ್ಕೆ ಹೊಂದಿಕೊಂಡ ಅನೇಕ ಸ್ಥಳಗಳು ಪ್ರಾಚೀನವೆಂದು ಕಂಡುಬರುತ್ತವೆ. ಅವುಗಳಲ್ಲಿ ಹಿರೇಬೆನಕಲ್ಲು, ಆನೆಗುಂದಿ ಮಲ್ಲಾಪುರ, ಹಿಂದುರ್ಗಿ, ಅಂಜನಹಳ್ಳಿ, ಬಂಡಿಹರ್ಲಾಪುರ, ವೆಂಕಟಾಪುರ ಮೊದಲಾದವು ಸೇರಿಕೊಂಡಿವೆ. ಆನೆಗುಂದಿ ಪ್ರದೇಶವು ಹಂಪೆಯ ಪರಿಸರವನ್ನು ಒಳಗೊಂಡಂತೆ ರಾಮಾಯಣ ಕಾಲದಿಂದಲೂ ಪ್ರಸಿದ್ಧವಾಗಿದೆ. ಈ ಪ್ರದೇಶದಲ್ಲಿ ಕಿಷ್ಕಿಂದ ಪ್ರದೇಶ, ಅಂಯೋಧ್ಯೆ,

ಅಂಜನಾದ್ರಿ, ಶಬರಿಗುಹೆ, ಸೀತೆಯ ಸೆರಗು, ಸುಗ್ರೀವ ಗುಹೆಗಳು ರಾಮಾಯಣದ ಘಟನೆಗಳನ್ನು ಕಣ್ಮುಂದೆ ತರುತ್ತವೆ. ಈ ಸ್ಥಳಗಳನ್ನು ನಿರ್ದಿಷ್ಟವಾಗಿ ರಾಮಾಯಣ ಕಾಲದ ತಾಣಗಳೆಂದು ಒಪ್ಪಿಕೊಳ್ಳಲು ಕಷ್ಟಸಾಧ್ಯವಾದರೂ ರಾಮಾಯಣದ ದೃಶ್ಯಾವಳಿಗಳನ್ನು ಈ ಪ್ರದೇಶಕ್ಕೆ ಅನ್ವಯಿಸಿ ಪ್ರಾಚೀನ ನೆಲೆ ಎಂಬುದನ್ನು ಗುರುತಿಸಲು ಸಹಾಯ ಮಾಡುತ್ತವೆ. ಈ ಮೇಲಿನ ಘಟನೆಗಳ ಪುರಾಣ ಕಲ್ಪನೆಗಳನ್ನು ಬಿಚ್ಚಿದರೆ ಪ್ರಾಕ್ಚರಿತ್ರೆಯ ನೈಜತೆಯನ್ನು ಸ್ಪಷ್ಟಪಡಿಸುವ ಆದಿಮಾನವನ ಗುಹೆಗಳು, ಗುಹೆಯ ಬಂಡೆಗಲ್ಲುಗಳ ಮೇಲಿನ ರೇಖಾಚಿತ್ರಗಳು, ವರ್ಣಚಿತ್ರಗಳು, ಬೂದಿದಿಬ್ಬಗಳು, ಬೃಹತ್‌ಶಿಲಾಗೋರಿಗಳು, ಕುಡಿಕೆ ಮೊದಲಾದ ಕುಡಿಕೆಗಳು ಈ ಪ್ರದೇಶದಲ್ಲಿ ಕಂಡುಬರುತ್ತವೆ.

ಮೌರ್ಯರ ಕಾಲಘಟ್ಟದಲ್ಲಿ ಕೊಪ್ಪಳವು ಪ್ರಸಿದ್ಧ ನಗರವೆಂದು ಈ ಹಿಂದಿನಅಧ್ಯಾಯಗಳಲ್ಲಿ ಹೇಳಲಾಗಿದೆ. ಮೌರ್ಯಚಕ್ರವರ್ತಿ ಅಶೋಕ ಹಾಕಿಸಿದ ಬಂಡೆಶಾಸನಗಳಲ್ಲಿ ಎರಡು ಶಾಸನಗಳು ಕೊಪ್ಪಳದಲ್ಲಿ ದೊರೆತಿವೆ. ಅಶೋಕ ಬೌದ್ಧ ಧರ್ಮವನ್ನು ಸ್ವೀಕರಿಸಿ ಎರಡು ವರ್ಷಗಳ ತರುವಾಯ ಉಪಾಸಕನಾಗಿ ಒಂಬನೇ ವರ್ಷದ ನಂತರ ಧರ್ಮಪ್ರವರ್ತಕನಾಗಿ ಬರೆಸಿದ ಶಾಸನಗಳು ಇವಾಗಿವೆ. ಕೊಪ್ಪಳದ ಗವಿಮಠವು ಸೂಕ್ಷ್ಮವಾಗಿ ಅವಲೋಕಿಸಿದಲ್ಲಿ ಬೌದ್ಧ ಚೈತ್ಯಾಲಯವನ್ನು ನೆನಪಿಗೆ ತರುತ್ತದೆ. ಬೌದ್ಧ ಚೈತ್ಯಾಲಯದ ಆಕಾರದ ಗೂಡುಗಳು ಕೊಪ್ಪಳದ ಗವಿಮಠದಲ್ಲಿ ಸಿಗುತ್ತವೆ. ಆದರೆ ಗವಿಮಠವು ಪೂರ್ವದಲ್ಲಿ ಬೌದ್ಧ ಸ್ಥಳವಾಗಿತ್ತು ಎಂದು ಹೇಳಲು ಆಧಾರಗಳಿಲ್ಲದಿದ್ದರೂ ಆ ನಿಟ್ಟಿನಲ್ಲಿ ಊಹಿಸಬಹುದಾಗಿದೆ.

ಶಾತವಾಹನರ ಕಾಲದಲ್ಲಿ ಕೊಪ್ಪಳ ಜಿಲ್ಲೆಯು ಪ್ರಸಿದ್ಧ ವಾಣಿಜ್ಯ ಕೇಂದ್ರವಾಗಿ ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಅಲ್ಲಿ ಗೌತಮಿ ಪುತ್ರ ಶಾತಕರ್ಣಿ ಮತ್ತು ಶಾತವಾಹನರ ಮತ್ತೊಬ್ಬ ಅರಸು ಸಿರಿಶಾತಕರ್ಣಿ ಕಾಲದ್ದೆಂದು ಹೇಳಲಾದ ನಾಣ್ಯಗಳು ವಿಪುಲವಾಗಿ ದೊರೆತಿವೆ. ಆದರೆ ಶಾತವಾಹನರು ಯಾವುದೇ ಕಟ್ಟಡಗಳನ್ನು ಕಟ್ಟಿದರು ಎಂಬುದಕ್ಕೆ ಯಾವ ಆಧಾರಗಳೂ ಅಲ್ಲಿ ಸಿಗುವುದಿಲ್ಲ.

ಕದಂಬರ ಕಾಲದಲ್ಲಿ ಕೊಪ್ಪಳವು ನೇರವಾಗಿ ಮಯೂರಶರ್ಮನ ಆಳ್ವಿಕೆಗೆ ಒಳಪಟ್ಟಿತ್ತು. ಚಂದ್ರವಳ್ಳಿ ಶಾಸನದಲ್ಲಿ ಕೊಪ್ಪಳ ನಗರದ ಕುಪಣದ ಚಾಮನ ಬಗ್ಗೆ ಉಲ್ಲೇಖವಿದೆ. ಚಂದ್ರವಳ್ಳಿಯಲ್ಲಿ ದೊರೆಯುವ ಗವಿಮಠ ಮತ್ತು ಕೊಪ್ಪಳದ ಗವಿಮಠಕ್ಕೂ ಸಾಮ್ಯತೆ ಇರುವುದನ್ನು ಕಾಣಬಹುದು. ಏಕೆಂದರೆ ಎರಡು ದೇವಾಲಯಗಳು ಗವಿಗಳ ಅನತಿ ದೂರದಲ್ಲಿ ನಿರ್ಮಾಣವಾಗಿವೆ ಮತ್ತು ಚಂದ್ರವಳ್ಳಿಯಲ್ಲಿ ಕೊಪಣ ನಗರದ ಉಲ್ಲೇಖವಿದೆ. ಅಲ್ಲಿ ದೇವಾಲಯವನ್ನು ನಿರ್ಮಿಸಿದ ರೂವಾರಿ ಕೊಪಣದ ಚಾಮನೇ ಇರಬೇಕೆಂದು ಚಂದ್ರವಳ್ಳಿಯ ಶಾಸನದ ಮೇಲೆ ಹೊಸಬೆಳಕನ್ನು ಚೆಲ್ಲಿರುವ ಡಾ. ರಾಜಶೇಖರಪ್ಪನವರು ಒಂದೆಡೆ ತಿಳಿಸುತ್ತಾರೆ. ಆದರೆ ಕೊಪ್ಪಳದ ಪರಿಸರದಲ್ಲಿ ಕದಂಬರ ಯಾವ ಕಟ್ಟಡಗಳೂ ಕಟ್ಟಲ್ಪಟ್ಟಿರುವುದಕ್ಕೆ ಯಾವುದೇ ಆಧಾರಗಳಿಲ್ಲ.

ಕದಂಬರ ಬಳಿಕ ಕರ್ನಾಟಕದಲ್ಲಿ ಯಶಸ್ವಿಯಾಗಿ ಆಳ್ವಿಕೆನಡೆಸಿದವರು ಬಾದಾಮಿ ಚಾಲುಕ್ಯರು. ಇವರ ಕಾಲದಲ್ಲಿ ಭೇಟಿ ನೀಡಿದ್ದ ಚೀನಾದ ಪ್ರವಾಸಿ ಹ್ಯುಯೆನ್‌ತ್ಸಾಂಗ್‌ನು ಪುಲಕೇಶಿಯ ಸಾಮ್ರಾಜ್ಯದ ಹಲವು ಸ್ಥಳಗಳಿಗೆ ಭೇಟಿನೀಡಿದ್ದನು. ಅವನು ಹೆಸರಿಸಿದ ಸ್ಥಳಗಳಲ್ಲಿ ಕೊಂಕಿನಪುಲೊ ಇಂದಿನ ಕೊಪ್ಪಳ ಎಂಬುದು ವಿದ್ವಾಂಸರ ಅಭಿಮತವಾಗಿದೆ. ಹ್ಯುಯೆನ್‌ತ್ಸಾಂಗ್‌ನ ಕುರುಹೆಂದರೆ ಹಲಗೇರಿಯ ಶಾಸನ. ಇದನ್ನು ಕೆತ್ತಿಸಿದವನು ಅರಸು ವಿಜಯಾದಿತ್ಯ. ಹಲಗೆರೆ ಮತ್ತು ಕೊಪ್ಪಳಗಳಲ್ಲಿ ಬಾದಾಮಿ ಚಾಲುಕ್ಯರು ಅನೇಕ ದೇವಾಲಯಗಳನ್ನು ಕಟ್ಟಿಸಿದರೆಂಬ ಉಲ್ಲೇಖ ಶಾಸನಗಳಲಿ ಸಿಗುತ್ತವೆ. ಆದರೆ ಆ ಕಟ್ಟಡಗಳಾವುವು ಇಂದು ಸುಸ್ಥಿತಿಯಲ್ಲಿ ಉಳಿದಿಲ್ಲ. ಹೀಗಾಗಿ ಕೊಪ್ಪಳ ಪರಿಸರದಲ್ಲಿ ಅವರು ಶಾಸನಗಳನ್ನು ಪತ್ತೆಹಚ್ಚಿ ವಿಶ್ಲೇಷಿಸುವುದು ಕಷ್ಟಕರವಾಗಿದೆ. ಬಾದಾಮಿ ಚಾಲುಕ್ಯರ ಬಳಿಕ ಕರ್ನಾಟಕದಲ್ಲಿ ಅಧಿಕಾರಕ್ಕೆ ಬಂದವರು ರಾಷ್ಟ್ರಕೂಟರ ಅರಸರು. ಇವರಲ್ಲಿ ಪ್ರಮುಖ ಅರಸು ಅಮೋಘವರ್ಷನ ಕಾಲದಲ್ಲಿ ರಾಷ್ಟ್ರಕೂಟ ಸಾಮ್ರಾಜ್ಯದ ವ್ಯಾಪ್ತಿ ಕೊಪ್ಪಳವನ್ನು ಆವರಿಸಿಕೊಂಡಿತ್ತು ಎಂಬುದು ತಿಳಿದುಬರುತ್ತದೆ. ಇದನ್ನು ಅಂದು ಮಹಾಕೊಪಣವೆಂದು ಕರೆದಿದ್ದಾರೆ. ಕೊಪ್ಪಳ ಜಿಲ್ಲೆಯ ಪ್ರಾಚೀನ ದೇಗುಲವೆಂದರೆ ರಾಷ್ಟ್ರಕೂಟರ ಕಾಲದ ನಿರ್ಮಿತಿಗಳೆಂದೇ ಹೇಳಬೇಕು. ಈ ಕಾಲದ

ದೇಗುಲಗಳೆಂದರೆ, ಕರಮುಡಿಯ ಕಲ್ಲೇಶ್ವರ ಮತ್ತು ಕುಸುಮೇಶ್ವರ ಕಡೂರಿನಕಲ್ಲೇಶ್ವರ ಮುಧೋಳದ ಸಿದ್ದೇಶ್ವರ, ಹಲಗೇರಿಯ ಕಲ್ಲೇಶ್ವರ ಹಾಗೂ ಕುಕ್ಕನೂರಿನ ನವಲಿಂಗೇಶ್ವರ ದೇಗುಲಗಳ ಭಾಗಶಃ ಕಟ್ಟಡಗಳನ್ನು ರಾಷ್ಟ್ರಕೂಟರು ಕಟ್ಟಿದ್ದಾರೆ ಎಂಬುದು ಶಾಸನಗಳಲ್ಲಿ ಉಲ್ಲೇಕವಿದೆ. ಕ್ರಿ.ಶ. ೮೮೮ರ ಒಂದು ಶಾಸನದಲ್ಲಿ ರಾಷ್ಟ್ರಕೂಟರ ಮಹಾದಂಡನಾಯಕ ಬನವಾಸಿಯ ಕದಂಬರ ದಡಿಯಮರಸನು ಕೊಪ್ಪಳದಲ್ಲಿ ಜೈನಬಸದಿಯೊಮದನ್ನು ಕಟ್ಟಿಸಿ ಅದಕ್ಕೆ ಕಳಸಾರೋಹಣ ಮಾಡಿಸಿದನೆಂದು ಹೇಳಿದೆ. ಉಪ್ಪಿನ ಬೆಟಗೇರಿಯ ಮತ್ತೊಂದು ಶಾಸನವು ಶಂಕರಗಂಡನೆಂಬ ಅಧಿಕಾರಿ ಕೊಪ್ಪಳದಲ್ಲಿ ಜಯಧೀರ ಜಿನಾಲಯವನ್ನು ಕಟ್ಟಿಸಿದನು ಎಂದು ಹೇಳುತ್ತದೆ. ಇದಕ್ಕೆ ತಳವೃತ್ತಿಯಾಗಿ ರೊಟ್ಟಯ್ಯನು ಕುಕನೂರು ೩೦ ರ ಗ್ರಾಮದ ಭೂಮಿಯನ್ನು ದತ್ತಿ ಬಿಟ್ಟುದಾಗಿ ಹೇಳಿದ್ದಾನೆ. ರಾಷ್ಟ್ರಕೂಟರ ಕಾಲದ ದೇಗುಲಗಳು ಬಾದಾಮಿ ಚಾಲುಕ್ಯ ವಾಸ್ತುಶಿಲ್ಪಗಳಿಂದ ಹೆಚ್ಚು ಪ್ರಭಾವಿತವಾಗಿವೆ. ದೇಗುಲದ ತಳವಿನ್ಯಾಸ ಗೋಡೆ, ಮತ್ತು ಭಿನ್ನ ಅಲಂಕರಣೆಯ ಕಂಬಗಳು ರಾಷ್ಟ್ರಕೂಟರ ಕಾಲದ ವಾಸ್ತುಶಿಲ್ಪದ ಪ್ರಮುಖ ಲಕ್ಷಣಗಳು. ಇವರು ದೇವಾಲಯ ಕಟ್ಟಲು ಮರಳು ಮಿಶ್ರಿತ ಕೆಂಪು ಶಿಲೆಯನ್ನು ಹೆಚ್ಚಾಗಿ ಬಳಸಿಕೊಂಡಿದ್ದರೆಂದು ಕಣಶಿಲೆಯನ್ನು ಅಲ್ಲಲ್ಲಿ ಉಪಯೋಗಿಸಿರುವುದು ತಿಳಿದುಬರುತ್ತದೆ. ಕಡೂರಿನ ಕಲ್ಲೇಶ್ವರ ದೇವಾಲಯ ಸರಳವಾಗಿದ್ದು ಗರ್ಭಗೃಹವನ್ನು ಮಾತ್ರ ಹೊಂದಿದೆ. ಉಳಿದ ಭಾಗಗಳು ಭಗ್ನಗೊಂಡಿವೆ. ಎತ್ತರದ ಅಧಿಷ್ಠಾನದ ಮೇಲೆ ಕಟ್ಟಲಾದ ದೇವಸ್ಥಾನ ಇದಾಗಿದೆ. ಕರಮುಡಿಯ ಕುಸುಮೇಶ್ವರ ಮತ್ತು ಕಲ್ಲೇಶ್ವರ ದೇವಾಲಯಗಳ ಗರ್ಭಗುಡಿಯ ಪ್ರವೇಶದ್ವಾರಗಳು ವಿವಿಧ ಅಲಂಕರಣೆಯನ್ನು ಹೊಂದಿವೆ. ಅರೆಗಂಭ, ಮುಂಚಾಚಿದ ಪಟ್ಟಿಕೆ ಹಾಗೂ ಇಳಿಬಿದ್ದ ಪದ್ಮಗಳ ಅಲಂಕಾರ ಚಿತ್ರಗಳಿವೆ. ಮುಧೋಳದ ಸಿದ್ಧೇಶ್ವರ ದೇಗುಲದ ಕಂಬಗಳು ವೈಶಿಷ್ಟ್ಯಪೂರ್ಣವಾಗಿವೆ. ಇವು ಕೆಳಗೆ ಚಚ್ಚೌಕ ಪೀಠವನ್ನು ಹೊಂದಿದ್ದು ೧೬ ಮುಖದ ದಿಂಡುಗಳನ್ನು ಹೊಂದಲಾಗಿದೆ. ಅವುಗಳಲ್ಲಿ ಹೂವಿನ ಎಸಳು ಮತ್ತು ವಜ್ರಾಕಾರದ ಕೆತ್ತನೆಗಳು ಕಂಡುಬರುತ್ತವೆ. ಮೇಲೆ ವೃತ್ತಾಕಾರದ ಫಲಕ ಮತ್ತು ಬೋದಿಗೆಗಳಿವೆ. ಈ ಬೋದಿಗೆಗಳ ಮೇಲಿನ ಅಭ್ಯಾಕರ್ಸ್‌ನಲ್ಲಿ ಶಿವ ಮತ್ತು ವಿಷ್ಣುವಿನ ಅವತಾರಗಳು, ಮಿಥುನಶಿಲ್ಪ ಮತ್ತು ಹೂಬಳ್ಳಿಗಳ ಕೆತ್ತನೆಯಿದೆ. ಇದರ ನಾಲ್ಕೂ ಮೂಲೆಗಳಲ್ಲಿ ನೆಗೆಯುತ್ತಿರುವ ಆನೆಯ ಚಿತ್ರಗಳನ್ನು ಚಿತ್ರಿಸಲಾಗಿದೆ.

ಕುಕನೂರಿನ ನವಲಿಂಗೇಶ್ವರದ ಕೆಲಭಾಗ ರಾಷ್ಟ್ರಕೂಟರ ಕಾಲದಲ್ಲಿ ನಿರ್ಮಾಣವಾಗಿದೆ. ಕಂಬಗಳು ಮತ್ತು ಬಾಗಿಲ ತೋರಣಗಳು ತುಂಬಾ ಅಲಂಕಾರದಿಂದ ಕೂಡಿದ್ದು ಸುಂದರವಾಗಿ ಕಾಣಿಸುತ್ತವೆ. ಕೊಪ್ಪಳ ಪ್ರದೇಶವನ್ನು ಅವಲೋಕಿಸಿದರೆ ರಾಷ್ಟ್ರಕೂಟರು ಶೈವಧರ್ಮಕ್ಕೆ ವಿಶೇಷ ಪ್ರೋತ್ಸಾಹವನ್ನು ಹಾಗೂ ಜೈನಧರ್ಮಕ್ಕೆ ಪೋಷಣೆಯನ್ನು ನೀಡಿದ್ದರೆಂಬುದು ಕಂಡುಬರುತ್ತದೆ.

ರಾಷ್ಟ್ರಕೂಟರ ಆಳ್ವಿಕೆಯಲ್ಲಿ ಗಂಗರ ಪಾತ್ರ ತುಂಬಾ ಹಿರಿದು. ಗಂಗರು ಇವರ ಮಾಂಡಲಿಕರಾಗಿದ್ದು ಕೊಪ್ಪಳ ಜಿಲ್ಲೆಯಲ್ಲಿ ಅನೇಕ ಶಾಸನಗಳನ್ನು ಕೆತ್ತಿಸಿರುವರು. ಕ್ರಿ.ಶ. ೯೩೯ರ ಶಾಸನವು, ರಾಷ್ಟ್ರಕೂಟರ ಮುಮ್ಮಡಿ ಕೃಷ್ಣನು ತುಂಗಭದ್ರಾನದಿಯ ಉತ್ತರ ಭಾಗದ ಎಡದೊರೆ ೨೦೦೦, ಬೆಳ್ವೊಲ ೩೦೦, ಮಾಸವಾಡಿ ೧೪೦, ಕುಕನೂರು ೩೦, ಕೆಳವಾಡಿ ೩೦ರ ಪ್ರದೇಶಗಳನ್ನು ಗಂಗರ ಬೂತುಗನಿಗೆ ನೀಡಿದಾಗಿ ಹೇಳುತ್ತದೆ. ಗಂಗರು ಜೈನಧರ್ಮಕ್ಕೆ ವಿಶೇಷ ಪ್ರೋತ್ಸಾಹವನ್ನು ನೀಡಿ ಅದನ್ನು ಬೆಳೆಸಿದರು. ಶ್ರವಣಬೆಳಗೊಳದಲ್ಲಿ ಕೆತ್ತಲ್ಪಟ್ಟ ಮೇರು ಗೊಮ್ಮಟೇಶ್ವರನ ವಿಗ್ರಹವೇ ಅದಕ್ಕೆ ಸಾಕ್ಷಿ. ಗಂಗರ ಕಾಲದಲ್ಲಿ ಕೊಪ್ಪಣವು ಪವಿತ್ರ ಜೈನಕೇಂದ್ರಗಳಲ್ಲೊಂದಾಗಿತ್ತು. ಗಂಗವಂಶದ ಅನೇಕರು ಕೊಪ್ಪಳಕ್ಕೆ ಬಂದು ಜಿನದೀಕ್ಷೆ ಪಡೆದು ಸುಗತಿಯನ್ನು ಹೊಂದಿದ್ದ ವಿಷಯವನ್ನು ನಿಷಿಧಿಕಲ್ಲುಗಳು ಮತ್ತು ಅವುಗಳ ಮೇಲೆ ಕೆತ್ತಲ್ಪಟ್ಟ ಶಾಸನಗಳಿಂದ ವ್ಯಕ್ತವಾಗುತ್ತದೆ. ಗಂಗರಾಜ ಬೂತುಗನು ಪತ್ನಿ ಪದ್ಮಬ್ಬೆ, ಗಂಗ ಎರೆಯಂಗನ ಮಗಳಾದ ಗೋನಂಬೆಕಂತಿ, ಮಾರಸಿಂಗನ ತಂಗಿ ಚಜ್ಜಬ್ಬರಸಿ, ಚಂದಬ್ಬರಸಿ ಮೊದಲಾದವರು ಕೊಪ್ಪಳಕ್ಕೆ ಬಂದು ಸುಗತಿಯನ್ನು ಹೊಂದಿರುವರು. ಕೊಪ್ಪಳವು ಮೂಲತಃ ಜೈನಧರ್ಮದ ಪ್ರಸಿದ್ಧ ತಾಣವಾಗಿದ್ದುದಂತೂ ಈ ಮೇಲಿನ ಆಕರದಿಂದ ಸ್ಪಷ್ಟವಾಗುತ್ತದೆ. ಕೊಪ್ಪಳವನ್ನು ಗಂಗರ ಕಾಲದಲ್ಲಿ ಬಸದಿಗಳ ಬೀಡು ಎಂದು ಕರೆಯಲಾಗಿತ್ತು. ಅಲ್ಲಿ ಸುಮಾರು ೭೭೨ ಬಸದಿಗಳಿದ್ದವೆಂದು ತಿಳಿದುಬರುತ್ತದೆ. ಶ್ರವಣಬೆಳಗೊಳವನ್ನು ಹೊರತುಪಡಿಸಿದರೆ ಕೊಪ್ಪಳವು ಜೈನರ ಪ್ರಮುಖ ನೆಲೆಯಾಗಿದೆ. ಇದು ಜೈನರ ದಕ್ಷಿಣದ ಕಾಶಿ ಎಂದು ಪ್ರಸಿದ್ಧಿಯಾಗಿದೆ. ಇಲ್ಲಿನ ಜೈನ ಸ್ಮಾರಕಾವಶೇಷಗಳು ಗಂಗರ ಕಾಲದಿಂದ ಲಭ್ಯವಾಗುತ್ತವೆ. ನಿಷಿಧಿಕಲ್ಲುಗಳು ಗಂಗರಾಜರ ಶಾಸನಗಳು

ದೊರೆಯುತ್ತವೆ. ಆದರೆ ಕೊಪ್ಪಳದಲ್ಲಿ ಗಂಗರು ಕಟ್ಟಿಸಿದ ಬಸದಿಗಳು ಒಂದೂ ಸುಸ್ಥಿತಿಯಲ್ಲಿ ಉಳಿದಿಲ್ಲ. ಈ ಹಿನ್ನೆಲೆಯಲ್ಲಿ ಅವರ ವಾಸ್ತುಶಿಲ್ಪದ ಪರಿಚಯ ನಮಗಾಗದು. ಶಾಸನದಲ್ಲಿ ಕಂಡುಬರುವ ಜಯಧೀರ ಜಿನಾಲಯ, ಪುಷ್ಪದಂತ ತೀರ್ಥಂಕರ ಸೌಧ, ಕುಷಜಿನಾಲಯ, ಸಾಂತಲದೇವಿ ಬಸದಿ, ಚಂದ್ರನಾಥ ಬಸದಿ, ನೇಮಿನಾಥ ಬಸದಿ, ಶಾಂತಿನಾಥ ಬಸದಿ, ಕಲ್ಯಾಣಕೀರ್ತಿ ಬಸದಿ, ಸಿಂಹನಂದಿ ಬಸದಿ, ತೀರ್ಥದ ಬಸದಿ, ತಿಮ್ಮಂಬರಸಿಯ ಬಸದಿ, ತೆಂಕಲರಸಿಯ ಬಸದಿ ಇನ್ನೂ ಮುಂತಾದವುಗಳು ಗಂಗರ ಕಾಲದಲ್ಲಿ ಕಟ್ಟಲ್ಪಟ್ಟಿವೆ ಎಂಬುದಕ್ಕೆ ಅಲ್ಲಲ್ಲಿ ಶಾಸನಗಳ ಉಲ್ಲೇಖಗಳಿವೆ. ಆದರೆ ಈಗ ಉಳಿದಿರುವ ಪ್ರಮುಖ ಬಸದಿಯೆಂದರೆ ಪಾರ್ಶ್ವನಾಥತೀರ್ಥಂಕರರ ಪಂಚಕೂಟ ಬಸದಿಯಾಗಿದೆ. ಆದರೆ ಈ ಎಲ್ಲಾ ಬಸದಿಗಳು ಮುಂದೆ ದೇವಾಲಯಗಳಾಗಿ ಮಾರ್ಪಟ್ಟಿವೆ. ಇವುಗಳಲ್ಲಿ ಕೊಪ್ಪಳದ ಗವಿಮಠ, ವೆಂಕಟರಮಣ, ಬಾಲಕೃಷ್ಣ, ಅಮೃತೇಶ್ವರ ಮೊದಲಾದ ದೇವಾಲಯಗಳು ಹಿಂದೆ ಜಿನಾಲಯಗಳಾಗಿದ್ದವು. ವೀರಶೈವ ಧರ್ಮ ಅಸ್ತಿತ್ವಕ್ಕೆ ಬಂದ ನಂತರ ಶೈವದೇವಾಲಯಗಳಾಗಿ ಪರಿವರ್ತನೆಯಾದವು.

ರಾಷ್ಟ್ರಕೂಟರ ನಂತರ ಕರ್ನಾಟಕದಲ್ಲಿ ಅಧಿಕಾರ ಗದ್ದುಗೆಯೇರಿದ ಅರಸುಮನೆತನ ಕಲ್ಯಾಣ ಚಾಲುಕ್ಯರದು. ಈ ಅವಧಿಯನ್ನು ದೇಗುಲ ನಿರ್ಮಿತಿಯ ಸುವರ್ಣ ಕಾಲವೆಂದು ಗುರುತಿಸಲಾಗಿದೆ. ಇವರ ಕಾಲದಲ್ಲಿ ನಿರ್ಮಾಣಗೊಂಡ ದೇವಾಲಯಗಳು ಕರ್ನಾಟಕದ ಬೇರಾವ ಅರಸುಮನೆತನದ ಅವದಿಯಲ್ಲೂ ರಚನೆಯಾಗಿರುವುದಿಲ್ಲ. ಕೊಪ್ಪಳ ಜಿಲ್ಲೆಯಲ್ಲಿ ಕಲ್ಯಾಣಿ ಚಾಲುಕ್ಯರ ಕಾಲದ ಅನೇಕ ದೇವಾಲಯಗಳು ಕಂಡುಬಂದಿವೆ. ಇವರ ಕಾಲದ ದೇವಾಲಯಗಳಿಗೆ ಕಪ್ಪುಮಿಶ್ರಿತ ನೀಲಿ ಛಾಯೆಯ ಬಳಪದ ಕಲ್ಲನ್ನು ಬಳಸಿದ್ದಾರೆ. ಉಳಿದ ಕಡೆ ಈ ಶಿಲೆಯ ಅಭಾವದಿಂದ ಸ್ಥಳೀಯವಾಗಿ ಅಲ್ಲಲ್ಲಿ ದೊರೆಯುವ ಕೆಂಪು ಮರಳುಶಿಲೆ ಹಾಗೂ ಕಣಶಿಲೆಗಳಲ್ಲಿ ದೇವಾಲಯಗಳನ್ನು ನಿರ್ಮಿಸಿರುವರು. ಇವರು ಬಾದಾಮಿ ಚಾಲುಕ್ಯ ಹಾಗೂ ರಾಷ್ಟ್ರಕೂಟ ಕಾಲದ ವಾಸ್ತುಶೈಲಿಯನ್ನು ಅಳವಡಿಸಿಕೊಂಡಿದ್ದು ತಮ್ಮದೇ ಆದ ಸೂಕ್ಷ್ಮ ಕೆತ್ತನೆಗಳನ್ನು ಮೈಗೂಡಿಸಿಕೊಂಡಿದ್ದರು. ಈ ಕಾಲದ ರಚನೆಗಳಲ್ಲಿ ಏಕಕೂಟ, ದ್ವಿಕೂಟ, ತ್ರಿಕೂಟ, ಪಂಚಕೂಟ ಹಾಗೂ ನವಕೂಟ ದೇಗುಲಗಳು ಕೊಪ್ಪಳ

ಪ್ರದೇಶದಲ್ಲಿ ಕಂಡುಬರುತ್ತವೆ. ಕಲ್ಯಾಣಿ ಚಾಲುಕ್ಯರ ದೇವಾಲಯಗಳ ವೈಶಿಷ್ಟ್ಯಗಳೆಂದರೆ ಅಲಂಕೃತ ದ್ವಾರಗಳು, ಸೂಕ್ಷ್ಮ ಕೆತ್ತನೆಯ ಕಂಬಗಳು, ನವರಂಗದ ಮೇಲಿನ ಭುವನೇಶ್ವರಿ, ಉಪಾನ, ಜಗತಿ, ಕಂಠ, ಕುಮುದಗಳುಳ್ಳ ಅಧಿಷ್ಠಾನಗಳು ಮುಖ್ಯವಾಗಿವೆ. ದೇವಾಲಯಗಳ ಗೋಡೆಗಳು ಸರಳವಾಗಿಯೂ ಮತ್ತು ಕೆಲವೆಡೆ ಅರೆಗಂಭಗಳು ಇವೆ. ಕೋಷ್ಟಕಗಳನ್ನೊಳಗೊಂಡಿದ್ದ ಹಿಂಬೆಣೆ ಮತ್ತು ಮುಂಬೆಣೆಗಳನ್ನು ನೋಡಬಹುದು. ಗರ್ಭಗೃಹದ ಮೇಲ್ಭಾಗದ ಶಿಖರವು ದ್ರಾವಿಡ ಮತ್ತು ನಾಗರಗಳ ಸಮ್ಮಿಲನವಾದ ವೇಸರ ಮಾದರಿಯಲ್ಲಿ ಹೆಚ್ಚಾಗಿ ಬಳಕೆಗೊಂಡಿವೆ. ಶಿಖರದ ಮುಂದೆ ಅಂತರಾಳದ ಮೇಲೆ ಗಿಳಿಯ ಕೊಕ್ಕಿನೋಪಾದಿಯಲ್ಲಿ ಮುಂಚಾಚಿದ ಸುಕನಾಸಿಯನ್ನು ಕಾಣಬಹುದು. ಕಲ್ಯಾಣಿ ಚಾಲುಕ್ಯರ ಹೆಚ್ಚು ದೇವಾಲಯಗಳು ಏಕಕೂಟ ದೇವಾಲಯಗಳಾಗಿವೆ. ಅಳವಂಡಿ, ಇಳಕಲ್‌ಗಡ, ಉಪ್ಪಿನ ಬೆಟಗೇರಿ, ಕವಲೂರು, ಕೊಪ್ಪಳ, ಗೊಂಡಬಾಳ, ಹಿರೇಸಿಂದೋಗಿ, ಮಾದಿನೂರು, ಹಲಗೇರಿ, ಅಂಟರಠಾಣ, ಪುರ್ತಗೇರಿ, ಹುಲುಕೇರಿ, ತಾವರಗೆರೆ, ಕುಷ್ಠಗಿ, ಇಟಗಿ, ಕುಕನೂರು ಮುಧೋಳು, ಚಾದಲಿಂಗ, ಸಂಕಾನೂರು, ಆನೆಗೊಂದಿ ಮೊದಲಾದ ಸ್ಥಳಗಳಲ್ಲಿ ಇವರ ದೇವಾಲಯಗಳನ್ನು ಕಾಣಬಹುದು. ಏಕಕೂಟ ದೇವಾಲಯಗಳು ಒಂದು ಗರ್ಭಗೃಹವನ್ನು ಹೊಂದಿರುತ್ತವೆ. ಜೊತೆಗೆ ಅಂತರಾಳ ಮತ್ತು ಸಭಾ ಮಂಟಪಗಳು ಇರುತ್ತವೆ. ದ್ವಿಕೂಟ ದೇಗುಲಗಳು ಎರಡು ಗರ್ಭಗೃಹಗಳನ್ನು ಹೊಂದಿರುತ್ತವೆ. ತ್ರಿಕೂಟ ದೇವಾಲಯಗಳು ಹೆಚ್ಚಾಗಿ ಇವರ ಕಾಲದಲ್ಲಿ ನಿರ್ಮಾಣಗೊಂಡಿವೆ. ಇವು ಒಂದೇ ಸಾಲಿನಲ್ಲಿರಬಹುದು ಅಥವಾ ಮುಖ್ಯ ಗರ್ಭಗೃಹದ ಹಾಗೂ ಅದರ ಎಡ ಬಲ ಬದಿಯಲ್ಲಿ ಒಂದಕ್ಕೊಂದು ಎದುರಾಗಿ ಕಟ್ಟಿದ ಗರ್ಭಗೃಹಗಳಾಗಿರಬಹುದು. ಈ ಕಾಲದ ತ್ರಿಕೂಟದೇವಾಲಯಗಳೆಂದರೆ ಕುಕನೂರಿನ ಚಳ್ಳೇಶ್ವರ, ಪುರ್ತಗೇರಿಯ ತ್ರಿಕೂಟೇಶ್ವರ, ಅಂಟರಠಾಣದ ಮೌನೇಶ್ವರ, ತಾವರಗೆರೆಯ ವೈಜನಾಥ, ಕವಲೂರಿನ ಯತೀಶ್ವರ ದೇವಾಲಯಗಳಾಗಿವೆ. ಈ ಮೂರು ಗರ್ಭಗೃಹಗಳ ಮೇಲೂ ಇವು ಶಿಖರಗಳನ್ನು ಹೊಂದಿರುತ್ತವೆ. ಕೊಪ್ಪಳದ ಪ್ರದೇಶದಲ್ಲಿ ಚತುಷ್ಕೂಟ ದೇವಾಲಯಗಳು ಕಂಡು ಬಂದಿಲ್ಲ. ಆದರೆ ಪಂಚಕೂಟ ದೇವಾಲಯಗಳನ್ನು ಕಾಣಬಹುದು. ಇದಕ್ಕೆ ಮುಖ್ಯ ಉದಾಹರಣೆಯೆಂದರೆ ಕೊಪ್ಪಳದ ಪಾರ್ಶ್ವನಾಥ ಬಸದಿ. ಇದು ಐದು ಗರ್ಭಗೃಹಗಳನ್ನು ಹೊಂದಿದೆ

ಹೊಂದಿತ್ತು. ಆದರೆ ಈಗ ನಾಲ್ಕು ಮಾತ್ರ ಉಳಿದಿವೆ. ಈ ಗರ್ಭಗೃಹಗಳಲ್ಲಿ ಮೂರು ಸಮಾನಾಂತರದ ಒಂದೇ ಸಾಲಿನಲ್ಲಿವೆ. ನಂತರ ಸಭಾಮಂಟಪ, ಅದರ ಮುಂದೆ ಇನ್ನೊಂದು ಸಭಾಮಂಟಪ ಅದರ ಉತ್ತರ ದಕ್ಷಿಣಕ್ಕೆ ಎದುರಾಗಿ ಎರಡು ಗರ್ಭಗೃಹಗಳಿವೆ. ಈ ಐದು ಗರ್ಭಗೃಹಗಳಲ್ಲಿ ಹಿಂದೆ ಜೈನತೀರ್ಥಂಕರರ ಶಿಲ್ಪಗಳನ್ನು ಪ್ರತಿಷ್ಠಾಪಿಸಲಾಗಿತ್ತು. ಆದರೆ ಈಗ ಜೈನ ತೀರ್ಥಂಕರರ ಶಿಲ್ಪಗಳು ಮೂರು ಗರ್ಭಗೃಹದಲ್ಲಿ ಮಾತ್ರ ಉಳಿದಿವೆ. ಪಂಚಕೂಟವನ್ನು ಹೊರತುಪಡಿಸಿದರೆ, ಈ ಭಾಗದಲ್ಲಿ ದೊರೆಯುವ ಅಪರೂಪದ ದೇಗುಲ ಕುಕನೂರಿನ ನವಲಿಂಗೇಶ್ವರ. ಇದು ಒಟ್ಟು ಒಂಬತ್ತು ಗರ್ಭಗೃಹಗಳನ್ನು ಹೊಂದಿದ್ದು ಅವುಗಳ ಮೇಲೆ ಶಿಖರವನ್ನು ಹೊಂದಿದೆ. ಇದು ಕರ್ನಾಟಕದಲ್ಲಿಯೇ ಬಹು ಅಪರೂಪವಾದ ವಿಶಿಷ್ಟ ಕಟ್ಟಡ. ರಾಷ್ಟ್ರಕೂಟರ ಕಾಲದಲ್ಲಿ ಆರಂಭಗೊಂಡು ಕಲ್ಯಾಣಿ ಚಾಲುಕ್ಯರ ಅವಧಿಯಲ್ಲಿ ವಿಸ್ತಾರ ಹೊಂದಿದ ದೇವಾಲಯ ಇದಾಗಿದೆ.

ಕಲ್ಯಾಣಿ ಚಾಲುಕ್ಯರು ದೇವಾಲಯಗಳನ್ನು ಕಟ್ಟಿಸಿ ದಾನದತ್ತಿಗಳನ್ನು ನೀಡಿದ ಅನೇಕ ಶಾಸನಗಳು ಕೊಪ್ಪಳದಲ್ಲಿ ದೊರೆತಿವೆ. ಇವರ ಆಳ್ವಿಕೆಯನ್ನು ಕೊಪ್ಪಳ ಪ್ರದೇಶದಲ್ಲಿ ಸೂಚಿಸುವ ಮೊದಲ ಶಾಸನ ಕ್ರಿ.ಶ. ೯೭೩ರ ಮಾದಿನೂರಿನ ಶಾಸನವಾಗಿದೆ. ಇದರಲ್ಲಿ ಮಾದಿನೂರನ್ನು ಬ್ರಾಹ್ಮಣದ್ವೇದಿ ಚಟ್ಟೋಪಾಧ್ಯಾಯನು ದಾನವಾಗಿ ಪಡೆದು ಶಿವ ವಿಷ್ಣು ಮತ್ತು ಸೂರ್ಯರನ್ನೊಳಗೊಂಡ ತ್ರೈಪುರುಷ ದೇವಾಲಯವನ್ನು ಕಟ್ಟಿಸಿದನೆಂದು ತಿಳಿದುಬರುತ್ತದೆ. ಶಾಸನದಲ್ಲಿ ಹೇಳುವಂತೆ ಮಾದಿನೂರು ಗ್ರಾಮವು ಒಂದು ಪ್ರಸಿದ್ಧ ಅಗ್ರಹಾರವಾಗಿದ್ದಿತು. ಈ ಮೇಲೆ ಹೇಳುವ ತ್ರೈಪುರುಷ ದೇವಾಲಯವು ಈಗ ಉಳಿದಿಲ್ಲವಾದರೂ ಆ ಕಾಲದ ಕೆಲವು ಅವಶೇಷಗಳನ್ನು ಇಲ್ಲಿ ಗುರುತಿಸಬಹುದಾಗಿದೆ. ಕುಕನೂರಿನ ಶಾಸನವೊಂದರಲ್ಲಿ ಈಶ್ವರ ಶೆಟ್ಟಿಯು ಹೊಸಮಠದ ಚೋಳಪಂಡಿತನ ಶಿಷ್ಯ ಅಗಸ್ತೀಜಿಯನ ಕಾಲನ್ನು ತೊಳೆದು, ಎರಡು ದೇವಾಲಯಗಳಿಗೆ ಕಳಸವನ್ನಿಟ್ಟ ಮುಖಶಾಲೆಯನ್ನು ಕಟ್ಟಿಸಿ ಮಂಟಪದ ಪರಿಸೂತ್ರ ನಿರ್ವಹಣೆಗಾಗಿ ಮೂರು ಗದ್ಯಾಣಗಳನ್ನು ನೀಡಿದ್ದನು. ಇದೇ ಶಾಸನವು ಗವರೇಶ್ವರ ದೇವಾಲಯವನ್ನು ಕುರಿತು ಹೇಳುತ್ತದೆ. ಕೊಪ್ಪಳದ ಕ್ರಿ.ಶ. ೧೧೦೮ರ ಒಂದು ಶಾಸನವು ಬಿಚ್ಚಕುಂದೆ ಗ್ರಾಮದಲ್ಲಿ

ಸಾಮಿಕುಮಾರ ಎಂಬುವನು ನಾಗದೇವ ಬಸದಿಯನ್ನು ಕಟ್ಟಿಸಿದುದಾಗಿ ತಿಳಿದುಬರುತ್ತದೆ. ಈ ನಾಗದೇವನು ಅತ್ತಿಮಬ್ಬೆಯ ಪತಿಯಾಗಿರುವನು. ಅವನ ಹೆಸರಿನಲ್ಲಿ ಈ ಬಸದಿ ಕಟ್ಟಲಾಯಿತೆಂಬುದನ್ನು ಗಮನಿಸಬಹುದು. ಈತನ ಹೆಸರಿನಲ್ಲಿ ನಾಗದೇವನ 'ಸವಣ್ಣಾದಗಡಿಂಬ' ಎಂಬ ಅಳತೆಗೋಲು ಇದ್ದುದು ಶಾಸನದಿಂದ ತಿಳಿದುಬರುತ್ತದೆ. ಕ್ರಿ.ಶ.೧೦೨೪ರ ಗೋತಗಿಯ ಒಂದು ಶಾಸನವು ಎರಡನೆಯ ಜಯಸಿಂಹನಿಗೆ ಸೇರಿದ್ದು. ಈತನ ಪತ್ನಿ ಪದ್ಮಳಾದೇವಿಯು ಕರಡಿಕಲ್ಲು ೩೦೦ ಗೋವಂತಿಗೆಯಲ್ಲಿದ್ದ ಕಲಿದೇವಸ್ವಾಮಿಗೆ ೪೫೦ ಕಮ್ಮ ಭೂಮಿ ೪೫೦ ಕಮ್ಮ ತೋಟ ಒಟ್ಟು ೫೫ ಮತ್ತರುಗಳನ್ನು ದಾನ ನೀಡಿದ್ದಳು. ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಸೂರ್ಯನ ಆರಾಧನೆ ಹೆಚ್ಚಿದ್ದುದು ಹಲಗೇರಿಯ ಆದಿತ್ಯ ಹಾಗೂ ಮಾದಿನೂರಿನ ತ್ರೈಪುರುಷ ದೇಗುಲದ ಸೂರ್ಯನ ಉಲ್ಲೇಖದಿಂದ ದೃಢಪಡುತ್ತದೆ. ೧೦೬೧ರ ಅಳವಂಡಿಯ ಒಂದು ಶಾಸನವು ಕರುವಗುಲ್ಗಿ ಮಯ್ಯನೆಂಬ ವ್ಯಕ್ತಿ ತೋಟ, ಬಾವಿ, ಕಲ್ಲದೇವಾಲಯ, ಛತ್ರ, ಛತ್ರದ ಮನೆ ಹಾಗೂ ಶ್ರೀ ಬಾಗಿಲನ್ನು ನಿರ್ಮಿಸಿದ್ದುದಾಗಿ ತಿಳಿದುಬರುತ್ತದೆ. ಅವನು ಕಟ್ಟಿಸಿದ್ದ ಕಲ್ಲೇಶ್ವರ ದೇವಾಲಯವು ಇಂದು ಗುಲಗೇಶ್ವರ ದೇವಾಲಯವಾಗಿದೆ. ಇದೇ ಗ್ರಾಮದಲ್ಲಿ ಚಾವರಾಜನು ಕೇಶವ ದೇವಾಲಯ, ಅರವಟಿಗೆ, ಅಗ್ಗಿಷ್ಟಿಕೆಗಳನ್ನು ಮಾಡಿಸಿದ್ದನು. ಇವನ ಮೊಮ್ಮಗ ಕೇಶವದೇವನು ೧೦೫೨ರಲ್ಲಿ ಕೇಶವ ದೇವಾಲಯಕ್ಕೆ ಅಂಗಭೋಗ, ಪುರಾಣ, ಚೈತ್ರ ಪವಿತ್ರ ಮಾಲೆಗಾರರಿಗೆಂದು ಭೂಮಿಯನ್ನು ಹಾಗೂ ೧೭೨ ಗದ್ಯಾಣ ಹೊನ್ನನ್ನು ಬಡ್ಡಿಗಾಗಿ ನೀಡಿ ಅದರಿಂದ ಬಂದ ಹಣವನ್ನು ದೇವಾಲಯದ ನಿರ್ಮಾಣಕ್ಕೆ ನೀಡಿದ್ದನೆಂದು ತಿಳಿದುಬರುತ್ತದೆ.

ಕ್ರಿ.ಶ. ೧೦೮೨ರಲ್ಲಿ ಪೆರ್ಮಾಡಿ ದೇವರಸನು ಅಂಟರಠಾಣಾದ ಜಂಬುನಾಥ ದೇವರಿಗೆ ಅಂಗಭೋಗ ನೈವೇದ್ಯಗಳಿಗೆ ದಾನವೆಂದು ಗ್ರಾಮದ ಪ್ರಮುಖರ ಸಮ್ಮುಖದಲ್ಲಿ ದಾನ ನೀಡಿದ್ದನು. ಈ ದೇಗುಲ ಇಂದಿಗೂ ಸುರಕ್ಷಿತವಾಗಿ ಉಳಿದಿದೆ. ಇದು ಗರ್ಭಗೃಹ, ಅಂತರಾಳ, ಸಭಾಮಂಟಪಗಳಿಂದ ಕೂಡಿದ್ದು ನೆಲಮಟ್ಟದಲ್ಲಿದೆ. ಈ ಕಾಲದಲ್ಲಿ ಹುಲಿಗಿಯು ಒಂದು ಪವಿತ್ರ ಸ್ಥಳವಾಗಿದ್ದಿತು. ಕ್ರಿ.ಶ. ೧೦೮೪ರಲ್ಲಿ ಚೌವೇದಿ ಭಟ್ಟನು ಹುಲಿಗಿ ಎಂಬ ಪುರವನ್ನು ಆರನೆಯ ವಿಕ್ರಮಾದಿತ್ಯನಿಂದ ಪಡೆದಿದ್ದನು.

ಇವನ ಮಗ ಸೋಮನಾಥನು ಶಿವದೇಗುಲವನ್ನು ನಿರ್ಮಿಸಿದ್ದಾನೆ. ಸೋಮನಾಥ ದೇವಾಲಯದ ಆವರಣದಲ್ಲಿರುವ ನಾಲ್ಕು ಶಾಸನಗಳಲ್ಲಿ ಹುಲಿಗಿ ಗ್ರಾಮದ ಬಗೆಗೆ ಮತ್ತು ಸೋಮನಾಥ ದೇವಾಲಯದ ಚರಿತ್ರೆಯ ಬಗೆಗೆ ತಿಳಿದುಬರುತ್ತದೆ. ಕೊಪ್ಪಳ ಜಿಲ್ಲೆಯ ಪ್ರಸಿದ್ಧ ದೇಗುಲ ಇಟಗಿಯ ಮಹಾದೇವ ದೇವಾಲಯವು ಇಲ್ಲಿ ಕಲೆ ಮತ್ತು ವಾಸ್ತುಶಿಲ್ಪಗಳ ದೃಷ್ಟಿಯಿಂದ ಬಹಳ ಮಹತ್ವದ ಅಂಶಗಳನ್ನು ಪ್ರಕಟಿಸುತ್ತದೆ. ಈ ಹಿನ್ನೆಲೆಯಲ್ಲಿಯೇ ೧೧೧೮ರ ಶಾಸನವು ಇದನ್ನು ದೇವಾಲಯಗಳ ಚಕ್ರವರ್ತಿ ಎಂದು ಕರೆದಿದೆ. ಈ ದೇವಾಲಯವನ್ನು ೬ನೆಯ ವಿಕ್ರಮಾದಿತ್ಯನ ಮಹಾದಂಡನಾಯಕನಾದ ಮಹಾದೇವನು ಕಟ್ಟಿಸಿದನು. ಗರ್ಭಗೃಹ, ಅಂತರಾಳ ಹಾಗೂ ತೆರೆದ ವಿಶಾಲ ಸಭಾಮಂಟಪದಿಂದ ಕೂಡಿದ ದೇವಾಲಯ ಇದಾಗಿದೆ. ಇದರ ಬಾಗಿಲುವಾಡ ಭುವನೇಶ್ವರಿ ಮತ್ತು ಕಂಬಗಳ ಕುಸುರಿ ಕೆತ್ತನೆ ಅತ್ಯಂತ ಸುಂದರವೂ ಸೂಕ್ಷ್ಮವೂ ಆಗಿದೆ. ಕಲ್ಯಾಣದ ಚಾಲುಕ್ಯರು ಕಲೆ ಮತ್ತು ವಾಸ್ತುಶಿಲ್ಪಕ್ಕೆ ಎಷ್ಟೊಂದು ಮಹತ್ವ ನೀಡಿದ್ದರೆಂಬುದಕ್ಕೆ ಕೊಪ್ಪಳ ಪರಿಸರದಲ್ಲಿ ಕಟ್ಟಿಸಿದ ದೇವಾಲಯಗಳ ಸಂಖ್ಯೆ ಮತ್ತು ಅವುಗಳ ಕಲಾಪ್ರೌಢಿಮೆಗಳು ಸಾಕ್ಷಿಯಾಗಿವೆ. ಕಲ್ಯಾಣದ ಚಾಲುಕ್ಯರ ನಂತರ ಬಂದ ಕಲಚೂರಿಗಳು ಕರ್ನಾಟಕದಲ್ಲಿ ದಾಖಲೆ ಮಟ್ಟದ ಆಡಳಿತವನ್ನು ನಡೆಸಿದರು. ಈ ಅವಧಿಯಲ್ಲೂ ಕೊಪ್ಪಳ ಪ್ರದೇಶದಲ್ಲಿ ದೇವಾಲಯಗಳ ನಿರ್ಮಾಣವಾಗಿವೆ. ಕ್ರಿ.ಶ. ೧೧೨೭ರ ಕಳಚುರಿ ರಾಯಮುರಾರಿ ಸೋವಿದೇವನ ಕಾಲದ ಶಾಸನವು ಕೊಪ್ಪಳ ಸಮೀಪದ ಚಳಗೇರಾದಲ್ಲಿ ದೊರೆತಿದೆ. ಈ ಶಾಸನದಲ್ಲಿ ಭೂಚಮ ದಂಡನಾಯಕನು ಕಲ್ಲಂಗೇರಿಯ ಲಕ್ಷ್ಮಿನಾರಾಯಣದೇವಾಲಯವನ್ನು ಕಟ್ಟಿಸಿದ್ದನೆಂಬುದನ್ನು ತಿಳಿಸುತ್ತದೆ. ಚಳಗೇರಾವನ್ನು ಕಲ್ಲಂಗೇರಾ ಎಂದಿರುವುದು ಗಮನಿಸಬೇಕಾದ ಅಂಶ. ಇದು ಅಂದಿನ ಅಗ್ರಹಾರಗಳಲ್ಲೊಂದಾಗಿತ್ತು. ಇಲ್ಲಿ ಹೇಳುವ ದೇವಾಲಯವು ಭಗ್ನಗೊಂಡಿದ್ದು ಅದು ಮತ್ತೊಮ್ಮೆ ಕಟ್ಟಲ್ಪಟ್ಟಿದೆ ಎಂದು ವಿದ್ವಾಂಸರುಅಭಿಪ್ರಾಯಪಡುತ್ತಾರೆ. ಕ್ರಿ.ಶ. ೧೧೭೭ರಲ್ಲಿ ಕೌರೂರಿನಲ್ಲಿ ಏಚಿರಾಜನ ಹರಿಹರ ದೇವಾಲಯವನ್ನು ನಾಣಿಮಯ್ಯನು ಕಟ್ಟಿಸಿದನೆಂಬುದರ ಬಗ್ಗೆ ಉಲ್ಲೇಖವಿದೆ. ಹರಿಹರ ದೇವಾಲಯದ ಎರಡು ಬಾಗಿಲುಗಳಲ್ಲೂ ಶಾಸನಗಳಿವೆ. ಈ ದೇವಾಲಯವು ಸದ್ಯೋಪುರ,

ಪ್ರಾಕಾರ, ಎತ್ತರದ ಅಧಿಷ್ಠಾನ ಮತ್ತು ಗೋಡೆಗಳಿಂದ ಕೂಡಿಕೊಂಡಿದೆ. ಆದರೆ ಈಗ ಅಂದಿನ ದೇವಾಲಯವು ಮಾರ್ಪಾಡಾಗಿ ಶಾಸನದಲ್ಲಿ ಹೇಳಿರುವಂತೆ ಅವಯವಗಳನ್ನು ಹೊಂದಿರುವುದಿಲ್ಲ.

ಹೊಯ್ಸಳರ ಆಳ್ವಿಕೆಯು ಬಲ್ಲಾಳನ ಕಾಲದಲ್ಲಿ ಕೊಪ್ಪಳ ಪ್ರದೇಶಕ್ಕೂ ವಿಸ್ತರಿಸಿದ್ದಿತು. ಕೊಪ್ಪಳದ ಒಂದು ಶಾಸನದಿಂದ ಬಲ್ಲಾಳನ ಕಾಲದಲ್ಲಿ ಬಪ್ಪಶೆಟ್ಟಿ ದಂಡನಾಯಕನು ಕಲಚೂರಿ ರಾಜರು ಇರುವಾಗಲೇ ಸೇವುಣ ಮೊದಲಾದ ರಾಜರನ್ನು ಹಿಮ್ಮೆಟ್ಟಿ ರಾಜ್ಯವನ್ನು ವಿಸ್ತರಿಸಿದನು. ಹೊಯ್ಸಳರು ಜೈನಧರ್ಮದ ಆರಾಧಕರು ಮತ್ತು ಅದನ್ನು ಬೆಳೆಸಿಕೊಂಡು ಬಂದ ಅರಸುಮನೆತನದವರಾಗಿದ್ದಾರೆ. ಬಪ್ಪಸೆಟ್ಟಿ ಅನೇಕ ಜಿನಾಲಯಗಳನ್ನು ಜೀರ್ಣೋದ್ಧಾರಗೊಳಿಸಿದನು. ಈತನು ಕೊಳತೂರು, ಲಕ್ಕಿಗುಂಡಿ, ಕೊಪ್ಪಳ, ಬಂಕಾಪುರ, ಹೂಲಿ, ಕೋಗಳಿ, ಮುಳಗುಂದ, ಶೋಕೆ, ಭಟ್ಟಕೆರೆ, ಹಾನಗಲ್ಲು, ನವಿಲುಗುಂದ, ಬೆಳಗೊಳ, ಬಂದಣಿಕೆ, ಪುರಿಕರ ಮೊದಲಾದೆಡೆಗಳಲ್ಲಿ ಬಸದಿಗಳನ್ನು ಜೀರ್ಣೋದ್ಧಾರ ಗೊಳಿಸಿದ್ದನೆಂದು ಕ್ರಿ.ಶ.೧೦೦೪ರ ಕೊಪ್ಪಳದ ಒಂದು ಶಾಸನವು ತಿಳಿಸುತ್ತದೆ. ಹೊಯ್ಸಳರ ದೊರೆ ಬಲ್ಲಾಳನು ಕ್ರಿ.ಶ. ೧೨೦೪ರಲ್ಲಿ ಕೊಪ್ಪಳದ ಅಳವಂಡಿಯಲ್ಲಿ ಶ್ರೀ ರಂಗನಾಥ ದೇವರ ಅಂಗಭೋಗಕ್ಕೆ ದಾನವನ್ನು ನೀಡಿದುದನ್ನು ಇದೇ ಶಾಸನದಲ್ಲಿ ಕಾಣಬಹುದು. ಹೊಯ್ಸಳರ ಬಳಿಕ ಬಂದ ಯಾದವರು ಕರ್ನಾಟಕ ಚರಿತ್ರೆಯಲ್ಲಿ ಬಹಳ ಮಹತ್ವದ ಪಾತ್ರವನ್ನು ವಹಿಸಿದ್ದಾರೆ. ಇವರ ಅವಧಿಯಲ್ಲಿ ಹಾಕಿಸಿದ ಅನೇಕ ಶಾಸನಗಳು ಕೊಪ್ಪಳ ಪ್ರದೇಶದಲ್ಲಿ ದೊರೆತಿವೆ. ಈ ಕಾಲದಲ್ಲಿ ದೇವಾಲಯಗಳ ನಿರ್ಮಾಣ ಅಷ್ಟಾಗಿ ಕಾಣಬರುವುದಿಲ್ಲ. ಆದರೆ ದೇಗುಲಗಳಿಗೆ ದಾನದತ್ತಿಗಳನ್ನು ನೀಡಿ ಪ್ರೋತ್ಸಾಹಿಸಿದ್ದರು. ೧೨೩೪ರ ಸಂಕನೂರಿನ ಶಾಸನವು ೨ನೆಯ ಸಿಂಗಣನ ಸರ್ವಾಧಿಕಾರಿ ವಾಮನದೇವ ನಾಯಕನು ತನ್ನ ಪುತ್ರೋತ್ಸವ ಸಂದರ್ಭದಲ್ಲಿ ಕಿಸುಕಾಡು ೭೦ ರ ಸಂಕಲಾದೇವಿಗೆ ದಾನವನ್ನು ನೀಡಿದ ವಿವರವನ್ನು ಒಳಗೊಂಡಿದೆ. ಆದರೆ ಈ ದೇವಾಲಯವು ಈಗ ಉಳಿದಿಲ್ಲ. ಇವರ ಸಮಕಾಲೀನರಾಗಿದ್ದ ಕುಮ್ಮಟದುರ್ಗದ ಕಂಪಿಲರಾಯನ ಅವಧಿಯಲ್ಲಿ ಕುಮ್ಮಟ ಮತ್ತು ಅದರ ಸುತ್ತಮುತ್ತಲಿನ ಗ್ರಾಮಗಳಲ್ಲಿ ಕೆಲವು ದೇಗುಲಗಳು ನಿರ್ಮಾಣವಾಗಿವೆ. ಆದರೆ ಈ ಅವಧಿಯಲ್ಲೂ ದೇವಾಲಯಗಳ ರಚನೆ ವಿರಳವಾಗಿದೆ.

ದಕ್ಷಿಣ ಭಾರತದ ಹಿಂದೂ ಸಂಸ್ಕೃತಿಯನ್ನು ಎತ್ತಿ ಹಿಡಿಯುವ ಉದ್ದೇಶಕ್ಕಾಗಿ ಹುಟ್ಟಿಕೊಂಡ ವಿಜಯನಗರ ಸಾಮ್ರಾಜ್ಯವು ಅನೇಕ ದೇವಾಲಯ, ಕೋಟೆ, ಕೊತ್ತಲಗಳನ್ನು ನಿರ್ಮಾಣಮಾಡಿದೆ. ಈ ದೇವಾಲಯಗಳ ಕಲಾವಂತಿಕೆಗೆ ಈ ಅವಧಿಯಲ್ಲಿ ಬಳಸಿದ ಮಾಧ್ಯಮ ಕಣಶಿಲೆಯಾಗಿದೆ. ಕಣಶಿಲೆಯು ಒರಟಾಗಿರುವುದರಿಂದ ಅದರಲ್ಲಿ ಸೂಕ್ಷ್ಮ ಕೆತ್ತನೆ, ಕುಸುರಿ ತುಂಬಾ ಕಷ್ಟಕರವಾದುದು. ಹೀಗಿದ್ದರೂ ಕೂಡಾ ಒರಟು ಶಿಲೆಯಲ್ಲಿ ಅತ್ಯಮೂಲ್ಯವಾದ ಕಲಾಚಾತುರ್ಯವನ್ನು ಅಂದಿನ ಶಿಲ್ಪಿಗಳು ಮೈಗೂಡಿಸಿಕೊಂಡಿರುವುದು ಸೋಜಿಗವೆನಿಸುತ್ತದೆ. ಇವರ ಅವಧಿಯಲ್ಲಿ ಕೊಪ್ಪಳ, ಆನೆಗೊಂದಿ, ಹಿರೇಜಂತಕಲ್ಲು, ಕನಕಗಿರಿ, ಪುರ, ದೇವಿಘಾಟ ಮೊದಲಾದೆಡೆಗಳಲ್ಲಿ ದೇವಾಲಯಗಳು ನಿರ್ಮಾಣವಾಗಿವೆ. ಸಾಮ್ರಾಜ್ಯದ ಅರಸರು ರಾಣಿಯರು, ದಂಡಾಧಿಕಾರಿಗಳು ಇನ್ನೂ ಮುಂತಾದವರು ಹಲವು ದೇವಾಲಯಗಳನ್ನು ಕಟ್ಟಿಸುವುದರ ಜೊತೆಗೆ ಅವುಗಳ ನಿರ್ವಹಣೆಗಾಗಿ ಧನ-ಧಾನ್ಯಗಳನ್ನು ನೀಡುತ್ತಿದ್ದರು. ಪ್ರೌಢದೇವರಾಯನ ಕಾಲದಲ್ಲಿ ಆನೆಗುಂದಿ ಮತ್ತು ಪುರದ ಸೋಮನಾಥ ಹಾಗೂ ಕನಕಗಿರಿ ಲಕ್ಷ್ಮಿನರಸಿಂಹ ದೇವಾಲಯಗಳಿಗೆ ದಾನದತ್ತಿಗಳನ್ನು ನೀಡುರುವುದು ಶಾಸನಗಳಿಂದ ತಿಳಿದುಬರುತ್ತದೆ. ಕೃಷ್ಣದೇವರಾಯನ ಕ್ರಿ.ಶ. ೧೫೨೦ರ ಅವಧಿಯಲ್ಲಿ ಭಂಡಾರದ ತಿಮ್ಮಪ್ಪಯ್ಯನ ಕೊಪ್ಪಳದ ಚೆನ್ನಕೇಶವ (ವೆಂಕಟರಮಣ ದೇವಾಲಯಕ್ಕೆ) ಹಿರೇಸಿಂದೋಗಿ ಗ್ರಾಮವನ್ನು ಸಮರ್ಪಿಸಿದ್ದನು. ಈ ದೇವಾಲಯ ಮೂಲತಃ ಜಿನಾಲಯವಾಗಿದ್ದುದನ್ನು ಗರ್ಭಗೃಹದ ಪೀಠ ಮತ್ತು ಮತ್ತಿತರ ಲಕ್ಷಣಗಳಿಂದ ದೃಢಪಡಿಸಬಹುದು. ಕೃಷ್ಣದೇವರಾಯ ಕೆಸರಹಟ್ಟಿಯಲ್ಲಿ ಕೃಷ್ಣದೇವಾಲಯ ವನ್ನು ಕಟ್ಟಿಸಿರುವನು. ಅಚ್ಯುತರಾಯ ಕನ್ನೇರಮಡುವಿನ ಅಮರೇಶ್ವರ ದೇಗುಲಕ್ಕೆ ದಾನದತ್ತಿ ನೀಡಿ ಪ್ರೋತ್ಸಾಹಿಸಿದ ವಿವರ ಶಾಸನಗಳಿಂದ ತಿಳಿದುಬರುತ್ತದೆ. ೧೫೩೬ರಲ್ಲಿ ಯಲಬುರ್ಗಿಯ ನರಸಿಂಹ ದೇವರು, ಬಂಡಿಹಾಳದ ಮಲ್ಲಿಕಾರ್ಜುನ ದೇವರಿಗೆ ಅಚ್ಯುತರಾಯನು ದಾನ ನೀಡಿರುವನು. ಸದಾಶಿವರಾಯ ಕೂಡ ಕೊಪ್ಪಳ ಪರಿಸರದಲ್ಲಿ ಅನೇಕ ದೇವಾಲಯಗಳನ್ನು ಕಟ್ಟಿಸಿರುವನು. ಸದಾಶಿವರಾಯನ ಸರ್ವಮತಗಳನ್ನು ಸಮಾನತೆಯಿಂದ ಕಂಡದ್ದು ಕ್ರಿ.ಶ.೧೫೪೪ರ ಒಂದು ಶಾಸನವು

ಹೇಳುತ್ತದೆ. ಹಿರೇಜಂತಕಲ್ಲಿನಲ್ಲಿ ಬ್ರಹ್ಮದೇವರು ಕುಣಿರಾಮಯ್ಯ, ವಿರೂಪಾಕ್ಷ, ಕೇಶವ, ಅಚ್ಯುತಮೂರ್ತಿ, ಹನುಮಂತ, ಮೈಲಾರಲಿಂಗ, ಕೋಟಿಶಂಕರ, ವೀರಭದ್ರ, ಹರಿಹರ, ಬಸವ, ರಾಮಪುರದ ಬಸದಿಗಳಿಗೆ ಇಂತಿಷ್ಟು ಭೂಮಿಯೆಂದು ದಾನವಾಗಿ ನೀಡಿದ್ದನು. ಪುರದ ಸೋಮನಾಥನಿಗೂ ದಾನ ನೀಡಿದ ಬಗೆಗೆ ಶಾಸನದಲ್ಲಿ ಉಲ್ಲೇಖವಿದೆ.

ವಿಜಯನಗರದ ಕಾಲದ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಪ್ರಸಿದ್ಧಿ ಪಡೆದ ಇನ್ನೊಂದು ಸ್ಥಳವೆಂದರೆ ಕನಕಗಿರಿ. ಇಲ್ಲಿ ಸುಮಾರು ೨೫ಕ್ಕೂ ಹೆಚ್ಚು ದೇವಾಲಯಗಳಿವೆ. ವಿಜಯನಗರ ಪತನಾನಂತರ ಕನಕಗಿರಿಯ ಪಾಳೆಯಗಾರರು ಇದನ್ನು ಆಡಳಿತ ಕೇಂದ್ರವಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರು. ೧೬೭೫ರಲ್ಲಿ ಗುಜ್ಜಲ ವಂಶದ ಉಡುಚಿ ನಾಯಕನ ಪತ್ನಿ ಚಿನ್ನಾಜಮ್ಮ ಕನಕಗಿರಿನಾಥ ಸ್ವಾಮಿಯ ಪೋಳಿಗೆ ಕಲ್ಲಿನ ಹಾಸಿಗೆ ಹಾಕಿಸಿದ್ದಳು. ಅಲ್ಲದೆ೧೬೮೦ರಲ್ಲಿ ಬಸವಣ್ಣ ದೇವರ ಗುಡಿಯನ್ನು ಕಟ್ಟಿಸಿದಳು. ಇವುಗಳಲ್ಲದೆ ಅನೇಕ ದೇವಾಲಯಗಳು ಈ ಕಾಲದಲ್ಲಿ ಕೊಪ್ಪಳ ಪರಿಸರದಲ್ಲಿ ನಿರ್ಮಾಣವಾಗಿವೆ. ಪಾಳೆಗಾರರ ಕಾಲದ ನಂತರದ ಈ ಪ್ರದೇಶವು ಮೈಸೂರಿನ ಹೈದರ್ ಮತ್ತು ಟಿಪ್ಪು ಅವರ ಆಳ್ವಿಕೆಗೆ ಒಳಪಟ್ಟಿತ್ತು. ಆನಂತರ ಹೈದರಾಬಾದಿನ ನಿಜಾಮನುಹಾಗೂ ಬ್ರಿಟಿಷರ ಆಳ್ವಿಕೆಗೆ ಇದು ಒಳಪಟ್ಟಿತ್ತು. ಈ ಅವಧಿಯಲ್ಲಿ ನಿರ್ಮಾಣವಾದ ದೇಗುಲಗಳು ಹಿಂದೂ ಮುಸ್ಲಿಂಶೈಲಿಯಲ್ಲಿ ನಿರ್ಮಾಣವಾಗಿದ್ದರೂ ಅವು ಸರಳ ರಚನೆಯಿಂದ ಕೂಡಿವೆ. ಆದುದರಿಂದ ಅವುಗಳ ಮಹತ್ವ ಅಷ್ಟೊಂದು ಔಚಿತ್ಯಪೂರ್ಣವಲ್ಲ.

ಕೊಪ್ಪಳ ತಾಲ್ಲೂಕಿನಲ್ಲಿ ಸುಮಾರು ೬೩ ದೇವಾಲಯಗಳನ್ನು ಪ್ರಾಚೀನ ಮತ್ತು ಚಾರಿತ್ರಿಕ ಎಂದು ಗುರುತಿಸಲಾಗಿದೆ. ಅವುಗಳಲ್ಲಿ ೪೧ ದೇವಾಲಯಗಳು ಶೈವ ಮತಕ್ಕೂ ೧೫ ದೇವಾಲಯಗಳು ವೈಷ್ಣವ ಮತದವೆಂದು ಗುರುತಿಸಲಾಗಿದೆ. ಎರಡು ಜಿನಾಲಯಗಳನ್ನು ೫ ಇತರ ದೇವಾಲಯಗಳನ್ನು ಪತ್ತೆ ಹಚ್ಚಿದ್ದಾರೆ. ಐತಿಹಾಸಿಕವಾಗಿ ಪ್ರಸಿದ್ಧವಾಗಿರುವ ಈ ದೇವಾಲಯಗಳನ್ನು ಕುರಿತ ಪರಿಚಯಾತ್ಮಕ ಅಧ್ಯಯನ ಇಲ್ಲಿದೆ.

ಪ್ರಕೃತ ಅಧ್ಯಯನಕ್ಕೆ ಆಯ್ದುಕೊಂಡ ಕೊಪ್ಪಳ ಪ್ರದೇಶದಲ್ಲಿ ಮೂರು ಅಗ್ರಹಾರಗಳು ಸಿಗುತ್ತವೆ. ಅವುಗಳಲ್ಲಿ ಕೊಪ್ಪಳ ಮಾದಿನೂರು ಮತ್ತು ಅಳವಂಡಿ ಎಂದುಗುರುತಿಸಲಾಗಿದೆ. ಆದಾಗ್ಯೂಕೊಪ್ಪಳದ ಸುತ್ತಮುತ್ತಲ ಅಗ್ರಹಾರಗಳನ್ನು ಚರ್ಚಿಸುವುದು ಈ ಸಂದರ್ಭದಲ್ಲಿ ಔಚಿತ್ಯಪೂರ್ಣ. ಅಗ್ರಹಾರಗಳೆಂದರೆ ಬ್ರಾಹ್ಮಣರು ದಾನವಾಗಿ ಪಡೆದ ಗ್ರಾಮಗಳಾಗಿದ್ದವು. ಇಲ್ಲಿ ವೇದ, ಆಗಮ, ವ್ಯಾಕರಣ, ಸ್ಮೃತಿ, ತರ್ಕ, ಪುರಾಣಗಳಲ್ಲಿ ಪರಿಣಿತರಾದ ವಿದ್ವಾಂಸರಿರುತ್ತಿದ್ದರು. ಅಗ್ರಹಾರಗಳಲ್ಲಿ ಇಂಥ ವಿದ್ವಾಂಸರ ಸಂಖ್ಯೆ ೧೦೦ ರಿಂದ ೧೦೦೦ದ ವರೆಗೆ ಇದ್ದುದು ಶಾಸನಗಳಿಂದ ತಿಳಿದುಬರುತ್ತದೆ. ಶಿಕ್ಷಣದ ಜೊತೆಗೆ ಧಾರ್ಮಿಕ ಚಟುವಟಿಕೆಗಳನ್ನು ಮತ್ತು ವಾಸ್ತುಶಾಸ್ತ್ರದ ಪರಿಣಿತಿಗಳಲ್ಲೂ ಅವರು ಉಪಯೋಗವಾಗುತ್ತಿದ್ದರು. ಕೊಪ್ಪಳ ಜಿಲ್ಲೆಯಲ್ಲಿ ಅನೇಕ ಅಗ್ರಹಾರಗಳಿದ್ದವು. ಅವುಗಳಲ್ಲಿ ಮಾದಿನೂರು, ಅಳವಂಡಿ, ಕವಲೂರು, ಕುಕನೂರು, ಮುಧೋಳ, ತಳಕಲ್, ಬಳಗೇರ, ಚಳಗೇರ, ಗಬ್ಬೂರುಗಳು ಮುಖ್ಯವಾಗಿವೆ.

**ಮಾದಿನೂರು ಅಗ್ರಹಾರ**

ಮಾದಿನೂರು ಅಗ್ರಹಾರವು ಕೊಪ್ಪಳ ತಾಲ್ಲೂಕಿನಲ್ಲಿದೆ. ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಇದು ಮಹಾ ಅಗ್ರಹಾರವಾಗಿ ಬೆಳೆದಿತ್ತು. ಶಾಸನಗಳಲ್ಲಿ ಈ ಗ್ರಾಮವನ್ನು ಮಂದಯನೂರು , ಮೋದನೂರು, ಮೋದಿತಗ್ರಾಮ ಮುಂತಾಗಿ ಕರೆಯಲಾಗಿದೆ. ಅಲ್ಲದೆ ಈ ಮಾದಿನೂರು ಅಗ್ರಹಾರವು ಎಡದೊರೆ ೨೦೦೦ಕ್ಕೆ ಸೇರಿದ ಕೆಳವಾಡಿ ೨೦೦೦ ತಿಲಕದಂತಿದ್ದುದಾಗಿ ಶಾಸನವೊಂದು ವರ್ಣಿಸಿದೆ. ಚಾಲುಕ್ಯ ಆಹವಮಲ್ಲನ ಕಾಲಕ್ಕೆ ಇದು ಅಗ್ರಹಾರವಾಗಿದ್ದಿತು ಎಂದು ತಿಳಿದುಬರುತ್ತದೆ. ಸೋಮಯಾಜಿ ಎಂಬ ಮತ್ತು ೨೦ ಜನ ವಿದ್ವಾಂಸರಿಗೆ ಬೇಕಾಗುವಂತೆ ಅಗ್ರಹಾರವನ್ನು ನಿರ್ಮಿಸಿದ್ದುದಾಗಿ ತಿಳಿದುಬರುತ್ತದೆ. ಆದರೆ ಈ ಅಗ್ರಹಾರವು ಇಂದು ವಾಸ್ತು ರೂಪದಲ್ಲಿ ಕಾಣುತ್ತಿಲ್ಲ. ಗ್ರಾಮದ ಸೋಮೇಶ್ವರ ಮತ್ತು ಮತ್ತಿತರ ದೇವಾಲಯಗಳಿಗೂ ಅಂದಿನ ಅರಸರು ದಾನದತ್ತಿಗಳನ್ನು ನೀಡಿದ್ದರು.

## ಅಳವಂಡಿ ಅಗ್ರಹಾರ

ಕೊಪ್ಪಳದಿಂದ ಇದು ಸುಮಾರು ೨೫ ಕಿ.ಮೀ. ಅಂತರದಲ್ಲಿದೆ. ಇದು ಕುಂತಳದೇಶದ ಎಕ್ಕಲವಾಡ ಪ್ರಾಂತದ ಪ್ರಮುಖ ಅಗ್ರಹಾರವಾಗಿತ್ತು ಎಂದು ತಿಳಿದುಬರುತ್ತದೆ. ಅಳವಂಡಿಯು ಕುಂತಳದೇಶದ ರತ್ನದಂತಿದ್ದುದಾಗಿ ಶಾಸನ ವರ್ಣಿಸಿದೆ. ಇಷ್ಟೊಂದು ಪ್ರಸಿದ್ಧಿಯಾದ ಅಳವಂಡಿಯಲ್ಲಿ ಅನೇಕ ದೇವಾಲಯ, ಮಠ, ಛತ್ರಗಳನ್ನು ಕಟ್ಟಿಸಿ ದಾನದತ್ತಿಗಳನ್ನು ಅಲ್ಲಿನ ಅರಸರು ಮತ್ತು ಅಧಿಕಾರಿಗಳು ವಿದ್ವಾಂಸರಿಗೆ ನೀಡಿದ್ದರು. ಮೂಕಮಯ್ಯನೆಂಬುವನು ಅಳವಂಡಿಯ ಮಹಾಜನರಿಗೆ ಪಾದಪೂಜೆ ಮಾಡಿ ಭೂದಾನವನ್ನು ನೀಡಿದ್ದನು ಎಂದು ಶಾಸನದಲ್ಲಿ ಬರುತ್ತದೆ. ೧೧೫೭ರಲ್ಲಿ ೧೭೨ ಗದ್ಯಾಣ ಹೊನ್ನುಗಳನ್ನು ಕೇಶವದೇವನು ಅಲ್ಲಿನ ದೇವಾಲಯಗಳ ಪೂಜಾ ಕಾರ್ಯಗಳಿಗೆ ಉಪಯೋಗವಾಗಲೆಂದು ದಾನ ನೀಡಿದ್ದನು.

## ಕವಲೂರು ಅಗ್ರಹಾರ

ಕೊಪ್ಪಳದ ಪಶ್ಚಿಮಕ್ಕಿರುವ ಕವಲೂರು ಗ್ರಾಮ ಹಿಂದೊಂದು ಕಾಲದಲ್ಲಿ ಅಗ್ರಹಾರ ವಾಗಿತ್ತು. ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿ ಚೋಳ ಭಟ್ಟನ ಮಗ ಸೋಮಯಾಜಿಯು ಇಲ್ಲಿ ಸೋಮಯಾಗ ಮಾಡಿ ವಿಷ್ಣು ದೇವಾಲಯ, ಛತ್ರ ಮತ್ತು ಕೆರೆಗಳನ್ನು ಕಟ್ಟಿಸಿದ್ದನು.

## ಕುಕನೂರು ಅಗ್ರಹಾರ

ಭಾರತದ ಕುಂತಳ ದೇಶವು ಕಂಚಿ ದೇಶಕ್ಕಿಂತ ಸುಂದರವಾಗಿತ್ತು. ಇದಕ್ಕೆ ತಿಲಕಪ್ರಾಯವಾಗಿ ಬೆಳ್ವೊಲ ನಾಡಿದ್ದಿತು. ಈ ಬೆಳ್ವೊಲದಲ್ಲಿ ಕುಕನೂರು ಶೋಭಾಯಮಾನವಾಗಿದ್ದಿತೆಂದು ಶಾಸನಕವಿ ವರ್ಣಿಸಿರುವನು. ಕುಕನೂರು ಅಗ್ರಹಾರವು ಕೊಪ್ಪಳದ ಪ್ರದೇಶಕ್ಕೆ ಸಮೀಪವಿರುವ ಅತ್ಯಂತ ದೊಡ್ಡ ಅಗ್ರಹಾರ. ಈ ಅಗ್ರಹಾರದಲ್ಲಿ ಸುಮಾರು ದೇವಾಲಯಗಳನ್ನು ಕಾಣಬಹುದು. ೯ ಶಿವಲಿಂಗಗಳು,

ಶಕ್ತಿಪೀಠ, ಅಂಬಿಗೆ, ಪುರಾಣಿದೇವಿ, ಚಾಮುಂಡಿದೇವಿ, ಮಹಾಮಾಯೆ, ತಡಾಗಂಬಿಕೆ, ಜೇಷ್ಟಾದೇವಿ, ಬ್ರಹ್ಮೇಶ್ವರ, ವಸಂತಾದೇವಿ, ಕಾಲಿಂಬೆ, ಶಾಂತಿ, ಗುಪ್ತಚಾಮುಂಡಿ, ಗಣೇಶ್ವರ, ಭುವನೇಶ್ವರ, ಮಲ್ಲಿಕಾರ್ಜುನ, ತೋಟಗೇಶ್ವರ ಮೊದಲಾದ ದೇವ-ದೇವತೆಗಳು ಇಲ್ಲಿ ನೆಲೆಸಿದ್ದರೆಂದು ತಿಳಿದುಬರುತ್ತದೆ. ಈ ದೇವರುಗಳ ನೆಲೆಗಳು ಅಗ್ರಹಾರದ ಒಳ ಆವರಣದಲ್ಲಿರುವುದು ವಿಶೇಷವಾಗಿದೆ.

**ಮುಧೋಳ ಅಗ್ರಹಾರ**

ಮುಧೋಳ ಅಗ್ರಹಾರವು ಕೊಪ್ಪಳದ ಶಾಸನಗಳಲ್ಲಿ ಪದೇಪದೇ ಉಲ್ಲೇಖವಾಗಿದೆ. ಇದು ಕೂಡಾ ಕುಕನೂರಿನಲ್ಲಿರುವಂತೆ ಒಂದು ಸಾವಿರ ಮಹಾಜನರನ್ನು ಹೊಂದಿತ್ತು. ಮುಧೋಳಿನಲ್ಲಿ ಬೊಮ್ಮಲದೇವಿಯ ಹರಿಹರ ದೇವಾಲಯವನ್ನು ಕಟ್ಟಿಸಿದ್ದು. ಈ ಅಗ್ರಹಾರದಲ್ಲಿ ತ್ರಿಲಿಂಗೇಶ್ವರ, ಮಲ್ಲಿಕಾರ್ಜುನ ಮೊದಲಾದ ದೇವಾಲಯಗಳನ್ನು ಕಾಣಬಹುದಾಗಿದೆ.

**ತಳಕಲ್ಲು ಅಗ್ರಹಾರ**

ಕ್ರಿ.ಶ. ೧೧೯೧ರ ಹೊತ್ತಿಗೆ ಇದೊಂದು ಅಗ್ರಹಾರವಾಗಿತ್ತು. ಇಲ್ಲಿ ನಾಗಲೇಶ್ವರ ದೇವಾಲಯವನ್ನು ಕಟ್ಟಲಾಗಿದೆ. ಕ್ರಿ.ಶ. ೧೧೮೯ರಲ್ಲಿ ಇಲ್ಲಿನ ಸಿದ್ದೇಶ್ವರ ದೇವಾಲಯಕ್ಕೆ ದಾನ ನೀಡಿದ ಮತ್ತೊಂದು ಶಾಸನವಿದೆ.

**ಬಳಗೇರೆ ಅಗ್ರಹಾರ**

ಬಳಗೇರಿಯು ಬಳ್ಳೇಶ್ವರಿ ದೇವಾಲಯದಿಂದ ಕೂಡಿದ ಅಗ್ರಹಾರವಾಗಿದೆ. ಇದನ್ನು ಪೂರ್ವದಲ್ಲಿ ಬ್ರಹ್ಮಪುರವೆಂದು, ಅನಂತರ ಶೋಭನೇಶ್ವರ ದೇವರ ತಾಣವೆಂದು ನಂಬಿ ಅಲ್ಲಿ ಶೋಭನೇಶ್ವರ ದೇವಾಲಯವನ್ನು ಕಟ್ಟಲಾಗಿದೆ. ಈ ಶೋಭನೇಶ್ವರ ದೇವಾಲಯದ ವಿವರವುಳ್ಳ ಶಾಸನವೊಂದು ಅಲ್ಲಿ ಕೆತ್ತಲ್ಪಟ್ಟಿದೆ.

**ಚಳಗೇರ ಅಗ್ರಹಾರ**

ಕುಷ್ಟಗಿ ತಾಲ್ಲೂಕಿನ ಚಳಗೇರ ಗ್ರಾಮವು ಕಲ್ಲಂಗೇರಿ ಎಂಬ ಅಗ್ರಹಾರವಾಗಿ ಪ್ರಸಿದ್ಧಿಯನ್ನು ಹೊಂದಿತ್ತು ಎಂದು ತಿಳಿದುಬರುತ್ತದೆ. ಕ್ರಿ.ಶ. ೧೧೨೭ರಲ್ಲಿ ಕಲಚೂರಿ ರಾಯಮುರಾರಿ ಸೋವಿದೇವನ ಆಳ್ವಿಕೆಯಲ್ಲಿ ಭೂಚಮದಂಡನಾಯಕನು ಕಲ್ಲಂಗೇರಿಯಲ್ಲಿ ಲಕ್ಷ್ಮೀನಾರಾಯಣ ದೇವಾಲಯವನ್ನು ನಿರ್ಮಿಸಿದನೆಂಬ ಶಾಸನವು ಕೊಪ್ಪಳದಲ್ಲಿ ಸಿಗುತ್ತದೆ.

**ಗಬ್ಬೂರು ಅಗ್ರಹಾರ**

ಗಬ್ಬೂರು ಅಗ್ರಹಾರಕ್ಕೆ ಮೊದಲು ಗೋಪುರ ಅಗ್ರಹಾರವೆಂದು ಹೆಸರಿತ್ತು. ೧೧೯೫ರ ಒಂದು ಶಾಸನದಲ್ಲಿ ಈ ಅಗ್ರಹಾರದ ಬಗೆಗೆ ವಿವರಗಳು ತಿಳಿದುಬರುತ್ತವೆ. ಇಲ್ಲಿ ನಾಗಭೂಷಣ ದೇವ, ಕೇಶವ, ಮಲ್ಲೇಶ್ವರ, ತ್ರಿಪುರಾಂತಕ, ಹರಿಹರ, ಗಣಪತಿ, ಸರಸ್ವತಿ, ಸೂರ್ಯ, ಮಹೇಶ್ವರ ಮೊದಲಾದ ದೇವಾಲಯಗಳನ್ನು ಕಾಣಬಹುದು. ಈ ದೇಗುಲಗಳಿಗೆ ಮಾಚಯಪ್ಪಣ ಮಾಲೆಗಾರ ಅರವತ್ತೊಕ್ಕಲು, ಮೇಳಿಸಾಸಿರ್ವರು ಮತ್ತಿತರ ದಾನದತ್ತಿಗಳನ್ನು ಬಿಟ್ಟಿದ್ದಿದು ಶಾಸನಗಳಲ್ಲಿ ಕಾಣಬರುವ ಅಂಶವಾಗಿದೆ.

**ಕೊಪ್ಪಳದ ದೇವಾಲಯಗಳು**

ಕೊಪ್ಪಳದಲ್ಲಿ ಹಲವಾರು ದೇವಾಲಯಗಳನ್ನು ಕಾಣಬಹುದು. ಶೈವ, ವೈಷ್ಣವ, ಜೈನ ಮತ್ತು ಇಸ್ಲಾಂ ಧರ್ಮದ ಧಾರ್ಮಿಕ ಕೇಂದ್ರಗಳು ಇಲ್ಲುಂಟು. ಕೊಪ್ಪಳವು ಚರಿತ್ರೆಯಾದ್ಯಂತ ಶೈಕ್ಷಣಿಕವಾಗಿ ಧಾರ್ಮಿಕವಾಗಿ ವಾಣಿಜ್ಯಿಕವಾಗಿ ತನ್ನ ಪಾತ್ರವನ್ನು ಗುರುತಿಸಿಕೊಂಡಂತೆ ವಾಸ್ತುಶಿಲ್ಪದ ಕೇಂದ್ರವಾಗಿಯೂ ಗುರುತಿಸಿಕೊಳ್ಳುತ್ತದೆ. ಬಾದಾಮಿ ಚಾಲುಕ್ಯರ, ಸೇವುಣರ, ರಾಷ್ಟ್ರಕೂಟರ, ಕಲ್ಯಾಣಿ ಚಾಲುಕ್ಯರ , ಹೊಯ್ಸಳರ, ವಿಜಯನಗರದರಸರ, ಬಹಮನಿಸುಲ್ತಾನರ, ನವಾಬರ ಕಾಲಘಟ್ಟದಲ್ಲಿ

ಅನೇಕ ಧಾರ್ಮಿಕ ಕೇಂದ್ರಗಳ ಕಟ್ಟಡಗಳ ನಿರ್ಮಾಣಗಳು ಇಲ್ಲಿ ನಡೆದಿವೆ. ಪ್ರಕೃತ ಕೊಪ್ಪಳ ಪಟ್ಟಣದಲ್ಲಿ ಕಾಣಸಿಗುವ ದೇವಾಲಯಗಳನ್ನು ಕುರಿತು ಚರ್ಚಿಸುವುದು ಔಚಿತ್ಯಪೂರ್ಣವೆನಿಸುವುದು.

**ಗವಿಮಠ**

ಕೊಪ್ಪಳ ನಗರದ ಆಗ್ನೇಯ ಭಾಗಕ್ಕಿರುವ ಗವಿಮಠ ಕೊಪ್ಪಳದಲ್ಲಿ ಕಾಣಸಿಗುವ ಅತ್ಯಂತ ಮಹತ್ವದ ಧಾರ್ಮಿಕ ಕೇಂದ್ರ. ಗವಿಮಠವು ಉತ್ತರಾಭಿಮುಖವಾಗಿದ್ದು ಉತ್ತಮ ಸ್ಥಿತಿಯಲ್ಲಿದೆ. ಈ ಗವಿಮಠವು ಈ ಹಿಂದೆ ಬೌದ್ಧರ ಕೇಂದ್ರವಾಗಿತ್ತು. ಅನಂತರ ಜೈನರ ಕೇಂದ್ರವಾಯಿತು. ಕ್ರಿ.ಶ. ಸುಮಾರು ೧೭-೧೮ನೇ ಶತಮಾನದ ಹೊತ್ತಿಗೆ ಅದು ವೀರಶೈವರ ತಾಣವಾಗಿ ನೆಲೆನಿಂತಿದೆ. ಪಾಳೆಯಗಾರರು ಈ ಗವಿಮಠಕ್ಕೆ ದತ್ತಿಬಿಟ್ಟ ಮತ್ತು ಗವಿಮಠವನ್ನು ಉದ್ಧರಿಸಿದ ಬಗೆಗೆ ಶಾಸನಗಳಲ್ಲಿ ಮಾಹಿತಿಯಿದೆ. ಕೊಪ್ಪಳ ಪ್ರದೇಶದ ಪ್ರಸಿದ್ಧ ಮಠಗಳಲ್ಲಿ ಗವಿಮಠವೂ ಒಂದು. ಕಲ್ಯಾಣದ ಬಸವಣ್ಣನವರ ಚಳುವಳಿಯ ಹಿನ್ನೆಲೆಯಲ್ಲಿ ಉತ್ತರ ಕರ್ನಾಟಕದ ಇಡೀ ಭಾಗವು ವೀರಶೈವ ಮತವನ್ನು ಅನುಸರಿಸಿತು. ಅದರ ಪರಿಣಾಮವಾಗಿ ಒಂದುಕಾಲಕ್ಕೆ ಜೈನ ಬಸದಿಯಾಗಿದ್ದ ಮತ್ತು ಬೌದ್ಧ ಚೈತ್ಯಾಲಯವಾಗಿದ್ದ ಈ ಮಠ ೧೫-೧೬ನೇ ಶತಮಾನದಲ್ಲಿ ವೀರಶೈವ ಮಠವಾಗಿ ಪರಿವರ್ತನೆಯಾಗಿದೆ. ಗವಿಮಠವಿರುವ ಪ್ರದೇಶವು ಬೆಟ್ಟ ಗುಡ್ಡಗಳಿಂದ ಸುತ್ತುವರಿಯಲ್ಪಟ್ಟಿದೆ. ಇಲ್ಲಿ ನೈಸರ್ಗಿಕ ಗುಹೆಗಳಿದ್ದು ಬೃಹದ್ ಶಿಲಾಯುಗದ ಕಾಲಘಟ್ಟದಲ್ಲಿ ಮಾನವನ ತಾಣಗಳಾಗಿದ್ದವು. ಗವಿಮಠದ ಪ್ರಮುಖ ಸ್ಮಾರಕಗಳಲ್ಲಿ ಗವಿಯ ಮುಂದೆ ಕಟ್ಟಲಾದ ದೇವಸ್ಥಾನ ಮಠದ ವಿಶಾಲ ಮಂಟಪಗಳನ್ನು ಹೊಂದಿದ ಕಟ್ಟಡ, ವಿವಿಧ ಕಾಲಗಳಲ್ಲಿ ಆಗಿಹೋದ ಸ್ವಾಮಿಗಳ ಗದ್ದುಗೆಗಳು, ಗದ್ದುಗೆಗಳ ಮೇಲೆ ಕಟ್ಟಿದ ಕಟ್ಟಡಗಳು, ಅನ್ನಪೂರ್ಣೇಶ್ವರಿ ದೇವಾಲಯ, ಕಲ್ಯಾಣಮಂಟಪ ಇನ್ನೂ ಮುಂತಾದವು ಸೇರಿಕೊಂಡಿವೆ. ಗವಿಮಠದ ಕಟ್ಟಡಗಳನ್ನು ಕೂಲಂಕಷವಾಗಿ ವಾಸ್ತುಶಿಲ್ಪದ ದೃಷ್ಟಿಕೋನದಲ್ಲಿ ಪರಿಶೀಲಿಸಿದಾಗ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿದ್ದ ಒಂದು ದೇಗುಲವೆಂದು ಸ್ಪಷ್ಟವಾಗುತ್ತದೆ. ಇದರ ಜೊತೆಗೆ ಅನಂತರದಲ್ಲಿ ಕಟ್ಟಲಾದ

ಸಾಲುಮಂಟಪಗಳಲ್ಲಿ ಕಲ್ಯಾಣಿ ಚಾಲುಕ್ಯರ ಕಾಲದ ಕೆಲವು ಕಂಬಗಳನ್ನು ಬೇರೆಡೆಯಿಂದ ತಂದು ನಿರ್ಮಿಸಲಾಗಿದೆ. ಗವಿಸಿದ್ಧೇಶ್ವರರ ಪ್ರಮುಖ ಗದ್ದುಗೆಯ ಕಟ್ಟಡದ ಮುಂಬದಿಯಲ್ಲಿ ಎರಡು ಕಂಬಗಳು ಈ ತೆರನಾಗಿವೆ ಎಂದು ಗುರುತಿಸಬಹುದು. ಇವುಗಳಿಂದ ಕಲ್ಯಾಣದ ಚಾಲುಕ್ಯರ ಕಾಲದ ಹೊತ್ತಿಗೆ ಆ ಸ್ಥಳವು ಮುಖ್ಯ ಧಾರ್ಮಿಕ ತಾಣವಾಗಿದ್ದಿತೆಂದು ದೃಢಪಡುತ್ತದೆ. ಈ ಮಠದ ನೈರುತ್ಯದ ಬೆಟ್ಟಕ್ಕೆ ಹೊಂದಿಕೊಂಡು ಅಮೃತೇಶ್ವರ ದೇವಾಲಯವಿದೆ. ಇದು ಕೂಡಾ ಕಲ್ಯಾಣಿ ಚಾಲುಕ್ಯ ಹಾಗೂ ಅದಕ್ಕೂ ಪೂರ್ವದಲ್ಲಿ ನಿರ್ಮಾಣಗೊಂಡ ಲಕ್ಷಣಗಳನ್ನು ಗುರುತಿಸಬಹುದು. ನೈಸರ್ಗಿಕ ಗುಹೆಗಳಿಂದ ಕಟ್ಟಲಾದ ಮಹಾದೇಗುಲ ಇದಾಗಿದೆ. ಇಲ್ಲಿ ಮೂರು ಜೈನತೀರ್ಥಂಕರರ ಉಬ್ಬು ಶಿಲ್ಪಗಳಿವೆ. ಇದರಿಂದ ಅಮೃತೇಶ್ವರ ದೇವಾಲಯವು ಇತ್ತೀಚೆಗೆ ಶೈವ ದೇವಾಲಯವಾಗಿರುವುದು ದೃಢವಾಗುತ್ತದೆ. ಅಲ್ಲದೆ ಇದೇ ದೇಗುಲಕ್ಕೆ ಸೇರಿದ ಶಾಸನವು ಕ್ರಿ.ಶ. ೧೩೪೭ರ ವಿಜಯನಗರದ ಅರಸ ಹರಿಹರನ ಕಾಲದ್ದಾಗಿದೆ. ಇದು ಜೈನಧರ್ಮಕ್ಕೆ ಪ್ರೋತ್ಸಾಹ ನೀಡಿ ಸಿಂಹನಂದಿ ಆಚಾರ್ಯರಿಗೆ ನಿಷಿದಿಯನ್ನು ಹಾಕಿದ ವಿವರ ಹೊಂದಿದೆ. ಗವಿಮಠದ ಎಡಬದಿಯಲ್ಲಿ ಈಗ ಸ್ವಾಮಿಗಳು ವಾಸಿಸುತ್ತಿರುವ ಕಟ್ಟಡವು ಹಿಂದೆ ದೇವಾಲಯವಾಗಿದ್ದಿತು. ಇದು ದೇವಾಲಯದ ಎಲ್ಲ ಲಕ್ಷಣಗಳನ್ನು ಒಳಗೊಂಡಿದೆ. ಅಂತರಾಳ ಗರ್ಭಗೃಹದ ಭಾಗಗಳನ್ನು ಹೊಂದಿದ್ದು ಮುಂಬದಿಯ ಸಭಾಮಂಟಪಗಳನ್ನು ನಂತರದಲ್ಲಿ ಕಟ್ಟಲಾಗಿದೆ ಎಂದು ಗುರುತಿಸಬಹುದು. ಈ ದೇಗುಲದ ಗರ್ಭಗೃಹದ ಮೇಲೆ ಶಿಖರವಿದ್ದುದನ್ನು ಗುರುತಿಸಬಹುದು. ಆದರೆ ಈಗ ಅದು ಭಗ್ನಗೊಂಡು ಬೇರೊಂದು ಸ್ವರೂಪದಲ್ಲಿ ಉಳಿದುಕೊಂಡಿದೆ. ಈ ದೇವಸ್ಥಾನದ ಬಾಗಿಲುವಾಡವು ಅರೆಗಂಬಗಳು, ಅಡ್ಡಪಟ್ಟಿಕೆಗಳಿಂದ ಅಲಂಕೃತವಾಗಿವೆ. ಇದನ್ನು ನಂತರದಲ್ಲಿ ಕಟ್ಟಿಸಿರುವ ಸಾಧ್ಯತೆಗಳಿವೆ. ಈ ದೇವಾಲಯದ ಮುಂದೆ ಕಟ್ಟಲಾದ ಲಕ್ಷಣ ಮಂಟಪವು ಅಲ್ಲಿನ ಲಕ್ಷಣಗಳಿಂದ ವಿಜಯನಗರೋತ್ತರ ಕಾಲದಲ್ಲಿ ನಿರ್ಮಾಣವಾಗಿದೆ ಎಂಬುದನ್ನು ತಿಳಿಸುತ್ತದೆ. ಈ ಮಂಟಪದ ಕಂಬಗಳು ಚಚ್ಚೌಕವಾಗಿಯೂ ಕೆಲವನ್ನು ವೃತ್ತಾಕಾರವಾಗಿಯೂ ಕಡೆದಿರುವರು. ಗವಿಮಠವು ಕೂಡಾ ೧೧-೧೨ನೇ ಶತಮಾನದಲ್ಲಿ ಜೈನರ ತಾಣವಾಗಿತ್ತು. ನಂತರ ಅಂದರೆ ವಿಜಯನಗರ ಅಥವಾ ಅದರ ಮುಂದಿನ ಅವಧಿಯಲ್ಲಿ ರುದ್ರಮುನಿಸ್ವಾಮಿಗಳ ನೆರವಿನಿಂದ ವೀರಶೈವ

ವಿರಕ್ತಮಠವಾಗಿ ಮಾರ್ಪಾಟು ಹೊಂದಿತು. ಇದು ಮಠವಾಗಿ ಪರಿವರ್ತನೆಗೊಂಡ ಬಳಿಕ ಗವಿಮಠವು ವಿಸ್ತಾರಗೊಂಡು ಪ್ರಮುಖ ವಿರಕ್ತಮಠವಾಯಿತು. ಇದಕ್ಕೆ ಮೂಲ ಕಟ್ಟಡಗಳಿಲ್ಲದೆ ಇನ್ನಿತರ ವಿವಿಧ ಕಟ್ಟಡಗಳು, ಮಂಟಪಗಳು, ಗದ್ದುಗೆಗಳು ನಿರ್ಮಾಣಗೊಂಡಿವೆ. ಶಿಕ್ಷಣ ಮತ್ತಿತರ ಧಾರ್ಮಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಈ ಮಠವು ಕರ್ನಾಟಕ ರಾಜ್ಯದಲ್ಲಿ ತನ್ನ ಹೆಸರನ್ನು ಪ್ರಧಾನ ಧಾರೆಯಲ್ಲಿ ಸೇರಿಸಿಕೊಂಡಿದೆ.

### ಅಮೃತೇಶ್ವರ ಗುಹಾ ದೇವಾಲಯ

ಗವಿಮಠದ ನೈರುತ್ಯಕ್ಕಿರುವ ಈ ದೇವಾಲಯವು ಪಶ್ಚಿಮಾಭಿಮುಖವಾಗಿದೆ. ಮಧ್ಯಮ ಸ್ಥಿತಿಯಲ್ಲಿದ್ದು ಕಲ್ಯಾಣ ಚಾಲುಕ್ಯರ ಶೈಲಿಯನ್ನು ಈ ಮಠದಲ್ಲಿ ಕಾಣಬಹುದು. ಈ ಮಠವು ಕ್ರಿ.ಶ. ೧೧-೧೨ನೇ ಶತಮಾನದಿಂದ ಅಸ್ತಿತ್ವದಲ್ಲಿರಬಹುದೆಂದು ಊಹಿಸಲು ಸಾಧ್ಯವಿದೆ. ಗವಿಮಠದ ಬೆಟ್ಟಕ್ಕೆ ಹೊಂದಿದಂತೆ ಪಶ್ಚಿಮಾಭಿಮುಖವಾಗಿರುವ ಗುಹಾದೇವಾಲಯ ಇದಾಗಿದೆ. ನೈಜ ಗುಹೆಯನ್ನು ಬಳಸಿ ಮುಂದೆ ಗೋಡೆ ನಿರ್ಮಿಸಿರುವರು. ಅದರ ಮುಂಭಾಗದಲ್ಲಿ ತೆರೆದ ಸಭಾಮಂಟಪವನ್ನು ನಿರ್ಮಿಸಲಾಗಿದೆ. ಗರ್ಭಗೃಹವು ವಿಶಾಲವಾಗಿದೆ. ಇದರ ಮೇಲ್ಛಾವಣಿ ಬೆಟ್ಟದ ಬಂಡೆಗಲ್ಲಾಗಿದ್ದು ಇದು ಗುಮ್ಮಟದ ಒಳರಚನೆಯನ್ನು ಹೊಂದಿದೆ. ಶಿವಲಿಂಗವು ಗುಹಾಲಯದ ಮಧ್ಯಭಾಗದಲ್ಲಿ ಪ್ರತಿಷ್ಠಾಪಿತವಾಗಿದೆ. ಈ ದೇವಾಲಯದ ಮುಂಬದಿಯಲ್ಲಿ ಜೈನತೀರ್ಥಂಕರರ ಉಬ್ಬು ಶಿಲ್ಪಗಳಿವೆ. ದೇಗುಲದ ಗರ್ಭಗೃಹದ ಬಂಡೆಗಲ್ಲಿನ ಮೇಲೆ ಜೈನ ತೀರ್ಥಂಕರರ ಶಿಲ್ಪವಿದ್ದ ಸೂಚನೆಗಳಿವೆ. ಗರ್ಭಗೃಹದ ಮುಂದಿನ ಸಭಾಮಂಟಪದಲ್ಲಿ ಆರು ಕಂಬಗಳಿವೆ. ಇವುಗಳಲ್ಲಿ ನಾಲ್ಕು ಕಂಬಗಳು ಕೆಳಭಾಗದಿಂದ ಚಚ್ಚೌಕವಾಗಿಯೂ ಮೇಲೆ ಅಷ್ಟ ಮತ್ತು ಹದಿನಾರು ಮುಖಗಳಿಂದ ಕಡೆದಿದ್ದಾರೆ. ಇದು ಕಾಲಾಂತರದಲ್ಲಿ ಭಗ್ನಗೊಂಡು ಜೀರ್ಣೋದ್ಧಾರಗೊಂಡಿರುವುದರಿಂದ ಕಂಬದ ಫಲಕ ಮತ್ತು ಬೋದಿಗೆಗಳು ಈಗ ಇರುವುದಿಲ್ಲ. ದೇಗುಲಕ್ಕೆ ಹೊಂದಿಕೊಂಡ ವಿಸ್ತಾರವಾದ ಬಂಡೆಯ ಮೇಲೆ ಸಮಭಂಗಿಯಲ್ಲಿ ನಿಂತ ತೀರ್ಥಂಕರ ಹಾಗೂ ಅದರ ಬಲಕ್ಕೆ ಪದ್ಮಾಸನದಲ್ಲಿ ಕುಳಿತ ಎರಡು

ತೀರ್ಥಂಕರರ ಉಬ್ಬು ಕೆತ್ತನೆಗಳಿವೆ. ಈ ಎಲ್ಲ ಮೂಲ ಆಕರಗಳಿಂದ ಅಮೃತೇಶ್ವರ ದೇವಾಲಯವು ಹಿಂದೆ ಜಿನಬಸದಿಯಾಗಿದ್ದಿರಬೇಕು. ಜಿನಾಲಯವು ಇತ್ತೀಚೆಗೆ ಈಶ್ವರ ದೇವಾಲಯವಾಗಿ ಮಾರ್ಪಾಡು ಹೊಂದಿದೆ.

**ಪಾರ್ಶ್ವನಾಥ ತೀರ್ಥಂಕರರ ಬಸದಿ**

ನಗರದ ಕೋಟೆಯೊಳಗೆ ಈ ಬಸದಿಯು ಇದ್ದು ಇದು ಕಲ್ಯಾಣಿ ಚಾಲುಕ್ಯರದ್ದೆಂದು ತಿಳಿದುಬರುತ್ತದೆ. ಬಸದಿಯು ಪೂರ್ವಾಭಿಮುಖವಾಗಿದ್ದು ಮಧ್ಯಮಸ್ಥಿತಿಯಲ್ಲಿದೆ. ಕ್ರಿ.ಶ. ಸುಮಾರು ೧೨-೧೩ನೇ ಶತಮಾನದಿಂದ ಈ ಬಸದಿಯು ಅಸ್ತಿತ್ವದಲ್ಲಿದೆ ಎಂಬುದನ್ನು ಗುರುತಿಸಬಹುದು. ಸುಮಾರು ೮ ಅಡಿ ಎತ್ತರದ ವೇದಿಕೆಯಲ್ಲಿ ಮುರು ಅಡಿ ಎತ್ತರದ ಅಧಿಷ್ಠಾನದ ಮೇಲೆ ಜಿನಾಲಯ ಬಸದಿಯನ್ನು ಕಟ್ಟಲಾಗಿದೆ. ಇದು ೫ ಗರ್ಭಗೃಹಗಳನ್ನು ಹೊಂದಿದೆ. ೪ ಗರ್ಭಗೃಹಗಳು ಸುಸ್ಥಿತಿಯಲ್ಲಿದ್ದು ಒಂದು ಮಾತ್ರ ಭಗ್ನಗೊಂಡಿದೆ, ೫ ಅಂತರಾಳಗಳು ಮಾತ್ರ ಉಳಿದಿವೆ. ಜಿನಾಲಯದ ೩ ಗರ್ಭಗೃಹಗಳು ಪೂರ್ವಾಭಿಮುಖವಾಗಿದ್ದು ಒಂದೇ ಸಾಲಿನಲ್ಲಿವೆ. ಇವುಗಳ ಮಧ್ಯದ ಗರ್ಭಗೃಹದಲ್ಲಿ ಮೂರುಅಡಿ ಎತ್ತರದ ಪಾರ್ಶ್ವನಾಥ ತೀರ್ಥಂಕರರ ಶಿಲ್ಪವಿದೆ. ಇದರ ಅಂತರಾಳ ಮತ್ತು ಬಾಗಿಲುವಾಡುಗಳ ಇಕ್ಕೆಲ ಹಾಗೂ ಮೇಲ್ಭಾಗದಲ್ಲಿ ಮುಂಚಾಚಿದ ಪಟ್ಟಿಕೆಗಳಿವೆ. ಬಲಬದಿಯ ಗರ್ಭಗುಡಿಯಲ್ಲಿ ವೃಷಭನಾಥನ ಶಿಲ್ಪವಿದೆ. ಎರಡು ಅಡಿಯ ಎತ್ತರದ ಈ ಶಿಲ್ಪವು ಪದ್ಮಾಸನ ಹಾಕಿ ಕುಳಿತಿದೆ. ಇದರ ಹಿಂದೆ ಶಾಂತಿನಾಥ ತೀರ್ಥಂಕರನ ಮೂರು ಅಡಿ ಎತ್ತರದ ಶಿಲ್ಪವಿದೆ. ಶಿಲ್ಪದ ಪ್ರಭಾವಳಿಯನ್ನು ಹೂಬಳ್ಳಿಗಳಿಂದ ರಚಿಸಲಾಗಿದೆ. ಎಡಬದಿಯ ಗರ್ಭಗೃಹದಲ್ಲಿ ಎರಡು ಅಡಿ ಎತ್ತರದ ಪಾರ್ಶ್ವನಾಥ ಮತ್ತು ಅದರ ಪಕ್ಕದಲ್ಲಿ ಮೂರು ಅಡಿ ಎತ್ತರದ ಇನ್ನೊಂದು ತೀರ್ಥಂಕರರ ಶಿಲ್ಪವಿದೆ. ಈ ಶಿಲ್ಪದ ಕೆಳಭಾಗದಲ್ಲಿ ನಾಗಶಿಲ್ಪವಿದ್ದು ಕೈಗಳಲ್ಲಿ ಪದ್ಮ, ಪಾಶ, ಹಣ್ಣು ಹಿಡಿದು ಕುಳಿತ ಯಕ್ಷ ಯಕ್ಷಿಯರ ಶಿಲ್ಪವಿದೆ. ತೀರ್ಥಂಕರನ ತಲೆಯ ಮೇಲಿನ ಸರ್ಪವು ತನ್ನ ಏಳು ಹೆಡೆಗಳನ್ನು ಬಿಚ್ಚಿಕೊಂಡಿದೆ. ಈ ಮೇಲಿನ ಮೂರು ಗರ್ಭಗೃಹ ಮತ್ತು ಅಂತರಾಳಗಳಿಗೆ ಹೊಂದಿಕೊಂಡಂತೆ ವಿಶಾಲವಾದ

ಸಭಾಮಂಟಪವಿದೆ. ಉತ್ತರ ದಿಕ್ಕಿನ ಗರ್ಭಗೃಹವು ಹಾಳಾಗಿದ್ದು ತೆರೆದ ಅಂತರಾಳ ಮಾತ್ರ ಉಳಿದಿದೆ. ಉಳಿದ ಭಾಗವನ್ನು ಗೋಡೆಯಿಂದ ಮುಚ್ಚಲಾಗಿದೆ. ಮಹಾಮಂಟಪದ ಕಂಬಗಳು ಕಲ್ಯಾಣಿ ಚಾಲುಕ್ಯರ ಶೈಲಿಯವು. ಭುವನೇಶ್ವರಿಯಲ್ಲಿ ಪದ್ಮದ ಅಲಂಕರಣೆಯಿದೆ. ಜಿನಾಲಯದ ಮುಖ್ಯ ಪ್ರವೇಶದ್ವಾರದ ಇಕ್ಕೆಲಗಳಲ್ಲಿ ಕೈಸಾಲೆಗಳು ಮತ್ತು ಜಾಲಂದ್ರಗಳಿವೆ. ದೇಗುಲದ ಅಧಿಷ್ಠಾನವು ಉಪಾನ, ಜಗತಿ, ತ್ರಿಪಟ, ಕುಮುದ ಹಾಗೂ ಪದ್ಮಗಳಿಂದ ಕೂಡಿದೆ. ಗರ್ಭಗೃಹಗಳ ಮೇಲೆ ಯಾವುದೇ ಶಿಖರ ಭಾಗಗಳಿರುವುದಿಲ್ಲ. ಸಭಾಮಂಟಪದಲ್ಲಿ ಒಂದು ಜಿನಶಾಸನವಿದೆ. ಇದರಲ್ಲಿ ಕೊಪ್ಪಳವನ್ನು ಆದಿತೀರ್ಥ, ಮಹಾತೀರ್ಥ, ಮಹಾಕೊಪಣಾಚಲ ಎಂಬುದಾಗಿ ಉಲ್ಲೇಖಿಸಲಾಗಿದ್ದು ಗಂಗರ ಕಾಲದ ಚರಿತ್ರೆಗೆ ಮತ್ತಷ್ಟು ವಿವರಗಳನ್ನು ಕೊಡುತ್ತದೆ. ಕೊಪ್ಪಳದಲ್ಲಿ ಜೈನ ಧರ್ಮವಿದ್ದುದನ್ನು ಸಾರುವ ಹಾಗೂ ಇಂದಿಗೂ ಆರಾಧನೆಯಲ್ಲಿರುವ ಏಕೈಕ ಜಿನಾಲಯವೆಂದರೆ ಈ ಪಾರ್ಶ್ವನಾಥ ತೀರ್ಥಂಕರ ಬಸದಿ.

**ಕೃಷ್ಣದೇವಾಲಯ**

ಕೊಪ್ಪಳ ನಗರದ ಕೋಟೆಯೊಳಗೆ ಶ್ರೀಕೃಷ್ಣದೇವಾಲಯವು ನೆಲೆಗೊಂಡಿದ್ದು ಅದು ಉತ್ತರಾಭಿಮುಖವಾಗಿದೆ. ಈ ದೇವಾಲಯದ ಪುರ್ವದ ಕಟ್ಟಡವು ೧೨-೧೩ನೇ ಶತಮಾನದ್ದೆಂದು ತೋರುತ್ತದೆ. ಕಲ್ಯಾಣಿ ಚಾಲುಕ್ಯರ ಕಾಲದಿಂದ ಈ ದೇವಾಲಯವು ರಚನೆಯಾಗಿರಬಹುದೆಂದು ಊಹಿಸಲು ಅವಕಾಶವಿದೆ. ಡಣಕನಬಾವಿಯ ದಡದಲ್ಲಿರುವ ದೇವಾಲಯ ಇದಾಗಿದೆ. ಗರ್ಭಗೃಹ ಮತ್ತು ಅಂತರಾಳಗಳು ಇದರ ಮುಖ್ಯ ಭಾಗಗಳು. ಗರ್ಭಗೃಹದಲ್ಲಿ ಒಂದು ಜಿನಪೀಠವಿದ್ದು ಆ ಪೀಠದ ಮೇಲೆ ಕಾಳಿಂಗಮರ್ದನ ಕೃಷ್ಣನ ಶಿಲ್ಪವಿದೆ. ಕೃಷ್ಣನು ಕಾಳಿಂಗಸರ್ಪದ ಬಾಲವನ್ನು ಕೈಯಲ್ಲಿ ಹಿಡಿದು ಕಾಲಿನಿಂದ ಅದರ ಹೆಡೆಯನ್ನು ತುಳಿದಿರುವ ಚಿತ್ರವಿದೆ. ಇಲ್ಲಿರುವ ಜೈನಪೀಠ ಮತ್ತಿತರ ದೇವಾಲಯದ ಅವಶೇಷಗಳು ಇದು ಪೂರ್ವದಲ್ಲಿ ಜಿನಾಲಯವಾಗಿತ್ತೆಂದು ಊಹಿಸಲು ಸಾಧ್ಯವಾಗುತ್ತದೆ. ಆದರೆ ವಿಜಯನಗರದ ಕಾಲದಹೊತ್ತಿಗೆ ಈ ಸ್ಥಳದಲ್ಲಿ ಜೈನಧರ್ಮದ ಬದಲಿಗೆ ವೈಷ್ಣವ ಧರ್ಮವು ಪ್ರಚಲಿತವಾಗಿ ಜಿನಾಲಯವು ವೈಷ್ಣವ ದೇವಾಲಯವಾಗಿರುವುದನ್ನು ತಿಳಿಯಬಹುದು. ಈ ದೇವಾಲಯ

ಕಂಬಗಳ ಆಧಾರದಲ್ಲಿ ನಿಂತಿದೆ. ಈ ಕಂಬಗಳು ತುಂಬಾ ಸೂಕ್ಷ್ಮ ಕೆತ್ತನೆಯನ್ನು ಒಳಗೊಂಡಿವೆ. ಹಸಿರು ಮಿಶ್ರಿತ ಬಳಪದ ಕಲ್ಲಿನಲ್ಲಿ ಕಡೆಯಲಾದ ಕಂಬಗಳು ಇವಾಗಿವೆ. ಇವುಗಳನ್ನು ಉದ್ದ ಮತ್ತು ಅಡ್ಡ ಪಟ್ಟಿಕೆಗಳಲ್ಲಿ ಕೆಲವನ್ನು ವೃತ್ತಾಕಾರವಾಗಿ ತಿರುಗಣಿ ಯಂತ್ರ ಬಳಸಿ ನಯಗೊಳಿಸಿರುವುದು ತಿಳಿದುಬರುತ್ತದೆ. ದೇಗುಲದ ಬಲಬದಿಯಲ್ಲಿರುವ ಡಣಕನ ಬಾವಿಯು ದೇವಾಲಯದಷ್ಟೇ ಇತಿಹಾಸವನ್ನು ಹೊಂದಿದೆ. ಇದು ಕೊಪ್ಪಳದ ಕೋಟೆಯ ಒಳಭಾಗದ ಜನರಿಗೆ ನೀರನ್ನೊದಗಿಸುವ ಜೀವಸೆಲೆಯಾಗಿತ್ತು. ತುಂಬಾ ಆಳವಾದ ಮತ್ತು ವಿಶಾಲವಾದ ಕಟ್ಟಡವನ್ನು ಇದು ಹೊಂದಿದೆ. ಈ ದೇವಾಲಯದಲ್ಲಿ ಇದ್ದ ಕಾಳಿಂಗ ಮರ್ದನ ಕೃಷ್ಣನ ಶಿಲ್ಪವನ್ನು ಕನ್ನಡ ವಿಶ್ವವಿದ್ಯಾಲಯದವರು ವಸ್ತುಸಂಗ್ರಹಾಲಯದಲ್ಲಿ ತಂದು ಪ್ರದರ್ಶನಕ್ಕಿಟ್ಟಿದ್ದಾರೆ.

**ಪಾಂಡುರಂಗ ದೇವಾಲಯ**

ಈ ದೇವಾಲಯವು ನಗರದ ಕೋಟೆಯೊಳಗಿದ್ದು ಪೂರ್ವಾಭಿಮುಖವನ್ನು ಹೊಂದಿದೆ. ಕಲ್ಯಾಣಿ ಚಾಲುಕ್ಯರ ಕಾಲಕ್ಕೆ ಇದು ಕಟ್ಟಲ್ಪಟ್ಟಿದೆ ಎಂದು ಗುರುತಿಸಬಹುದು. ದೇವಾಲಯವು ತುಂಬಾ ಜೀರ್ಣಾವಸ್ಥೆಯಲ್ಲಿದೆ. ಗರ್ಭಗೃಹ ಮತ್ತು ವಿಶಾಲವಾದ ತೆರೆದ ಸಭಾಮಂಟಪಗಳನ್ನು ಇದು ಹೊಂದಿದೆ. ಗರ್ಭಗೃಹದ ಎತ್ತರದ ಜಗತಿಯ ಮೇಲೆ ಪಾಂಡುರಂಗ ಕೃಷ್ಣ ಮತ್ತು ರುಕ್ಮಿಣಿಯರ ಶಿಲ್ಪಗಳನ್ನು ಇತ್ತೀಚೆಗೆ ಸ್ಥಾಪಿಸಿರುವರು. ಶಿಲ್ಪಗಳು ತುಂಬಾ ಚಿಕ್ಕವು . ಸಭಾಮಂಟಪದಲ್ಲಿ ಎಂಟು ಕಂಬಗಳಿವೆ. ಇವುಗಳಲ್ಲಿ ನಾಲ್ಕು ಚಚ್ಚೌಕ ಮತ್ತು ವೃತ್ತಾಕಾರವಾಗಿವೆ. ಇವುಗಳ ಮೇಲ್ಭಾಗದಲ್ಲಿ ವೃತ್ತಾಕಾರದ ಫಲಕ ಮತ್ತು ಬೋದಿಗೆಗಳಿವೆ.

**ವೆಂಕಟರಮಣ ದೇವಾಲಯ**

ನಗರದ ಕೋಟೆಯೊಳಗೆ ವೆಂಕಟರಮಣ ದೇವಾಲಯವು ನೆಲೆಗೊಂಡಿದ್ದು ಪೂರ್ವಾಭಿಮುಖವನ್ನು ಹೊಂದಿದೆ. ಕ್ರಿ.ಶ. ೧೨-೧೩ನೇ ಶತಮಾನದ ಕಲ್ಯಾಣಿ ಚಾಲುಕ್ಯರ ವಾಸ್ತುಶಿಲ್ಪದ

ಸ್ವರೂಪವನ್ನು ಇದು ಹೊಂದಿದೆ. ಕೊಪ್ಪಳದ ಕೋಟೆಯ ಒಳಭಾಗದಲ್ಲಿ ಇರುವ ಬ್ರಾಹ್ಮಣರಕೇರಿಯಲ್ಲಿ ಹಲವಾರು ದೇವಾಲಯಗಳಿವೆ. ಅವುಗಳಲ್ಲಿ ವೆಂಕಟರಮಣ ದೇವಾಲಯವು ವಾಸ್ತುಶಿಲ್ಪದ ದೃಷ್ಟಿಯಿಂದ ಮಹತ್ವದ್ದು. ಇದು ಕೂಡಾ ಮೂಲತಃ ಜೈನ ಬಸದಿ. ಎತ್ತರದ ಜಗತಿಯ ಮೇಲೆ ಇದನ್ನು ನಿರ್ಮಿಸಲಾಗಿದೆ. ಈ ದೇವಾಲಯವು ಗರ್ಭಗೃಹ, ತೆರೆದ ಅಂತರಾಳ, ಸಭಾಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಸುಮಾರು ೨ ಅಡಿ ಎತ್ತರದ ಜಿನ ಪೀಠದ ಮೇಲೆ ವಿಜಯನಗರ ಅರಸರ ನಂತರದಲ್ಲಿ ಪ್ರತಿಷ್ಠಾಪಿಸಿದ ವೆಂಕಟೇಶ್ವರನ ಶಿಲ್ಪವಿದೆ. ಗರ್ಭಗೃಹದ ಬಾಗಿಲುವಾಡವು ಅರೆಗಂಬಗಳಿಂದ ಅಲಂಕೃತವಾಗಿದೆ. ತೆರೆದ ಅಂತರಾಳದ ಇಕ್ಕೆಲಗಳಲ್ಲಿ ಚಚ್ಚೌಕವಾಗಿ ಕಡೆದ ಎರಡು ಕಂಬಗಳಿವೆ. ಸಭಾಮಂಟಪದ ಪ್ರವೇಶದ್ವಾರವು ಅರೆಗಂಬ ಮತ್ತು ಮುಂಚಾಚಿದ ಪಟ್ಟಿಕೆಗಳಿಂದ ಕೂಡಿದೆ. ಮೇಲ್ಛಾವಣಿಯಲ್ಲಿ ಪದ್ಮದ ಅಲಂಕರಣದಿಂದ ಕೂಡಿದ ಭುವನೇಶ್ವರಿಯಿದೆ. ಈ ದೇವಾಲಯಗಳ ಜಿನಪೀಠ ಹಾಗೂ ಕೆಲವು ಅವಶೇಷಗಳು ಆ ದೇವಾಲಯದ ಹಿಂದೆ ಜಿನಾಲಯವಾಗಿತ್ತೆಂದು ಸಮರ್ಥಿಸುತ್ತವೆ. ಜೈನಧರ್ಮದ ಪ್ರಭಾವ ಕುಂಠಿತಗೊಂಡಮೇಲೆ ಅದರ ಸ್ಥಾನವನ್ನು ವೈಷ್ಣವ ಮತ್ತು ಶೈವಧರ್ಮಗಳು ಆಕ್ರಮಿಸಿಕೊಂಡವು. ಕ್ರಿ.ಶ. ೧೫೨೧ರಲ್ಲಿನ ಒಂದು ಶಾಸನವು ಕೃಷ್ಣದೇವರಾಯನ ಕಾಲದ್ದಾಗಿದೆ. ಈ ಶಾಸನದಲ್ಲಿ ಕೊಪ್ಪಳದ ಚನ್ನಕೇಶವ ದೇವರಿಗೆ ಹಿರಿಯ ಸಿಂದೋಗಿ ಗ್ರಾಮವನ್ನು ಸಮರ್ಪಿಸಿದ ವಿವರವಿದೆ. ಇದರಿಂದ ವಿಜಯನಗರ ಕಾಲದಲ್ಲಿ ಜಿನಾಲಯವನ್ನು ವೆಂಕಟರಮಣ ಅಥವಾ ಚೆನ್ನಕೇಶವ ದೇವಾಲಯವನ್ನಾಗಿ ಪರಿವರ್ತಿಸಿರುವ ಸಾಧ್ಯತೆಗಳುಂಟು.

**ಗಣೇಶ ದೇವಾಲಯ**

ಗಣೇಶ ದೇವಾಲಯವು ನಗರದ ಕೋಟೆಯೊಳಗಿದ್ದು ಅದು ಪೂರ್ವಾಭಿಮುಖವಾಗಿದೆ. ಇದು ಕೂಡ ಕಲ್ಯಾಣಿ ಚಾಳುಕ್ಯರ ವಾಸ್ತುಶಿಲ್ಪವನ್ನು ಹೋಲುತ್ತದೆ. ಎರಡೂವರೆ ಅಡಿ ಎತ್ತರದ ಅಧಿಷ್ಠಾನದ ಮೇಲೆ ನಿರ್ಮಾಣವಾದ ದೇವಾಲಯು ಇದಾಗಿದೆ. ಇದರ ಮುಖ್ಯ ಭಾಗಗಳೆಂದರೆ

ಗರ್ಭಗೃಹ ಮತ್ತು ಮುಖಮಂಟಪಗಳು. ಗಣೇಶ ಶಿಲ್ಪವು ಗರ್ಭಗುಡಿಯಲ್ಲಿ ೨ ಅಡಿ ಎತ್ತರದಲ್ಲಿ ಪ್ರತಿಷ್ಠಾಪಿಸಲ್ಪಟ್ಟಿದೆ. ಇದರ ಮುಂಭಾಗದಲ್ಲಿ ಅರ್ಧ ಅಡಿ ಎತ್ತರದ ಶಿವಲಿಂಗವಿದೆ. ಗರ್ಭಗೃಹದ ಬಾಗಿಲವಾಡವು ಕಲ್ಲಿನ ಕಮಲಗಳಿಂದ ಅಲಂಕೃತವಾಗಿದೆ. ಗರ್ಭಗೃಹದ ಮೇಲೆ ಚಿಕ್ಕ ಗೋಪುರವಿದೆ. ದೇಗುಲದ ಉಳಿದ ಭಾಗವು ಭಗ್ನವಾಗಿ ಹೋಗಿದೆ.

**ಆಂಜನೇಯ ದೇವಾಲಯ**

ಆಂಜನೇಯ ದೇವಾಲಯವು ನಗರದ ಕೋಟೆಯೊಳಗೆ ಪೂರ್ವಾಭಿಮುಖವಾಗಿದೆ. ಕಲ್ಯಾಣಿ ಚಾಲುಕ್ಯರ ವಾಸ್ತುಶಿಲ್ಪವನ್ನು ಇದು ಹೋಲುತ್ತಿದ್ದು ಈಗಲೂ ಉತ್ತಮ ಸ್ಥಿತಿಯಲ್ಲಿದೆ. ಇದು ತೀರ ಆಧುನಿಕವಾಗಿ ಕಟ್ಟಲ್ಪಟ್ಟಿದೆಯೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಆದುದರಿಂದ ಇದು ಅಷ್ಟೊಂದು ಮಹತ್ವವನ್ನು ವಾಸ್ತುಶಿಲ್ಪದ ರೀತಿಯಲ್ಲಿ ಕಂಡುಕೊಂಡಿಲ್ಲ.

**ಮಳೆಮಲ್ಲೇಶ್ವರ ದೇವಾಲಯ**

ಕೊಪ್ಪಳ ನಗರದ ಪಶ್ಚಿಮಕ್ಕಿರುವ ಬೆಟ್ಟದ ಸಾಲುಗಳಲ್ಲಿ ಮಳೆಮಲ್ಲಪ್ಪನ ಗುಡ್ಡವೂ ಒಂದು. ಈ ಗುಡ್ಡಕ್ಕೆ ಈ ಹೆಸರು ಬಂದಿರುವುದು ಆ ದೇವಸ್ಥಾನದಿಂದ. ವಿಶಾಲ ಪ್ರಾಕಾರವನ್ನು ಹೊಂದಿರುವ ಈ ದೇಗುಲದ ಗರ್ಭಗೃಹ ಮಾತ್ರ ಇಂದು ಲಭ್ಯ. ಗರ್ಭಗೃಹವು ಇತ್ತೀಚೆಗೆ ಪುನರ್ ನಿರ್ಮಿತಗೊಂಡಂತೆ ತೋರುತ್ತದೆ. ಈ ಹಿಂದೆಯೂ ಇಲ್ಲಿ ದೇವಾಲಯವಿದ್ದ ಸಾಧ್ಯತೆಗಳಿವೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ಇದು ನೆಲಮಟ್ಟದಲ್ಲಿದ್ದು ಸರ್ವಕಾಲದಲ್ಲಿಯೂ ನೀರಿನಲ್ಲಿರುತ್ತದೆ. ಈ ದೇಗುಲದ ಮುಂಭಾಗದಲ್ಲಿ ನಂದಿ ಮತ್ತು ಗಣೇಶನ ಶಿಲ್ಪಗಳಿವೆ. ಈ ಶಿಲ್ಪ ಮತ್ತಿತರ ಅವಶೇಷಗಳಿಂದ ಮಳೆಮಲ್ಲಪ್ಪನ ದೇವಾಲಯವು ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಅಸ್ತಿತ್ವದಲ್ಲಿತ್ತೆಂದು ಹೇಳಬಹುದು.

### ಈಶ್ವರ ದೇವಾಲಯ

ಇದು ಕೊಪ್ಪಳ ನಗರದ ಶಿರಸಪ್ಪಯ್ಯನ ಮಠದ ಕೆರೆಯ ಬಳಿಯಿದೆ. ಇದು ಕಲ್ಯಾಣಿ ಚಾಲುಕ್ಯರ ಶೈಲಿಯನ್ನು ಹೊಂದಿದ್ದು ಪೂರ್ವಾಭಿಮುಖವಾಗಿದೆ. ಈಗ ತೀರಾ ಜೀರ್ಣಗೊಂಡಂತೆ ಕಾಣುತ್ತದೆ. ಕಣಶಿಲೆಯಲ್ಲಿ ಕಟ್ಟಲಾದ ಈ ದೇವಾಲಯವು ಗರ್ಭಗೃಹ ಮತ್ತು ಸಭಾ ಮಂಟಪದಿಂದ ಕೂಡಿದೆ. ಗರ್ಭಗೃಹದಲ್ಲಿ ಹುಟ್ಟುಬಂಡೆಯ ಮೇಲೆ ಶಿವಲಿಂಗವನ್ನು ಕೆತ್ತಲಾಗಿದೆ. ಆದರೆ ಇಂದೂ ಇದು ಪೂಜೆಗೆ ಒಳಪಟ್ಟಿಲ್ಲ. ಮೇಲ್ಭಾಗದಲ್ಲಿ ವೃತ್ತಾಕಾರದ ಹಲಗೆ ಮತ್ತು ಬೋದಿಗೆಗಳಿವೆ. ಸಭಾಮಂಟಪದ ಗೋಡೆಯಲ್ಲಿ ಗಣೇಶನ ಉಬ್ಬು ಚಿತ್ರವು ಕೆತ್ತಲ್ಪಟ್ಟಿದೆ.

### ಶಿರಸಪ್ಪಯ್ಯನ ಮಠ

ನಗರದ ದಕ್ಷಿಣ ಭಾಗಕ್ಕೆ ಶಿರಸಪ್ಪಯ್ಯನ ಮಠ ಸ್ಮಾರಕವು ನೆಲೆಗೊಂಡಿದ್ದು ಪೂರ್ವಾಭಿಮುಖವನ್ನು ಹೊಂದಿದ್ದು ಈಗಲೂ ಉತ್ತಮ ಸ್ಥಿತಿಯಲ್ಲಿದೆ. ಇದು ಹಿಂದೂ ಮುಸ್ಲಿಂ ಶೈಲಿಯನ್ನು ಹೊಂದಿದ್ದು ಕ್ರಿ.ಶ. ಸುಮಾರು ೧೬-೧೭ನೇ ಶತಮಾನದಲ್ಲಿ ಕಟ್ಟಲ್ಪಟ್ಟಿದೆ ಎಂದು ಗುರುತಿಸಬಹುದು. ಈ ಕಟ್ಟಡವು ಹಿಂದೂ ಮುಸ್ಲಿಂ ಶೈಲಿಯಲ್ಲಿದೆ. ಕೊಪ್ಪಳದ ಪ್ರಸಿದ್ಧ ಮಠಗಳಲ್ಲಿ ಇದೂ ಒಂದು. ಶಿರಸಪ್ಪಯ್ಯನೆಂಬುವವನು ಒಬ್ಬ ಸೂಫಿ ಸಂತ. ಇವನು ೧೭-೧೮ನೇ ಶತಮಾನದಲ್ಲಿ ಬದುಕಿ ಬಾಳಿದ್ದವನು. ಆ ಕಾರಣದಿಂದ ಇದನ್ನು ಸ್ಥಳೀಯರು ಶಿರಸಪ್ಪಯ್ಯನ ಮಠವೆಂದೇ ಕರೆಯುತ್ತಾರೆ. ಇದು ಗರ್ಭಗೃಹವನ್ನು ಹೊಂದಿದ್ದು ಅದರಲ್ಲಿ ಒಂದು ಗದ್ದುಗೆಯಿದೆ. ಆ ಗದ್ದುಗೆಯು ಶಿರಸಪ್ಪಯ್ಯನ ಗದ್ದುಗೆಯಾಗಿದೆ ಎಂದು ಹೇಳುತ್ತಾರೆ. ೩ ಗರ್ಭಗೃಹಗಳನ್ನು ಹೊಂದಿದ ಈ ದೇವಾಲಯವು ಒಂದರಲ್ಲಿ ವೀರಭದ್ರನ ಕಂಚಿನ ಪ್ರತಿಮೆಯನ್ನು ಒಳಗೊಂಡಿದೆ. ಬಲಬದಿಯ ಗರ್ಭಗೃಹದಲ್ಲಿ ಯಾವುದೇ ಮೂರ್ತಿಯಿಲ್ಲ. ಮುಖ್ಯ ಗರ್ಭಗೃಹದ ಬಾಗಿಲುವಾಡದಲ್ಲಿ ಪದ್ಮವಿದೆ. ಸಭಾಮಂಟಪದಲ್ಲಿ ಎರಡು ಕಪ್ಪು ನಯಶಿಲೆಯ ಕಂಬಗಳಿವೆ. ಇವು ಹೊಯ್ಸಳರ ಶೈಲಿಯಲ್ಲಿದ್ದು ಅತ್ಯಂತ

ನಯವಾಗಿವೆ. ಸಭಾಮಂಟಪದ ಮುಂದಿನ ಆವರಣವು ಹಿಂದೂ ಮುಸ್ಲಿಂ ಶೈಲಿಯ ಕಮಾನಿನ ಆಕಾರದಲ್ಲಿ ಕಲ್ಲು ಮತ್ತು ಗಾರೆಗಳಿಂದ ಕಟ್ಟಲ್ಪಟ್ಟಿದೆ. ಅದರ ಎಡ ಮತ್ತು ಬಲ ಭಾಗಗಳಲ್ಲಿ ಜಾಲಂದ್ರಗಳನ್ನು ಬೆಳಕಿನ ಸಲುವಾಗಿ ನಿರ್ಮಿಸಿರುವರು. ಈ ಮಠವು ಹಿಂದೂ ಮತ್ತು ಮುಸ್ಲಿಂ ಧರ್ಮಗಳ ಜನರ ಪೂಜ್ಯನೀಯ ಕೇಂದ್ರ. ಇಲ್ಲಿ ಮೊಹರಂ ಹಬ್ಬದ ಸಂದರ್ಭದಲ್ಲಿ ವಿಶೇಷ ಉತ್ಸವ, ಆಚರಣೆಗಳು ನಡೆಯುತ್ತವೆ. ಈ ಮಠದ ಅರ್ಚಕರು ವಿಶ್ವಕರ್ಮ ಜನಾಂಗದವರಾಗಿದ್ದಾರೆ. ಇದಕ್ಕೆ ಸುಲ್ತಾನರ ಕಾಲದಲ್ಲಿ ಕಟ್ಟಲಾದ ಮಹಾದ್ವಾರವಿದೆ. ಹಿಂದೂ ಮುಸ್ಲಿಂ ಶೈಲಿಗೆ ಈ ಮಠವು ಒಂದು ಉದಾಹರಣೆಯಾಗಿದೆ. ಮಠದ ಆವರಣದಲ್ಲಿ ಕಲ್ಯಾಣಿ ಚಾಲುಕ್ಯರ ಕಾಲದ ಕಂಬವಿದ್ದು ಅದರಲ್ಲಿ ಭೈರವಿ ಮೊದಲಾದ ಶಿಲ್ಪಗಳನ್ನು ಕಾಣಬಹುದು. ಅಲ್ಲದೆ ಈ ಮಠದ ಮುಂಭಾಗದಲ್ಲಿ ಇದರ ಅರ್ಚಕರ ಪೂರ್ವಜರ ಸಮಾಧಿಗಳಿವೆ.

## ಸಂಗಮೇಶ್ವರ ದೇವಾಲಯ

ಶಿರಸಪ್ಪಯ್ಯನ ಮಠದ ವಾಯವ್ಯಕ್ಕೆ ಈ ದೇವಾಲಯವು ಉತ್ತರಾಭಿಮುಖವಾಗಿದೆ. ಪಾಳೆಯಗಾರರ ಕಾಲದ ವಾಸ್ತುಶಿಲ್ಪ ಶೈಲಿಯನ್ನು ಇದು ಹೊಂದಿದೆ. ಕ್ರಿ.ಶ. ೧೬-೧೭ನೇ ಶತಮಾನದಲ್ಲಿ ಈ ಕಟ್ಟಡದ ಆರಂಭವೆಂದು ಗುರುತಿಸಬಹುದು. ದೇವಾಲಯ ೩ ಗರ್ಭಗೃಹಗಳಿಂದ ಕೂಡಿದೆ. ತೆರೆದ ಪ್ರವೇಶದ್ವಾರ ಮತ್ತು ಸಭಾಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿ ಸುಮಾರು ೨ ಅಡಿ ಎತ್ತರದ ಶಿವಲಿಂಗವಿದೆ. ಉಳಿದ ಗರ್ಭಗೃಹಗಳಲ್ಲಿ ಯಾವುದೇ ವಿಗ್ರಹಗಳಿರುವುದಿಲ್ಲ. ಸಭಾಮಂಟಪದಲ್ಲಿರುವ ಸ್ತಂಭಗಳು ಚಚ್ಚೌಕವಾಗಿವೆ ಮತ್ತು ಅಷ್ಟಮುಖಗಳನ್ನು ಹೊಂದಿವೆ. ಮೇಲ್ಭಾಗದಲ್ಲಿ ವೃತ್ತಾಕಾರದ ಫಲಕವಿದ್ದು ಅದಕ್ಕೆ ಹೊಂದಿಕೊಂಡಂತೆ ಬೋದಿಗೆಗಳನ್ನು ನಿರ್ಮಾಣಮಾಡಲಾಗಿದೆ. ಗರ್ಭಗೃಹದ ಬಾಗಿಲವಾಡದ ಎರಡೂ ಕಡೆಗಳಲ್ಲಿ ತ್ರಿಶೂಲ, ಢಮರು ಮತ್ತು ಗದೆಗಳನ್ನು ಹಿಡಿದು ನಿಂತ ಶೈವ ದ್ವಾರಪಾಲಕರಿರುವರು. ದೇವಾಲಯದ ಲಲಟ ಬಿಂಬದಲ್ಲಿ ಗಜಲಕ್ಷ್ಮಿಯ ಉಬ್ಬು ಕೆತ್ತನೆಗಳಿವೆ. ಗರ್ಭಗೃಹಗಳ ಮೇಲಿನ ಶಿಖರವು ಹಾಳಾಗಿದೆ. ವಿಶಾಲವಾದ ಆವರಣದಲ್ಲಿ ನಿರ್ಮಿಸಲಾದ ಈ

ದೇವಾಲಯಕ್ಕೆ ಪ್ರಾಕಾರ ಗೋಡೆಯಿದ್ದು ಅದು ಈಗ ಹಾಳಾಗಿದೆ. ದೇವಾಲಯದ ಕೆಲವು ಭಾಗಗಳಲ್ಲಿ ಗೋಡೆಗಳ ಮೇಲೆ ಶಿವಲಿಂಗ ನಂದಿ ನಾಗ ಮತ್ತಿತರ ಉಬ್ಬು ಶಿಲೆಗಳನ್ನು ಕೆತ್ತಲಾಗಿದೆ. ಪ್ರಾಕಾರ ಗೋಡೆಗೆ ಪ್ರವೇಶದ್ವಾರವನ್ನು ನಿರ್ಮಿಸಿರುವರು. ಈ ದೇವಾಲಯದ ಮುಂಭಾಗದಲ್ಲಿ ಒಬ್ಬ ಋಷಿಯ ಶಿಲ್ಪವಿದೆ. ತನ್ನ ನಾಲ್ಕೂ ಕೈಗಳಲ್ಲಿ ಕಮಂಡಲ, ದಂಡ ಹಾಗೂ ಪದ್ಮದ ಗುಚ್ಛಗಳನ್ನು ಹಿಡಿದು ಸಮಭಂಗಿಯಲ್ಲಿ ನಿಂತಿರುವ ಯತಿಯ ಇನ್ನೊಂದು ಕೈವರದ ಮುದ್ರೆಯನ್ನು ಹೊಂದಿದೆ. ಇದನ್ನು ಕಣಶಿಲೆಯಿಂದ ಕಡೆಯಲಾಗಿದೆ. ಈ ಸಂಗಮೇಶ್ವರ ದೇವಾಲಯವು ದೇವಾಂಗ ಜನಾಂಗದ ಮಠವೆಂದು ಕರೆಯುತ್ತಾರೆ.

**ಶಂಭುಲಿಂಗ ದೇವಾಲಯ**

ಶಂಭುಲಿಂಗ ದೇವಾಲಯವು ನಗರದ ಕೋಟೆಯ ಒಳಭಾಗದಲ್ಲಿದೆ. ಪೂರ್ವಾಭಿಮುಖವಾಗಿದ್ದು ಕಲ್ಯಾಣಿ ಚಾಲುಕ್ಯರ ವಾಸ್ತುಶಿಲ್ಪವನ್ನು ಇದು ಹೋಲುತ್ತದೆ. ಕ್ರಿ.ಶ. ೧೨-೧೩ನೆಯ ಶತಮಾನದ ಕಟ್ಟಡ ಇದಾಗಿದೆಯೆಂದು ತಿಳಿದುಬರುತ್ತದೆ. ಎರಡು ಅಡಿ ಎತ್ತರದ ಜಗತಿಯ ಮೇಲೆ ನಿರ್ಮಾಣವಾದ ಈ ದೇವಾಲಯವು ಗರ್ಭಗೃಹ, ಸಭಾಮಂಟಪ ಮತ್ತು ಅಂತರಾಳಗಳನ್ನು ಹೊಂದಿದೆ. ಗರ್ಭಗೃಹ ಮತ್ತು ಅಂತರಾಳದ ಬಾಗಿಲುವಾಡಗಳು ಸರಳ ಕೆತ್ತನೆಯಲ್ಲಿವೆ. ಎರಡೂ ಬದಿಯ ಹಾಗೂ ಲಲಾಟ ಬಿಂಬಗಳಲ್ಲಿ ಪದ್ಮವನ್ನು ಕೆತ್ತಲಾಗಿದೆ. ಗರ್ಭಗೃಹವು ಎರಡು ಅಡಿಯ ಎತ್ತರದ ಶಿವಲಿಂಗವನ್ನು ಹೊಂದಿಕೊಂಡಿದೆ. ಇದು ಕಪ್ಪು ಶಿಲೆಯಲ್ಲಿದ್ದಾಗಿದೆ. ಸಭಾಮಂಟಪದಲ್ಲಿ ಎರಡು ಕಂಬಗಳನ್ನು ದೇವಾಲಯವು ಹೊಂದಿದೆ. ಈ ಕಂಬಗಳು ಕೆಳಗೆ ಚಚ್ಚೌಕವಾಗಿದ್ದು ಮೇಲ್ಭಾಗದಲ್ಲಿ ವೃತ್ತಾಕಾರ ಹಾಗೂ ಗಂಟೆಯಾಕಾರವನ್ನು ಹೊಂದಿವೆ. ಫಲಕ ಮತ್ತು ಬೋದಿಗೆಗಳು ಚಚ್ಚೌಕವಾಗಿವೆ. ಸಭಾಮಂಟಪದಲ್ಲಿ ಚಿಕ್ಕದಾದ ನಂದಿಯ ವಿಗ್ರಹವಿದೆ. ದೇವಾಲಯವು ಹಲವು ಬಾರಿ ಜೀರ್ಣೋದ್ಧಾರಗೊಂಡಿದೆ. ಹೊರಗೋಡೆಯ ಮೇಲೆ ನಂದಿ, ಪುಂಗಿ ಊದುತ್ತಿರುವ ಹಾವಾಡಿಗನ ಚಿತ್ರ, ನಾಗ, ಆಂಜನೇಯ,

ಗರುಡ ಮತ್ತು ಸಿಂಹಗಳ ಉಬ್ಬು ಚಿತ್ರಗಳನ್ನು ಕೆತ್ತಲಾಗಿದೆ. ದೇವಾಲಯವು ಎರಡು ಅಡಿ ಎತ್ತರದ ಅಧಿಷ್ಠಾನದ ಮೇಲೆ ಕಟ್ಟಲ್ಪಟ್ಟಿದೆ. ಗರ್ಭಗೃಹದ ಮೇಲೆ ದ್ರಾವಿಡ ಮಾದರಿಯ ಶಿಖರವನ್ನು ಇತ್ತೀಚೆಗೆ ಪುನರ್ ನಿರ್ಮಿಸಿದಂತೆ ತಿಳಿದುಬರುತ್ತದೆ.

**ಬಹದ್ದೂರ್ ಬಂಡೆಯ ಕೆಲವು ದೇವಾಲಯಗಳು**

ಕೊಪ್ಪಳದಿಂದ ದಕ್ಷಿಣಕ್ಕೆ ೩ ಕಿ.ಮೀ ದೂರದಲ್ಲಿ ಬಹದ್ದೂರ್ ಬಂಡೆಯ ಪ್ರಸಿದ್ಧ ಕೋಟೆಯಿದೆ. ಈ ಕೋಟೆಯಿಂದಲೇ ಈ ಗ್ರಾಮಕ್ಕೆ ಬಹದ್ದೂರ್ ಬಂಡೆ ಎಂಬ ಹೆಸರು ಬಂದಿದೆ ಎಂದು ವಿದ್ವಾಂಸರುಅಭಿಪ್ರಾಯಪಡುತ್ತಾರೆ. ಇಲ್ಲಿ ಸುಂದರವಾದ ಒಂದು ಈಶ್ವರನ ದೇವಾಲಯವಿದೆ. ಭೂ ಮಟ್ಟದಲ್ಲಿರುವ ಈ ದೇವಾಲಯವು ಗರ್ಭಗೃಹ ಮತ್ತು ಸಭಾಮಂಟಪಗಳನ್ನು ಒಳಗೊಂಡಿದೆ. ಗರ್ಭಗೃಹದಲ್ಲಿ ಶಿವಲಿಂಗವು ಪ್ರತಿಷ್ಠಾಪಿಸಲ್ಪಟ್ಟಿದೆ. ಗರ್ಭಗೃಹದಬಾಗಿಲುವಾಡವು ಅರೆಗಂಬ ಹೂವುಗಳಿಂದ ಅಲಂಕೃತವಾಗಿದೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿ, ಎರಡೂ ಕಡೆಗಳಲ್ಲೂ ತ್ರಿಶೂಲ, ಡಮರು ಮತ್ತು ಗದೆಗಳನ್ನು ಹಿಡಿದುನಿಂತಿರುವ ದ್ವಾರಪಾಲಕರ ಉಬ್ಬು ಕೆತ್ತನೆಗಳಿವೆ. ಸಭಾಮಂಟಪದಲ್ಲಿ ನಾಲ್ಕು ಕಂಬಗಳಿವೆ. ಇವುಗಳಲ್ಲಿ ಮೊದಲ ಸಾಲಿನಲ್ಲಿಯವು ಚಚ್ಚೌಕ ಮತ್ತು ವೃತ್ತಾಕಾರದಲ್ಲಿವೆ. ಎರಡನೇ ಸಾಲಿನ ಕಂಬಗಳು ಚಚ್ಚೌಕ ಮತ್ತು ಅಷ್ಟಮುಖಗಳನ್ನು ಹೊಂದಿವೆ. ಈ ದೇವಾಲಯದ ಪಕ್ಕದಲ್ಲಿ ಪ್ರಾಚೀನ ಬಾವಿಯೊಂದು ಪತ್ತೆಯಾಗಿದೆ. ದೇಗುಲದ ಮುಂಭಾಗದಲ್ಲಿ ದೀಪಸ್ತಂಭವನ್ನು ನಿಲ್ಲಿಸಲಾಗಿದೆ.

ಬಹದ್ದೂರ್ ಬಂಡೆಯ ಇನ್ನೊಂದು ದೇವಾಲಯ ವಿಜಯನಗರೋತ್ತರ ಕಾಲದ್ದು. ಅದನ್ನು ಬರಮಪ್ಪ ದೇವಾಲಯ ಎಂದು ಕರೆಯುತ್ತಾರೆ. ಅತ್ಯಂತ ಜೀರ್ಣವಾಗಿದ್ದು ಪೂರ್ವಾಭಿಮುಖವಾಗಿದೆ. ಕ್ರಿ.ಶ. ೧೬-೧೭ನೇ ಶತಮಾನದಲ್ಲಿ ಕಟ್ಟಲ್ಪಟ್ಟಿರಬಹುದು ಎಂದು ಶಂಕಿಸಲಾಗಿದೆ. ಬಹದ್ದೂರ್ ಬಂಡೆ ಕೋಟೆಯನ್ನು ಕಟ್ಟಿಸಿದ ಮಹಮ್ಮದ್ ಉಸ್ಮಾನ್ ಕೋವಾರ್ ಎಂಬ

ಹೈದರಾಲಿಯ ಅಧಿಕಾರಿಯು ಈ ದೇವಸ್ಥಾನವನ್ನು ಕಟ್ಟಿಸಿದನೆಂದು ತಿಳಿದುಬರುತ್ತದೆ. ಗರ್ಭಗೃಹ ಮತ್ತು ಸಭಾಮಂಟಪಗಳನ್ನೊಳಗೊಂಡ ಈ ದೇಗುಲದಲ್ಲಿ ಬ್ರಹ್ಮದೇವರೆಂದು ಕರೆಯಲ್ಪಡುವ ಶಿಲ್ಪವಿದೆ. ಇದು ತನ್ನ ಕೈಗಳಲ್ಲಿ ತ್ರಿಶೂಲ, ಅಂಕುಶ ಮತ್ತು ಖಡ್ಗಗಳನ್ನು ಹಿಡಿದು ಸುಖಾಸೀನವಾಗಿ ಕುಳಿತ ಒಂದು ಶಿಲ್ಪವಾಗಿದೆ. ಸಭಾಮಂಟಪದಲ್ಲಿ ಕಂಬಗಳಿಲ್ಲ. ಸುತ್ತಲೂ ಗೋಡೆಯ ಮೇಲೆ ಮಾಡವು ನಿಂತಿದೆ. ಗರ್ಭಗೃಹದ ಬಾಗಿಲುವಾಡವು ಸರಳ ಕೆತ್ತನೆಯಲ್ಲಿದೆ. ಲಲಾಟ ಬಿಂಬದಲ್ಲಿ ಪದ್ಮವನ್ನು ಖಂಡರಿಸಲಾಗಿದೆ. ದೇವಾಲಯಗಳನ್ನು ಕಣಶಿಲೆ ಗಚ್ಚು ಗಾರೆಗಳಿಂದ ನಿರ್ಮಿಸಲಾಗಿದೆ.

ಇದು ಕೊಪ್ಪಳ ವಾಸ್ತುಶಿಲ್ಪದ ವಿಹಂಗಮ ನೋಟ. ಇತ್ತೀಚಿನ ದೇವಾಲಯಗಳ ನಿರ್ಮಾಣವನ್ನು ಇಲ್ಲಿ ವಿಶ್ಲೇಷಿಸಲಾಗಿಲ್ಲ. ಸ್ವಾತಂತ್ರ್ಯೋತ್ತರ ಮತ್ತು ಸ್ವಾತಂತ್ರ್ಯ ಪೂರ್ವದಲ್ಲಿ ಕೊಪ್ಪಳ ಪ್ರದೇಶದಲ್ಲಿ ಅನೇಕ ದೇವಾಲಯಗಳು ಕಟ್ಟಲ್ಪಟ್ಟಿವೆ. ಜೊತೆಗೆ ಕೊಪ್ಪಳ ಕುಕನೂರು, ಹುಲಿಗಿ ಮುಂತಾದ ಕಡೆಗಳಲ್ಲಿ ಮಸೀದಿ ಮತ್ತು ಚರ್ಚುಗಳನ್ನು ಕಾಣಬಹುದು. ಇವು ಆಧುನಿಕ ಬಗೆಯ ವಾಸ್ತುವನ್ನು ಹೊಂದಿದ್ದು ಎಷ್ಟೋಬಾರಿ ಸಂದರ್ಭಕ್ಕೆ ತಕ್ಕಂತೆ ಕಟ್ಟಡಗಳನ್ನು ಬೆಳೆಸಿಕೊಂಡು ಹೋಗಲಾಗಿದೆ. ಜೊತೆಗೆ ಹಿಂದಿನ ಪರಂಪರೆಯ ಹಿನ್ನೆಲೆಯಲ್ಲಿ ಅಲ್ಪಸ್ವಲ್ಪ ಬದಲಾವಣೆಯೊಡನೆ ಅವು ನಿರ್ಮಿತವಾಗಿವೆ. ಆಧುನಿಕ ದೇವಾಲಯಗಳು ಅವೇ ಒಂದು ಸ್ವತಂತ್ರ ಶೈಲಿಗಳೆಂಬಂತೆ ನಿರ್ಮಾಣವಾಗುತ್ತಿವೆ. ಚರ್ಚುಗಳನ್ನು ಕಟ್ಟುವುದರ ಮೂಲಕ ಇತ್ತೀಚೆಗೆ ವಾಸ್ತುಶಿಲ್ಪಕ್ಕೆ ಒಂದು ಹೊಸಮುಖವನ್ನು ಸೇರಿಸಿದಂತಾಗಿದೆ. ಅವುಗಳ ವಿವೇಚನೆಯನ್ನು ಇಲ್ಲಿ ಎತ್ತಿಕೊಂಡಿಲ್ಲ. ಒಟ್ಟಿನಲ್ಲಿ ಕರ್ನಾಟಕದಲ್ಲಿ ಕಾಲಕಾಲಕ್ಕೆ ಆದ ಪರಿವರ್ತನೆಗಳನ್ನು ಕೊಪ್ಪಳದ ದೇವಾಲಯಗಳು ಅಳವಡಿಸಿಕೊಳ್ಳುತ್ತಾ ಬಂದಿವೆ. ಕೊಪ್ಪಳದ ದೇವಾಲಯಗಳು ಎಲ್ಲ ಶೈಲಿಯ ಉತ್ತಮ ಅಂಶಗಳನ್ನು ಮೈಗೂಡಿಸಿಕೊಂಡು ತನ್ನದೇ ಆದ ರೀತಿಯಲ್ಲಿ ವಾಸ್ತುಶಿಲ್ಪ ಕಲೆಯನ್ನು ಬೆಳೆಸಿಕೊಂಡು ಬಂದಿದೆ ಎಂಬುದು ಮಾತ್ರ ಖಚಿತ.

# ಅಧ್ಯಾಯ ೬

# ಕೊಪ್ಪಳ : ಧಾರ್ಮಿಕ ಇತಿಹಾಸ

೬.೧. ಬೌದ್ಧ ಧರ್ಮ

೬.೨. ಜೈನ ಧರ್ಮ

೬.೩. ವೀರಶೈವ ಧರ್ಮ

೬.೪. ವೈದಿಕ ಧರ್ಮ

೬.೫. ಇಸ್ಲಾಂ ಧರ್ಮ

೬.೬. ಕ್ರೈಸ್ತ ಧರ್ಮ

೬.೭. ಸೂಫಿ ಪಂಥ

## ಅಧ್ಯಾಯ ೬

# ಕೊಪ್ಪಳ : ಧಾರ್ಮಿಕ ಇತಿಹಾಸ

ಕರ್ನಾಟಕ ರಾಜ್ಯವು ಹಲವು ನೇಯ್ಗೆಗಳ ಒಂದು ಸಂಕೀರ್ಣ ಸಂಸ್ಕೃತಿ. ಈ ಸಂಸ್ಕೃತಿಯ ಬಹು ಪ್ರಮುಖ ವಿಚಾರಗಳು ಧಾರ್ಮಿಕ ಆಚರಣೆಗಳಲ್ಲಿ ವ್ಯಕ್ತವಾಗುತ್ತವೆ. ಧರ್ಮವೊಂದು ಪ್ರತಿಷ್ಠಾನಗೊಳ್ಳಬೇಕಾದರೆ ಅದು ತನ್ನದೇ ಆದ ಹತ್ತು ಹಲವು ಆಚರಣೆಗಳನ್ನು ಸಮಾಜದಲ್ಲಿ ನೆಲೆಗೊಳಿಸಿರಬೇಕು. ಯಾವುದೇ ಒಂದು ಧರ್ಮ ರಾಜಾಜ್ಞೆಯ ಮೂಲಕವಾಗಲಿ ಅಥವಾ ಇನ್ನಾವುದೋ ಅತಿಮಾನುಷ ಶಕ್ತಿಗಳಿಂದಾಗಲಿ ಒಮ್ಮಿಂದೊಮ್ಮಿಗೆ ಚಾಲ್ತಿಗೆ ಬರುವುದಿಲ್ಲ. ಏಕೆಂದರೆ ಧರ್ಮವು ಬಹು ಸೂಕ್ಷ್ಮ ನೆಲೆಯುಳ್ಳದ್ದು. ಸಾಮಾಜಿಕ ಆರ್ಥಿಕ ಮತ್ತು ಶೈಕ್ಷಣಿಕ ಅಂಶಗಳು ಒಂದು ಸಮಾಜದಲ್ಲಿ ಧರ್ಮ ಅಧಿಷ್ಠಾನಗೊಳ್ಳಲು ಕಾರಣವಾಗುತ್ತವೆ. ಒಂದು ಪ್ರದೇಶದ ಭೌಗೋಳಿಕ ಮತ್ತು ನೈತಿಕ ನೆಲೆಗಟ್ಟುಗಳ

ಹಿನ್ನೆಲೆಯಲ್ಲಿ ಧರ್ಮದ ಅಧಿಷ್ಠಾನವನ್ನು ಸೂಕ್ಷ್ಮವಾಗಿ ಅವಲೋಕಿಸಬಹುದು. ಯಾವುದೇ ಪರಿಸರ ಒಂದು ಒಪ್ಪಿತ ಅಧ್ಯಾತ್ಮಿಕ ಬದುಕನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡಿರುತ್ತವೆ. ಅಧ್ಯಾತ್ಮದ ಬದುಕು ಅದು ಇಹಪರದ ಆಲೋಚನೆಯಾಗಿದೆ. ಧರ್ಮವು ದೈವಿಕ ನೆಲೆಯಲ್ಲಿ ಪ್ರಸಾರಕ್ಕೆ ಬರುತ್ತದೆ. ಈ ದೈವಿಕ ನೆಲೆಯು ಹಲವು ಆಚರಣೆಗಳು ನಂಬಿಕೆಗಳ ಮೂಲಕ ಹುಟ್ಟಿಕೊಳ್ಳುತ್ತವೆ. ಯಾವುದೇ ಒಂದು ಸಂಗತಿಗೆ ಮನುಷ್ಯ ಬದ್ಧನಾಗಬೇಕಾದರೆ, ಅವನು ಸಮಾಜದ ಒಪ್ಪಿತ ಮೌಲ್ಯಗಳನ್ನು ತನ್ನೊಳಗೆ ಅಳವಡಿಸಿಕೊಂಡಿದ್ದಾನೆಂಬುದು ಇಲ್ಲಿ ಮಹತ್ವದ ಸಂಗತಿ. ಸಾಮಾಜಿಕ ಒಪ್ಪಂದಗಳು ಅವನಲ್ಲಿ ನೆಲೆಗೊಂಡಿರುತ್ತವೆ. ಆಚರಣೆಗಳು ಬಲಿಯುವುದಕ್ಕೂ ಮುನ್ನ ಅವು ತೀರಾ ಸೂಕ್ಷ್ಮ (micro)ನೆಲೆಯಲ್ಲಿ ಕಾರ್ಯನಿರ್ವಹಿಸುತ್ತವೆ. ಭಾರತದ ಸಂದರ್ಭದಲ್ಲಿ ಆಚರಣೆಗಳು ಹೆಚ್ಚು ಕಟ್ಟುನಿಟ್ಟಾಗಿ ಬೆಳೆದು ಬಂದಿರುವುದು ತಿಳಿದುಬರುತ್ತದೆ. ಹಾಗಾಗಿ ಪ್ರಾಚೀನ ಕಾಲಘಟ್ಟದಿಂದ ಆರ್ವಾಚೀನ ಕಾಲಘಟ್ಟದವರೆಗೆ ಒಂದು ಧರ್ಮ ಮಾತ್ರ ಎಡೆಬಿಡದೆ ಕೆಲಸ ಮಾಡಿದೆ. ಅದು ಅನೇಕ ಬಾರಿ ಅತಿರೇಕವನ್ನೂ ಹೊಂದಿದೆ. ಇಂತಹ ಸಂದರ್ಭದಲ್ಲಿ ಬೇರೊಂದು ಧರ್ಮವು ಹುಟ್ಟಿಕೊಳ್ಳಲು ಕಾರಣವಾಗಿದೆ. ಆ ಕಾರಣದಿಂದ ಧಾರ್ಮಿಕ ಪ್ರಯೋಗಶೀಲತೆ ಹೆಚ್ಚು ಕಂಡುಬಂದಿದೆ. ವೈದಿಕ ಸಂಸ್ಕೃತಿಯಿಂದ ಹುಟ್ಟಿಕೊಂಡ ಧಾರ್ಮಿಕ ಕ್ರಿಯಾಚರಣೆಗಳು ಪ್ರಧಾನಧಾರೆಯಾಗಿ ಭಾರತೀಯ ಸಂದರ್ಭದಲ್ಲಿ ಮಿಂಚಿವೆ. ಇದನ್ನು ಭಾರತೀಯ ಸಂಸ್ಕೃತಿಯ ಒಂದು ಭಾಗವೇ ಎಂದು ಗುರುತಿಸಲಾಗುತ್ತದೆ. ಆದರೆ ಇವುಗಳಿಗಳಿಗೆ ಪ್ರತಿರೋಧದ ನೆಲೆಯಲ್ಲಿ ಜೈನ, ಬೌದ್ಧ, ವೀರಶೈವ ಮತಗಳಂತಹ ಧರ್ಮಗಳು ಚರಿತ್ರೆಯಲ್ಲಿ ನೆಲೆಗೊಂಡಿವೆ.

ವೇದಕಾಲವನ್ನು ಭಾರತೀಯರು ಧಾರ್ಮಿಕ ಹಿನ್ನೆಲೆಯಲ್ಲಿ ಬಹಳ ಮಹತ್ವದ ಕಾಲಘಟ್ಟ ಎಂದು ಗುರುತಿಸಿಕೊಳ್ಳುತ್ತಾರೆ. ಏಕೆಂದರೆ ಉಪನಿಷತ್ತುಗಳಲ್ಲಿ ಕಂಡುಬರುವ ಮಾನವನ ನಡೆ-ನುಡಿ, ಆಚಾರ-ವಿಚಾರಗಳ ತಿಳುವಳಿಕೆಯ ಮಟ್ಟವನ್ನು ಅವು ತಿಳಿಸುತ್ತವೆ. ಉಪನಿಷತ್ತುಗಳು ವೇದಾಂತಗಳಾಗಿದ್ದು ಅವುಗಳಲ್ಲಿ ಜೀವನ ಮೌಲ್ಯಗಳನ್ನು ಹೇಳಲಾಗಿದೆ. ಆ ಜೀವನ ಮೌಲ್ಯಗಳು ಆಚ್ಚ

ಭಾರತೀಯ ಪರಂಪರೆಯಲ್ಲಿ ಹುಟ್ಟಿಕೊಂಡಿದ್ದರೂ ಬರುಬರುತ್ತಾ ಅವುಗಳಲ್ಲಿ ಶೈಥಿಲ್ಯವು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಉಪನಿಷತ್ತುಗಳನ್ನು ವಿವರಿಸುವ ಆರು ಪಂಥಗಳು ಹುಟ್ಟಿಕೊಂಡವು. ಅವುಗಳನ್ನು ಆರು ದರ್ಶನಗಳೆಂದೇ ಕರೆಯುವರು. ಜೀವನ ಮೌಲ್ಯದ ತರ್ಕವನ್ನು ಲೆಕ್ಕಾಚಾರ ಹಾಕುವಲ್ಲಿ ಈ ಎಲ್ಲಾ ದರ್ಶನಗಳು ತುಂಬಾ ಕೆಲಸ ಮಾಡಿವೆ. ಆಗಮುಗಳ ಕಾಲಕ್ಕೆ ಧರ್ಮದಲ್ಲಿ ಸರಳ ದಾರಿಗಳನ್ನು ಹುಡುಕಿಕೊಳ್ಳಲಾಗಿದೆ. ಮನುಷ್ಯನು ಅಲೌಕಿಕ ಬದುಕನ್ನು ಸಾಗಿಸಬೇಕೆಂದು ಅವು ಆಗ್ರಹಪಡಿಸುತ್ತವೆ. ಇದರ ಜೊತೆಜೊತೆಗೆ ಹುಟ್ಟಿಕೊಂಡ ಚಾರ್ವಾಕನ ನಾಸ್ತಿಕ ಮತವು ಮತ್ತೊಂದು ಮಹತ್ವದ ಪ್ರತಿರೋಧವನ್ನು ಹುಟ್ಟುಹಾಕಿತು. ಇದು ಭಾರತೀಯ ಎಡವಾದಿ ಚಿಂತನೆಗೆ ದಾರಿಮಾಡಿಕೊಟ್ಟಿತು. ಈ ನಾಸ್ತಿಕ ಮತವು ಮೌಲ್ಯಗಳನ್ನು ಹೇಳುವುದರ ಜೊತೆಗೆ ಮಾನವ ಜೀವನ ಕ್ರಮವನ್ನು ಹೆಚ್ಚು ಸಂಯುಕ್ತಿಕವಾಗಿ ಹೇಳತೊಡಗಿತು. ನಮ್ಮಲ್ಲಿ ಮೂವರು ಧಾರ್ಮಿಕರಿದ್ದರೆ ಒಬ್ಬನು ನಾಸ್ತಿಕನೆಂಬುದನ್ನು ಚಾರ್ವಾಕನು ಮೊದಲು ಗುರುತಿಸುತ್ತಾನೆ. ಈ ಪ್ರಮಾಣವು ಸ್ವಾತಂತ್ರೋತ್ತರ ಭಾರತದಲ್ಲಿ ಇನ್ನೂ ಅಧಿಕವಾಗಿದೆ.

ಮಾನವನ ಜೀವನ ಕ್ರಮವನ್ನು ನಿರ್ದಿಷ್ಟಪಡಿಸಿ ಧರ್ಮಶಾಸ್ತ್ರಗಳು ನಮ್ಮಲ್ಲಿ ರಚಿತವಾಗಿವೆ. ಅವುಗಳಲ್ಲಿ ಮನುಧರ್ಮಶಾಸ್ತ್ರ ಬಹಳ ಮುಖ್ಯವಾದುದು. ಯಾಜ್ಞವಲ್ಕನ ಬ್ರಹ್ಮಸೂತ್ರಗಳು, ಕೌಟಿಲ್ಯನ ಅರ್ಥಶಾಸ್ತ್ರ ಮನುಧರ್ಮದ ಶಾಸ್ತ್ರದ ಹಿನ್ನೆಲೆಯಲ್ಲಿಯೇ ಹುಟ್ಟಿಕೊಂಡ ದಂಡನೀತಿ ಶಾಸ್ತ್ರಗಳು. ಸಾಮಾಜಿಕನ ಬದುಕನ್ನು ನಿರ್ದಿಷ್ಟ ಕಟ್ಟಳೆಗಳಿಗೊಳಪಡಿಸಿ ಅವನು ಧರ್ಮಿಷ್ಠನಾಗಬೇಕೆಂದು ಅವು ಆಗ್ರಹಿಸುತ್ತವೆ. ಈ ಹಿನ್ನೆಲೆಯಲ್ಲಿ ಭಾರತೀಯ ಧರ್ಮವು ಹಲವು ಕಟ್ಟುಪಾಡುಗಳನ್ನು ಹೊಂದಿಕೊಂಡು ಯಾವುದೋ ಒಂದು ರೀತಿಯಲ್ಲಿ ಸಂಕುಚಿತತನವನ್ನು ಪ್ರಸ್ತುತಪಡಿಸುತ್ತವೆ. ಈ ಹಿನ್ನೆಲೆಯಲ್ಲಿ ಭಾರತೀಯ ಸಂದರ್ಭದ ಧಾರ್ಮಿಕ ಬದುಕನ್ನು ವಿವೇಚನೆಗೆ ಒಳಪಡಿಸಬೇಕಾದ ಅಗತ್ಯವಿದೆ. ಈಗಾಗಲೇ ಹಲವು ವಿದ್ವಾಂಸರು ಈ ಕಾರ್ಯದಲ್ಲಿ ತಲ್ಲೀನರಾಗಿದ್ದಾರೆ. ಆದರೆ ಪಟ್ಟಭದ್ರ ಹಿತಾಸಕ್ತಿಗಳ ಹಿಡಿತದಿಂದ ಅವರ ಧಾರ್ಮಿಕ ಅವಲೋಕನದ ಪುನರ್ ನಿರ್ಮಿತಿಗಳನ್ನು ಹೆಚ್ಚು ಪ್ರಚಾರಗೊಳಿಸಲು ಆಗಿಲ್ಲ.

ವೈದಿಕ ಯಜ್ಞಯಾಗಾದಿಗಳನ್ನು ವಿರೋಧಿಸಿ ಮತ್ತು ಧರ್ಮದ ಹೆಸರಿನಲ್ಲಿ ನಡೆಯುವ ವಿಸಂಗತಿಗಳನ್ನು ಕಂಡು ಕ್ರಿ.ಪೂ. ೬ನೇ ಶತಮಾನದಲ್ಲಿ ಭಾರತದಲ್ಲಿ ಎರಡು ಧರ್ಮಗಳು ಹುಟ್ಟಿಕೊಂಡವು. ಈ ಧರ್ಮಗಳು ಯಜ್ಞಕ್ರಮಗಳನ್ನು ವಿರೋಧಿಸಿದವು. ಈ ಹಿನ್ನೆಲೆಯಲ್ಲಿ ಇವುಗಳನ್ನು ಅವೈದಿಕ ಧರ್ಮಗಳೆಂದು ಗುರುತಿಸುತ್ತಾರೆ. ಏಕೆಂದರೆ ಇವು ವೈದಿಕ ಧರ್ಮಗಳಿಗೆ ಪ್ರತಿರೋಧವಾಗಿ ಜನ್ಮಪಡೆದಂಥಹವುಗಳು. ಕ್ರಿ.ಪೂ. ೬ನೇ ಶತಮಾನದ ಭಾರತದ ಸಾಮಾಜಿಕ ಸಂದರ್ಭವನ್ನು ಅರ್ಥಮಾಡಿಕೊಂಡಾಗ ಈ ಧರ್ಮಗಳ ಜನನಕ್ಕೆ ಕಾರಣವಾದ ಅಂಶಗಳನ್ನು ಹುಡುಕಿಕೊಳ್ಳಬಹುದು. ಮನುಷ್ಯನ ಧಾರ್ಮಿಕ ಸ್ವಾತಂತ್ರ್ಯವನ್ನು ಮತ್ತು ಅವನ ಭೌತಿಕ ಮತ್ತು ಅಭೌತಿಕ ಅಪೇಕ್ಷೆಗಳನ್ನು ಈಡೇರಿಸಿಕೊಳ್ಳಲು ಒಂದು ಸ್ವಸ್ಥ ಧಾರ್ಮಿಕ ವ್ಯವಸ್ಥೆಯ ಅಗತ್ಯವು ಅಂದು ಇತ್ತು. ಏಕೆಂದರೆ ವೈದಿಕ ಧರ್ಮದಲ್ಲಿ ಯಜ್ಞದ ಹೆಸರಿನಲ್ಲಿ ಪ್ರಾಣಿಹಿಂಸೆ ನಡೆಯುತ್ತಿತ್ತು. ಮೋಕ್ಷದ ಹೆಸರಿನಲ್ಲಿ ದರೋಡೆ ನಡೆಯುತ್ತಿತ್ತು. ಈ ಹಿನ್ನೆಲೆಯಲ್ಲಿ ಧರ್ಮವನ್ನು ಇಂತಹ ವಿಸಂಗತಿಗಳಿಂದ ದೂರವಿಟ್ಟು ಸರಳ ಅಧ್ಯಾತ್ಮ ಮಾರ್ಗಗಳನ್ನು ಹುಡುಕಿಕೊಂಡು ಮಹಾವೀರ ಮತ್ತು ಸಿದ್ಧಾರ್ಥರು ಹೋದರು. ಅವರ ಆಲೋಚನೆಗಳ ಹಿನ್ನಲೆಯಲ್ಲಿ ಹಿಂಸೆಯನ್ನು ವಿರೋಧಿಸಿದ ಯಜ್ಞವನ್ನು ವಿರೋಧಿಸಿದ ಧಾರ್ಮಿಕ ಸ್ವಾತಂತ್ರ್ಯವನ್ನು ನೀಡುವಂಥ ಒಂದು ಧರ್ಮಪ್ರಣಾಳಿಗಳನ್ನು ಅವರಿಬ್ಬರು ರೂಪಿಸಿದರು. ಬೌದ್ಧ ಮತ್ತು ಜೈನಧರ್ಮದಲ್ಲಿನ ಸಾಮ್ಯ ವೈಷಮ್ಯತೆಗಳನ್ನು ಅವಲೋಕಿಸಿದಾಗ ಇದಿಷ್ಟು ತಿಳಿದುಬರುತ್ತದೆ. ಈ ಕಾರಣಗಳಿಂದಾಗಿ ಭಾರತೀಯ ಸಂಸ್ಕೃತಿ ಮೂರು ಪ್ರಬಲ ಧರ್ಮಗಳ ನೆಲೆಯಾಗಿ ರೂಪಗೊಂಡಿದೆ. ಆದರೆ ಈ ಧರ್ಮಗಳು ಕಾಲಾಂತರದಲ್ಲಿ ಹೊಸ ಆಲೋಚನೆಗಳನ್ನು ಪಡೆದುಕೊಂಡು ಹಲವು ತಿರುವುಗಳನ್ನು ಪಡೆದುಕೊಂಡಿವೆ. ಬೌದ್ಧಧರ್ಮವು ಹೀನಯಾನ ಮತ್ತು ಮಹಾಯಾನವೆಂದಾದರೆ, ಜೈನಧರ್ಮವು ಶ್ವೇತಾಂಬರ ಮತ್ತು ದಿಗಂಬರ ಎಂಬ ಪದಗಳನ್ನು ಹುಟ್ಟುಹಾಕಿಕೊಂಡಿತು. ಈ ಪಂಥಗಳು ಕರ್ನಾಟಕದ ಮಧ್ಯಕಾಲೀನ ಚರಿತ್ರೆಯವರೆಗೂ ಒಂದರ ಮೇಲೊಂದು ಸವಾರಿ ಮಾಡಿರುವುದು ಕಂಡುಬರುತ್ತದೆ. ಅನಂತರ ಶಂಕರಾಚಾರ್ಯರು, ಮಧ್ವರು ಮತ್ತು ರಾಮಾನುಜರು

ವೈಷ್ಣವ ಧರ್ಮದಲ್ಲಿ ಹೊಸ ಆಲೋಚನೆಗಳನ್ನು ಹೆಕ್ಕಿ ತೆಗೆದು ಮತ್ತೊಮ್ಮೆ ಅದನ್ನು ಭಾರತೀಯ ಜನಮನದ ಮೇಲೆ ಪ್ರತಿಷ್ಠಾಪಿಸಿದರು. ಶಂಕರರು ಪ್ರತಿಷ್ಠಾಪಿಸಿದ ಅದ್ವೈತ ತತ್ವ ಭಾರತದಲ್ಲಿ ಧಾರ್ಮಿಕ ಹೊಸ ಅಲೆಯನ್ನು ಹುಟ್ಟಿಸಿತು. ಶಂಕರಾಚಾರ್ಯರು ಉಪನಿಷತ್ತುಗಳಿಗೆ, ಬ್ರಹ್ಮಸೂತ್ರಗಳಿಗೆ ಮತ್ತು ಭಗವದ್ಗೀತೆಗೆ ಹೊಸ ಭಾಷ್ಯವನ್ನು ಬರೆದರು. ಈ ಹೊಸ ಭಾಷ್ಯಗಳಿಗೆ ಪ್ರಸ್ತಾನ ತ್ರಯಗಳೆಂದು ಕರೆದರು. ಉಪನಿಷತ್ತುಗಳ ಜೀವನ ಮೌಲ್ಯವನ್ನು ಕ್ರೋಢೀಕರಿಸಿ ಬ್ರಹ್ಮಸೂತ್ರಗಳ ವಿವೇಚನೆಯಮೂಲಕ ಭಗವದ್ಗೀತೆಗೆ ಹೊಸ ವ್ಯಾಖ್ಯಾನವನ್ನು ಕೊಟ್ಟರು. ವೈದಿಕ ಧರ್ಮದಲ್ಲಿ ಆಳವಾಗಿ ಬೇರೂರಿದ್ದ ವರ್ಣಾಶ್ರಮಗಳಿಗೆ ಇತಿಶ್ರೀ ಹಾಡಿದರು. ಬ್ರಾಹ್ಮಣನೆಂದರೆ ಕೇವಲ ವೇದಪಠಣವೊಂದೇ ಅವನ ಕೆಲಸವಲ್ಲ. ಅಥವಾ ಬ್ರಾಹ್ಮಣತ್ವವು ಅನುವಂಶೀಯವಾಗಿ ಬರತಕ್ಕದ್ದಲ್ಲ; ಬ್ರಹ್ಮಜ್ಞಾನವನ್ನು ಹೊಂದಿದ ಎಲ್ಲ ಸಂಗತಿಗಳು ಯಾವನಲ್ಲಿ ಇರುತ್ತವೆಯೋ ಅವನೇ ಬ್ರಾಹ್ಮಣನೆಂದು ಗುರುತಿಸಿದರು. ಇದರಿಂದಾಗಿ ಧರ್ಮಶಾಸ್ತ್ರಗಳಲ್ಲಿ ಕಟ್ಟುನಿಟ್ಟಾಗಿದ್ದ ಧಾರ್ಮಿಕ ಚೌಕಟ್ಟುಗಳು ತುಸು ಸಡಿಲಗೊಂಡವು ಮಾತ್ರವಲ್ಲ ಅವುಗಳಿಗೆ ಹೊಸ ಆಯಾಮಗಳು ಸೇರಿಕೊಂಡವು. ಮೋಕ್ಷ ಸಾಧನೆಗೆ ಅದ್ವೈತ ತತ್ವದ ಅಗತ್ಯವನ್ನು ಸಾರಿ ಹೇಳಿದರು. ಇದರ ಫಲವಾಗಿ ಬ್ರಹ್ಮನು ನನ್ನಲ್ಲಿ ಇರುವನು, ನಾನು ಬ್ರಹ್ಮನಾಗಿದ್ದೇನೆ, ಪ್ರಪಂಚವೆಲ್ಲವೂ ಬ್ರಹ್ಮವು, ಪ್ರಪಂಚದ ಪ್ರತಿ ವಸ್ತುಗಳಲ್ಲೂ ಬ್ರಹ್ಮನಿದ್ದಾನೆ ಎನ್ನುವ ಏಕಾಕೃತಿಯ ಒಂದು ವಿಚಾರಧಾರೆಯನ್ನು ಜನಗಳ ಮುಂದಿಟ್ಟರು. ಇದನ್ನು ಸ್ವೀಕರಿಸಿದ ಜನಗಳು ಭಾರತದಾದ್ಯಂತ ಮತ್ತೆ ವೈದಿಕ ಧರ್ಮದ ಉತ್ತಾನಕ್ಕೆ ಕಾರಣರಾದರು. ಇದರ ಹಿನ್ನೆಲೆಯಲ್ಲಿ ಭಾರತದ ವಿವಿದೆಡೆಗಳಲ್ಲಿ ಅಷ್ಟಮಠಗಳು ಪ್ರತಿಷ್ಠಾಪಿತಗೊಂಡವು. ಇದೇ ಸಂದರ್ಭದಲ್ಲಿ ರಾಮಾನುಜರು ವಿಶಿಷ್ಟಾದ್ವೈತ ತತ್ವವನ್ನು ಪ್ರತಿಪಾದಿಸಿದರು. ಈ ತತ್ವವು ಉತ್ತರ ಭಾರತದಲ್ಲಿ ಹೆಚ್ಚು ಜನಪ್ರಿಯವಾಗಿ ಎರಡಲ್ಲದ ಮತ್ತು ಏಕೀಕೃತ ಅಧ್ಯಾತ್ಮ ವ್ಯವಸ್ಥೆಯ ವಿಶಿಷ್ಟ ರೂಪಗಳನ್ನು ಮತ್ತು ಭಕ್ತಿ ಸೂತ್ರಗಳನ್ನು ರಚನೆ ಮಾಡಿದರು. ಅವರ ರಚನೆಗಳು ಹೆಚ್ಚು ಜನಪ್ರಿಯವಾದವು. ಈ ಹಿನ್ನೆಲೆಯಲ್ಲಿ ವಿಶಿಷ್ಟಾದ್ವೈತ ಒಂದು ಬ್ರಹ್ಮಜ್ಞಾನ ಸಂಕೇತವೆಂದು ಬಗೆಯಲಾಯಿತು. ಇದೇ ಸಂದರ್ಭದಲ್ಲಿ ಮಾಧ್ವರರು ತಮ್ಮ ದ್ವೈತ ಮದಿಂದ ಆತ್ಮ

ಪರಮಾತ್ಮನ ವಿಭಜಿತ ನೈತಿಕ ಹೊಣೆಗಾರಿಕಗಳನ್ನು ನಿರೂಪಿಸಿದರು. ದೇಹವು ನನ್ನದು ಆತ್ಮವು ಪರಮಾತ್ಮನದು ಎನ್ನುವ ತತ್ವ ವನ್ನು ಸಾರಿದರು. ಜೊತೆಗೆ ಭಗವದ್ಗೀತೆಗೆ ಹೊಸ ಭಾಷ್ಯವನ್ನು ಬರೆಯುವುದರ ಮೂಲಕ ಕೃಷ್ಣನ ಆರಾಧನೆಯನ್ನು ಹೆಚ್ಚು ವ್ಯವಸ್ಥಿತಗೊಳಿಸಿದರು.

ಕರ್ನಾಟಕ ಸಂದರ್ಭದ ಧಾರ್ಮಿಕ ಬದುಕು ಇದಕ್ಕಿಂತ ಭಿನ್ನವಾಗಿಲ್ಲ. ಇಲ್ಲಿ ವೈದಿಕ, ಜೈನ ಮತ್ತು ಬೌದ್ಧ ಮತಗಳು ತಮ್ಮ ಅಸ್ತಿತ್ವವನ್ನು ಕಾಪಾಡಿಕೊಂಡಿದ್ದವು. ಒಂದೊಂದು ಕಾಲಕ್ಕೆ ಒಂದೊಂದು ಜನಪ್ರಿಯವಾಗಿದ್ದವು. ಆರಂಭದಲ್ಲಿ ವೈದಿಕ ಧರ್ಮವೇ ಇಲ್ಲಿ ನೆಲೆಗೊಂಡಿತ್ತು. ಏಕೆಂದರೆ ರಾಮಾಯಣ ಮಹಾಭಾರತಾದಿ ಧಾರ್ಮಿಕ ಗ್ರಂಥಗಳ ಹಲವು ಸಂಗತಿಗಳು ಜನಮನದಲ್ಲಿ ಬೇರೂರಿದ್ದವು. ಹಂಪೆ ಕಿಷ್ಕಿಂದೆಯಲ್ಲಿ ಸಿಗುವ ರಾಮಾಯಣ ಕಾಲದ ವಿವಿಧ ದೃಶ್ಯಾವಳಿಗಳು ಬೌದ್ಧ ಧರ್ಮಕ್ಕೂ ಹಿಂದೆ ಕರ್ನಾಟಕದಲ್ಲಿ ಹಿಂದೂ ಧರ್ಮದ ಸ್ಥಿತಿಗತಿಯನ್ನು ಸಾರಿ ಹೇಳುತ್ತವೆ. ಬೌದ್ಧ ಧರ್ಮವು ಕರ್ನಾಟಕಕ್ಕೆ ಬಂದದ್ದು ಅಶೋಕನ ಕಾಲಘಟ್ಟದಲ್ಲಿ ಇರಬೇಕು. ಅಶೋಕನು ಧರ್ಮ ಸಾಮ್ರಾಜ್ಯವನ್ನು ಸ್ಥಾಪಿಸಬೇಕೆಂಬ ಆಶೋತ್ತರದಿಂದ ಬೌದ್ಧ ಧರ್ಮವನ್ನು ಹೆಚ್ಚು ಜನಪ್ರಿಯಗೊಳಿಸಿದನು. ದಕ್ಷಿಣ ಭಾರತಕ್ಕೆ ಮಹಾಮಾತ್ರರು ಎಂಬ ಅಧಿಕಾರಿಗಳನ್ನು ಕಳಿಸಿ ಇಲ್ಲಿ ಬೌದ್ಧ ಧರ್ಮ ಭದ್ರವಾಗಿ ನೆಲೆಗೊಳ್ಳಲು ಕಾರಣೀಭೂತನಾದನು. ಬೌದ್ಧ ಧರ್ಮದ ತತ್ವಗಳು ಅತ್ಯಂತ ಸರಳವಾಗಿದ್ದವು. ಜನರಿಂದ ಬಹುಬೇಗ ಆಕರ್ಷಿತವಾದವು. ಪ್ರಪಂಚವು ದುಃಖಮಯವಾಗಿದೆ. ಈ ದುಃಖಕ್ಕೆ ಆಸೆಯೇ ಮೂಲ, ಈ ಆಸೆಯನ್ನು ನಿಗ್ರಹಿಸಲು ಇಂದ್ರಿಯಗಳ ಮೇಲೆ ಹಿಡಿತ ಅಗತ್ಯ. ಈ ಇಂದ್ರಿಯಗಳ ನಿಗ್ರಹಕ್ಕೆ ಅಷ್ಟಾಂಗಮಾರ್ಗಗಳ ಪರಿಪಾಲನೆಯು ಅಗತ್ಯವೆಂಬ ನಾಲ್ಕು ಸರಳ ತತ್ವಗಳನ್ನು ಜನಮನದಲ್ಲಿ ಬೌದ್ಧ ಧರ್ಮದ ಮುಖಾಂತರ ಅಶೋಕನು ಬಿತ್ತಿದನು. ಕರ್ನಾಟಕದಲ್ಲಿ ಬೌದ್ಧ ಧರ್ಮ ಆರಂಭದ ೩-೪ ಶತಮಾನಗಳಲ್ಲಿ ಅಸ್ತಿತ್ವದಲ್ಲಿತ್ತು. ಆ ಹಿನ್ನೆಲೆಯಲ್ಲಿ ಕರ್ನಾಟಕದ ಮೂಲೆ ಮೂಲೆಯಲ್ಲಿಯೂ ಬೌದ್ಧ ಧರ್ಮದ ಸ್ಮಾರಕಗಳು ಹುಟ್ಟಿಕೊಂಡವು. ಬೌದ್ಧ ಚೈತ್ಯಾಲಯಗಳು ನಿರ್ಮಾಣಗೊಂಡವು. ಜನಮನಗಳಲ್ಲಿ

ಬೌದ್ಧಧರ್ಮವು ಪ್ರತಿಷ್ಠಾಪಿತಗೊಂಡಿತು. ಆದರೆ ಬೌದ್ಧಧರ್ಮದ ಈ ಔನ್ನತ್ಯವು ಬಹುದಿನಗಳ ಕಾಲ ಉಳಿಯಲಿಲ್ಲ.

ಜೈನರು ಕನ್ನಡ ಜಾನಪದಕ್ಕೆ ಚೈತಯಾತ್ರೆಯನ್ನು ಕೈಕೊಂಡಮೇಲೆ ಕರ್ನಾಟಕದಲ್ಲಿ ಬೌದ್ಧ ಧರ್ಮ ತನ್ನ ಅವನತಿಯನ್ನು ಕಂಡುಕೊಂಡಿತು. ಸನ್ನತಿ, ಕೊಪ್ಪಳ ಮುಂತಾದ ಬೌದ್ಧಕೇಂದ್ರಗಳು ಜೈನ ಕೇಂದ್ರಗಳಾಗಿ ಪರಿವರ್ತನೆಗೊಂಡವು. ಜೈನ ಸಾಹಿತ್ಯ ಪ್ರಾಕೃತದಾಚೆಗೆ ಬಂದು ಕನ್ನಡವನ್ನು ತಲುಪಿತು. ಬೌದ್ಧಭಿಕ್ಷುಗಳು ಇದಕ್ಕೆ ನೇರವಾಗಿ ಕಾರ್ಣರಾದರು. ಚೈತ್ಯಾಲಯಗಳಲ್ಲಿ ನಡೆದ ವಿಪರೀತ ಅಸಂಗತ ಕೃತ್ಯಗಳಿಂದಾಗಿ ಬೌದ್ಧಧರ್ಮ ಕರ್ನಾಟಕದಲ್ಲಿ ತನ್ನ ನೆಲೆಗಟ್ಟನ್ನು ಕಳೆದುಕೊಂಡಿತು. ಅಶೋಕನು ಕರ್ನಾಟಕದ ಭೂಭಾಗವನ್ನು ಒಂದು ಬೌದ್ಧಧರ್ಮದ ಜನಪ್ರಿಯ ನಾಡನ್ನಾಗಿ ಪರಿವರ್ತಿಸಲು ಆಸಕ್ತಿಯನ್ನು ವಹಿಸಿದ್ದನು. ಕರ್ನಾಟಕದಾಚೆಗಿನ ಶ್ರೀಲಂಕಾ ದ್ವೀಪಕ್ಕೆ ತನ್ನ ಮಕ್ಕಳಾದ ಮಹೇಂದ್ರ ಮತ್ತು ಸಂಗಮಿತ್ರೆಯರನ್ನು ಬೌದ್ಧ ಧರ್ಮದ ಪ್ರಚಾರಕ್ಕೆ ಕಳಿಸಿರುವುದು ಗಮನಿಸಬೇಕಾದ ಅಂಶ. ಭಾರತದ ಭೂಭಾಗದ ಒಳಗಿರುವ ಕರ್ನಾಟಕ ಪ್ರದೇಶವನ್ನು ಬೌದ್ಧಧರ್ಮ ಪ್ರದೇಶವಾಗಿ ಮಾರ್ಪಡಿಸಲು ಅನೇಕ ಧರ್ಮಾಧಿಕಾರಿಗಳನ್ನು ನೆಲೆಗೊಳಿಸಿದನು. ಕೊಪ್ಪಳವು ಇಂಥಹ ನೆಲೆಗಳಿಗೆ ಕೇಂದ್ರಬಿಂದುವಾಗಿ ಕೆಲಸ ಮಾಡುತ್ತಿತ್ತು. ಕೊಪ್ಪಳದ ಕೇಂದ್ರ ಪರಿಸರದ ಸುತ್ತ ಬೌದ್ಧಧರ್ಮ ಬೆಳೆಯತೊಡಗಿತು. ಆದರೆ ಜೈನರ ಲೋಕಪ್ರಿಯತೆ ಮತ್ತು ಸಾಹಿತ್ಯದ ಬಗೆಗಿನ ಆಸಕ್ತಿಗಳು ಬಹುಬೇಗ ಕನ್ನಡಿಗರ ಮನಸ್ಸನ್ನು ಆಕರ್ಷಿಸಿದವು. ಜೈನರಲ್ಲಿ ದಿಗಂಬರ ಜೈನರು ಕರ್ನಾಟಕದಲ್ಲಿ ಹೆಚ್ಚು ನೆಲೆಗೊಂಡರು. ಇವರು ಜೈನಧರ್ಮವನ್ನು ವೈಷ್ಣವ ಧರ್ಮದ ತಳಹದಿಯಿಂದಲೇ ಕಟ್ಟಲು ಪ್ರಯತ್ನಿಸಿದರು. ಮಹಾವೀರನ ತತ್ವಗಳನ್ನು ವೈದಿಕ ಧರ್ಮದ ಕ್ರಿಯಾಚಾರಗಳ ಮೂಲಕ ಪ್ರತಿಪಾದಿಸತೊಡಗಿದರು ಮಾತ್ರವಲ್ಲ ಜೈನಬ್ರಾಹ್ಮಣರೆಂದೇ ಅವರನ್ನು ಕರೆದುಕೊಂಡರು. ಕ್ರಿ.ಶ. ೨-೩.ನೇ ಶತಮಾನದಿಂದ೧೨-೧೩.ನೇ ಶತಮಾನದವರೆಗೆ ಜೈನಧರ್ಮ ಕರ್ನಾಟಕದಲ್ಲಿ ಒಂದು ಉತ್ಕೃಷ್ಟ ಧರ್ಮವಾಗಿ ನೆಲೆಗೊಂಡಿತ್ತು. ಆನಂತರ ಜೈನಧರ್ಮವು ಅನುಷ್ಠಾನಕ್ಕೆ ತುಂಬ ಕಷ್ಟವಾದುದೆಂಬುದನ್ನು

ಜನರು ಮನಗಂಡರು. ಅಹಿಂಸಾವಾದವು ಅತಿರೇಕದಿಂದ ಅದರಲ್ಲಿ ಹೇಳಲ್ಪಟ್ಟಿತ್ತು. ಮಾನವನಲ್ಲಿರುವ ಲೌಕಿಕ ಭಾವನೆಗಳಿಂದ ಮೋಕ್ಷ ಅಸಾಧ್ಯವೆಂದು ಆ ಧರ್ಮ ಹೇಳಿರುವುದು ಜನತೆಯ ವಿರೋಧ ಕಟ್ಟಿಕೊಳ್ಳಲು ಕಾರಣವಾಯಿತು. ಮಾನವನಲ್ಲಿ ಜೀವದಯೆ ಇರಬೇಕು. ಆದರೆ ಅದು ಅತಿರೇಕದಿಂದ ಕೂಡಿರಬಾರದು. ವಿಷಯವಸ್ತುಗಳಿಗೆ ಮಾನವನ ಧಾರ್ಮಿಕ ಸ್ಪಂದನಗಳಿರಬೇಕು ಆದರೆ ಅದು ಅತಿಯಾಗಿರಬಾರದು. ಇಂಥ ಕಾರಣಗಳು ಜನತೆಯಲ್ಲಿ ಸ್ವಯಂವೇದ್ಯವಾಗಿ ಈ ಧರ್ಮವನ್ನು ಹಿಂದಿಕ್ಕಲು ಕಾರಣವಾಯಿತು. ಅನಂತರ ಕರ್ನಾಟಕದಲ್ಲಿ ಸಂಭವಿಸಿದ ವಚನ ಚಳುವಳಿ ಜೈನಧರ್ಮವನ್ನು ಅಕ್ಷರಶಃ ಹತ್ತಿಕ್ಕಲು ಕಾರಣವಾಯಿತು.

೧೨ನೆಯ ಶತಮಾನ ಕರ್ನಾಟಕದ ಮಟ್ಟಿಗೆ ವಿವೇಚನಾ ಕಾಲಘಟ್ಟ. ಈ ವಚನ ಚಳುವಳಿಯ ಕೇಂದ್ರಬಿಂದುವಾಗಿ ಬಸವಣ್ಣನವರು ಕಾರ್ಯನಿರ್ವಹಿಸತೊಡಗಿದರು. ಕರ್ನಾಟಕದ ಧಾರ್ಮಿಕ ಜೀವನದ ಮಟ್ಟಿಗೆ ಇದೊಂದು ಹೊಸ ತಿರುವನ್ನು ಪಡೆದ ಕಾಲ. ಬಸವಣ್ಣನವರು ಯುಗಪ್ರವರ್ತಕಶಕ್ತಿಯಾದರು. ಕಳಚೂರಿ ಬಿಜ್ಜಳನ ಆಳ್ವಿಕೆಯಲ್ಲಿ ದಂಡನಾಯಕರಾಗಿದ್ದ ಬಸವಣ್ಣನವರು ರಾಜಕೀಯವಾಗಿ ಮಹತ್ತರ ಹೊಣೆಯನ್ನು ನಿರ್ವಹಿಸುತ್ತಲೇ ಆಧ್ಯಾತ್ಮಿಕ ಸಾಮ್ರಾಜ್ಯದ ಚಕ್ರವರ್ತಿಯಾದರು. ಭಕ್ತಿ ಭಂಡಾರಿಯಾದರು. ಇಡೀ ಭಾರತದ ಸಾಂಸ್ಕೃತಿಕ ಚರಿತ್ರೆಯಲ್ಲಿಯೇ ಇವರ ಸಾಧನೆ ಅಪೂರ್ವವಾದದ್ದು. ಧರ್ಮ ಎಂಬ ಪದವು ತನ್ನ ಸಾಂಪ್ರದಾಯಿಕ ಕಟ್ಟುಕಟ್ಟಳೆಗಳನ್ನು ಕಿತ್ತೊಗೆದು ಸಾಮಾನ್ಯ ಜನತೆಯನ್ನು ಉದ್ಧರಿಸುವ ಪವಿತ್ರ ಶಕ್ತಿಯಾಗಿ ವಚನಚಳುವಳಿ ಕರ್ನಾಟಕದಲ್ಲಿ ಸಂಭವಿಸಿತು. ಈ ಸಂಭವನೀಯತೆಗೆ ಕಾರಣರಾದವರು ಅನೇಕ ವಚನಕಾರರು. ವಚನಕಾರರು ನಿರ್ಮಿಸ ಬಯಸಿದ ಸಮಾಜವು ಅತ್ಯಂತ ಸರಳವಾದುದು. ಬುದ್ಧನಂತೆ ಜಗತ್ತನ್ನೆಲ್ಲಾ ದುಃಖದಿಂದ ಮುಕ್ತಗೊಳಿಸಬೇಕೆಂಬ ಬಯಕೆ ಅವರದ್ದಾಗಿತ್ತು. ಈ ಕಾರಣದಿಂದ ವಚನಕಾರರು ಹೀನರನ್ನು, ದೀನರನ್ನು, ದಲಿತರನ್ನು, ದುಃಖಿಗಳನ್ನು ತನ್ನವರೆಂದು ಅಪ್ಪಿಕೊಳ್ಳುವ ಆತ್ಮೀಯತೆಯನ್ನು ಬೆಳೆಸಿತು. ಸ್ವತಂತ್ರ ವಿಚಾರ ವಿಮರ್ಶೆಯೊಡನೆ ವಿಶ್ವವ್ಯಾಪಕವಾದ ಲೋಕ ಕಾರುಣ್ಯವನ್ನು ಹೊಂದಿತು. ಸಮಾಜದ

ಹುಳುಕನ್ನು ತಿದ್ದುವ ದಿಟ್ಟತನದೊಡನೆ ಸತ್ಯಸ್ವರೂಪದ ಸಾಕ್ಷಾತ್ಕಾರವನ್ನು ಪಡೆಯಲು ವೀರಶೈವ ಧರ್ಮ ಪ್ರಯತ್ನಿಸಿತು. ಕರ್ನಾಟಕದ ಉದಾತ್ತ ಸಂಸ್ಕೃತಿಯ ಚಿತ್ರಗಳನ್ನು ಬಿತ್ತರಿಸಿ ತೋರುವ ರಂಗಸ್ಥಳವಾಗಿ ಬಸವಣ್ಣನವರ ಈ ಚಳುವಳಿ ಪರಿಣಮಿಸಿತು. ಮತ, ಕುಲ, ವರ್ಣ, ಲಿಂಗ, ವಯಸ್ಸು ಅಂತಸ್ತುಗಳ ಅಂತರವಿಲ್ಲದೆ ಯೋಗ್ಯತೆಯನ್ನು ಪರಿಗಣಿಸಲಾಯಿತು. ಸರ್ವಮಾನವರ ಸಮಾವೇಶವು ಈ ಚಳುವಳಿ ಸಾರಿದ ಮತ್ತೊಂದು ಅಧ್ಯಾತ್ಮದ ತತ್ವ. ಕಂದಸಂಪ್ರದಾಯಗಳು, ಅರ್ಥಹೀನವಾಗಿದ್ದ ಅಂದಿನ ಸಮಾಜದಲ್ಲಿ ನವಜಾಗೃತಿನ್ನುಂಟುಮಾಡಿ ಹಿಂದೂ ಸಂಸ್ಕೃತಿಯ ಹೊನಲನ್ನು ಹೊಸ ರೂಪದಲ್ಲಿ ನಿರೂಪಿಸಲಾಯಿತು. ಸುಲಭವಾದ ಕನ್ನಡ ನುಡಿಯನ್ನು ಅದಕ್ಕಾಗಿ ಬಳಸಿಕೊಂಡು ಅನುಭಾವದ ಮಹತ್ತಿನಿಂದ ಅದನ್ನು ಶ್ರೀಮಂತಗೊಳಿಸಲಾಯಿತು. ಮಾನವೀಯತೆಯು ಮುಟ್ಟಬಹುದಾದ ಅತ್ಯುನ್ನತ ನಿಲುವನ್ನು ಅತಿ ಸುಲಭವಾಗಿ ನಿರೂಪಿಸಲು ಮೆಟ್ಟಿಲುಗಳನ್ನು ಕಟ್ಟಲಾಯಿತು. ಈ ಪ್ರಯೋಗಶೀಲತೆ ನಡೆದದ್ದು ಕರ್ನಾಟಕದ ಈ ಮಣ್ಣಿನ ನೆಲದಲ್ಲಿಯೇ.

ಇಡೀ ಮಾನವಜನಾಂಗವೆಲ್ಲಾ ಒಂದು ಕುಟುಂಬ. ಅಲ್ಲಿ ಜಾತಿ ಮತ ಭೇದಗಳ ಕಲ್ಪನೆ ಕೃತಕವಾದುದು ಎಂಬುದು ಈ ಚಳುವಳಿ ಸಾರಿದ ಮೊದಲ ಸಂದೇಶ ಮತ್ತು ಸಾಧಿಸಿ ತೋರಿಸಿದ ಸಾಧನೆ. ಭರತಖಂಡದ ಸಂಸ್ಕೃತಿಯ ತಳಹದಿಯನ್ನು ಬಗೆದು ನೋಡಿದಾಗ ದೈವನಿರ್ಮಿತ ಧರ್ಮವು ನಮಗೆ ಕಾಣಿಸುತ್ತದೆ. ಆದರೆ ಅದು ಕೇವಲ ಸಂಶೋಧನೆಯ ವಸ್ತುವಾಗಿದೆ. ಆಚರಣೆಯಲ್ಲಿ ಅನೇಕ ಅವಿಚಾರಗಳು ತಲೆದೋರಿವೆ. ಹುಟ್ಟಿನಿಂದಲೇ ಯೋಗ್ಯತೆಯನ್ನು ಅಳೆಯುವ ವರ್ಣವಿಭೇದವು ಉಕ್ಕಿನ ಕೋಟೆಯಾಗಿ ಸಮಾಜವನ್ನು ಛಿದ್ರಛಿದ್ರವನ್ನಾಗಿಸಿತು. ಸಾಲದ್ದಕ್ಕೆ ಅಸ್ಪೃಶ್ಯತೆ ಎಂಬ ಪಂಚಮವರ್ಣವು ಹಿಂದೂ ಧರ್ಮದ ಮುಖಕ್ಕೆ ಅಳಿಸಲಾಗದಂಥಹ ಕಳಂಕವನ್ನು ತಂದಿತ್ತು. ಇದೆಲ್ಲವನ್ನು ಪ್ರತಿಭಟಿಸಿದ ಕೀರ್ತಿ ಕಲ್ಯಾಣದಲ್ಲಿ ವಚನ ಚಳುವಳಿಯಲ್ಲಿ ಭಾಗವಹಿಸಿದ ಶರಣರಿಗೆ ಸಲ್ಲಬೇಕು. ಅವರು ಹಿಂದೂ ಧರ್ಮದ ಉಜ್ವಲ ಆದರ್ಶದ ಕಡೆಗೆ ಗಮನವನ್ನು ಸೆಳೆಯತೊಡಗಿದರು.

ವೇದವನೋದಿ ವೇದಾಧ್ಯಯನ ಮಾಡಿಸಿದರೇನು

ಬ್ರಾಹ್ಮಣನಾಗಬಲ್ಲನೇ
ಬ್ರಹ್ಮವೇತ್ತುಗಳ ಶುಕ್ಲ ಶೋಣಿತದಿಂದ ಜನಿಸಿದರೇನು
ಬ್ರಾಹ್ಮಣನಾಗಬಲ್ಲನೆ?
ಯಜನಾಧ್ಯಷ್ಟ ಷಟ್ಕರ್ಮಂಗಳ ಬಿಡದೆ ಮಾಡಿದರೇನು
ಬ್ರಾಹ್ಮಣನಾಗಬಲ್ಲನೇ?
'ಬ್ರಹ್ಮಜಾನಾತಿ ಬ್ರಾಹ್ಮಣಂ' ಎಂಬ ವೇದವಾಕ್ಯವನರಿತು
ಬ್ರಹ್ಮೀಭೂತನಾದವನೇ ಬ್ರಾಹ್ಮಣ ನೋಡಾ
ಕಪಿಲಸಿದ್ಧ ಮಲ್ಲಿಕಾರ್ಜುನಾ

ಬ್ರಹ್ಮವನ್ನರಿತ ಬ್ರಹ್ಮೀಭೂತನಾದವನೇ ಪರತತ್ವವನ್ನರಿತವರೇ ಕುಲಜರು. ಆಚಾರ ತಪ್ಪಿದರೆ ಕುಲಜನೇ ಹೊಲೆಯನಾಗಬಹುದು. ಈ ಮಾತನ್ನು ಹೇಳಿದವನು ಮಾದಾರ ಚೆನ್ನಯ್ಯ. ಸಿದ್ಧರಾಮ ಮಾದಾರ ಚೆನ್ನಯ್ಯರು ಈ ವಚನ ಚಳುವಳಿಗೆ ಕಿರಣಗಳಾಗಿ ಹೊರಹೊಮ್ಮಿದರು. ಬಸವಣ್ಣನವರು ಇದನ್ನು ಇನ್ನೊಂದು ರೀತಿಯಲ್ಲಿ ಹೇಳಿದುದು ಹೀಗೆ :

ಕೊಲ್ಲುವವನೇ ಮಾದಿಗ,
ಹೊಲಸು ತಿಂಬುವವನೇ ಹೊಲೆಯ,
ಕುಲವೇನೋ ಆವಂದಿರ ಕುಲವೇನೋ
ಸಕಲಜೀವಾತ್ಮರಿಗೆ ಲೇಸನು ಬಯಸುವ
ನಮ್ಮ ಕೂಡಲ ಸಂಗನ ಶರಣರೆಲ್ಲ ಕುಲಜರು

ಎಂದು ಹೇಳಿ ಏಕೀಕೃತ ಘಟಕವನ್ನು ನಿರ್ಮಾಣ ಮಾಡಲು ಪ್ರಯತ್ನಿಸಿದರು. ಸುಮಾರು ೮-೯ ಶತಮಾನಗಳ ಹಿಂದೆ ಈ ಕ್ರಾಂತಿ ಅತ್ಯಂತ ವಿವೇಚನಾಯುಕ್ತವಾದ ಕ್ರಾಂತಿ ಎಂದು ದೇಶ ವಿದೇಶೀಯ ವಿದ್ವಾಂಸರು ಬಣ್ಣಿಸಿರುವರು. ಶರಣರು ತಮ್ಮ ನೀತಿಗಳನ್ನು ತತ್ವದಲ್ಲಿ ಮಾತ್ರ

ಪ್ರತಿಪಾದಿಸಿದ್ದರೆ ವಿರೋಧಿ ಶಕ್ತಿಗಳು ಇದನ್ನು ನಿರ್ಲಕ್ಷಿಸಿದ್ದವು. ಆದರೆ ಶರಣರು ನುಡಿದಂತೆ ನಡೆದರು. ಧರ್ಮದಲ್ಲಿ ಸಕಲರಿಗೂ ಸರ್ವಸಮಾನವಾದ ಸ್ಥಾನವನ್ನು ಕೊಟ್ಟು ಒಂದು ಹೊಸ ಹಾದಿಯನ್ನು ನಿರ್ಮಾಣ ಮಾಡಿದರು. ಬಸವಣ್ಣನವರು ತೋರಿದ ದಿಟ್ಟತನದ ವರ್ತನೆಯಿಂದ ಸಂಪ್ರದಾಯವಾದಿಗಳ ಮನಸ್ಸು ಇಂದೂ ಅಳುಕಬಹುದು. ಆದರೆ ಗಾಂಧೀಜಿಯವರ ನಂತರ ಈ ಹೊಸ ಯುಗದಲ್ಲಿರುವ ನಾವು ಅಂತಹ ಘಟನೆಗಳನ್ನು ನಮ್ಮ ಸಂದರ್ಭದಲ್ಲಿ ಅರಗಿಸಿಕೊಳ್ಳಬಲ್ಲೆವು. ಆದರೆ ಅಂದಿನ ಸಮಾಜ ಅದನ್ನು ತಡೆಯಲಾರದೆ ಹೋಯಿತು. ಅಸ್ಪೃಶ್ಯತೆಯ ನಿವಾರಣೆಯಲ್ಲಿ ಮತ್ತು ವರ್ಣಭೇದದ ನಿರಾಕರಣೆಯಲ್ಲಿ ಶರಣರು ನಡೆದು ತೋರಿಸಿದ ಮಾರ್ಗ ನಮಗೆ ಯಾವತ್ತೂ ಮಾರ್ಗದರ್ಶಕ. ಈ ಎಲ್ಲಾ ಕಾರಣಗಳಿಂದ ಕರ್ನಾಟಕದಲ್ಲಿ ಜೈನಧರ್ಮ ಅಳಿಸಿ ಹೋಗಿ ಕಾವೇರಿಯಿಂದ ಕೃಷ್ಣೆಯವರೆಗಿನ ಅಖಂಡ ಕರ್ನಾಟಕದಲ್ಲಿ ಏಕೀಕೃತ ಧಾರ್ಮಿಕ ಕ್ರಿಯಾಚಾರಗಳು ಹುಟ್ಟಿಕೊಂಡವು. ವೀರಶೈವ ಧರ್ಮ ಕರ್ನಾಟಕದ ಬಹುಪಾಲು ಜನತೆಯನ್ನು ಆಕರ್ಷಿಸಿಕೊಂಡಿತು. ಧಾರ್ಮಿಕ ಬದುಕಿಗೆ ಹೊಸ ಆಸರೆಯಾಗಿ ಕರ್ನಾಟಕದ ಜನಮನದಲ್ಲೂ ಇಂದಿಗೂ ಅದ್ವಿತೀಯವಾದ ಧಾರ್ಮಿಕ ಮಾರ್ಗನಿರ್ದೇಶಕ ತಾತ್ವಿಕ ಶಕ್ತಿಯಾಗಿ ಉಳಿದುಕೊಂಡಿದೆ. ಕೊಪ್ಪಳ ಪರಿಸರದ ಜನಸಾಮಾನ್ಯರು ೧೨ನೇ ಶತಮಾನದಿಂದ ಇತ್ತೀಚಿನವರೆಗೂ ವೀರಶೈವ ಧರ್ಮಕ್ಕೆ ನಿಷ್ಠೆ ತೋರಿ ಅದಕ್ಕೆ ಕಟ್ಟಾಳುಗಳಾಗಿರುವರು.

ಅನಂತರ ಕರ್ನಾಟಕದಲ್ಲಿ ತಲೆದೋರಿದ ವೈದಿಕ ಮತದ ಪುನರುಜ್ಜೀವನ ಕ್ರಿಯೆಯು ವೀರಶೈವ ಧರ್ಮವನ್ನು ಹಿಂದಿಕ್ಕುವಲ್ಲಿ ವಿಫಲವಾಯಿತು. ಆದರೆ ಕರ್ನಾಟಕೇತರ ಸಂದರ್ಭದಲ್ಲಿ ವೈದಿಕ ಧರ್ಮದ ಪುನರುಜ್ಜೀವನದ ಪರಿಣಾಮಗಳು ಉಂಟಾಗತೊಡಗಿದವು. ಶಂಕರ ಮಾಧ್ವರು ಮತ್ತು ರಾಮಾನುಜರ ತತ್ವಗಳು ಕರ್ನಾಟಕೇತರ ಸಂದರ್ಭಧಲ್ಲಿ ಹೆಚ್ಚು ಜನಪ್ರಿಯವಾದವು. ಇದರ ಪರಿಣಾಮವಾಗಿ ಕರ್ನಾಟಕದಲ್ಲೂ ದಾಸ ಸಾಹಿತ್ಯದ ಮೂಲಕ ಪುನರುಜ್ಜೀವನದ ಹಾದಿ ಬೆಳೆಯತೊಡಗಿತು. ಕನಕದಾಸ, ಪುರಂದರದಾಸ, ಶ್ರೀಪಾದರಾಯರು, ಜಗನ್ನಾಥದಾಸರು, ವೈದಿಕ

ಸಂಸ್ಕೃತಿಯನ್ನು ಪುನಃ ರಚಿಸಲು ಹಲವು ಸೂತ್ರಗಳನ್ನು ಹಾಕಿಕೊಂಡರು. ಅದರ ಹಿನ್ನೆಲೆಯಲ್ಲಿ ಮೈಸೂರು ಮತ್ತು ಕರಾವಳಿ ಭಾಗದ ಕರ್ನಾಟಕ ಪ್ರದೇಶದಲ್ಲಿ ಪರಿಣಾಮಗಳುಂಟಾದವು. ಅಲ್ಲಿ ವೈದಿಕ ಧರ್ಮ ಮತ್ತೆ ನೆಲೆಗೊಳ್ಳಲು ಕಾರಣವಾಯಿತು.

ಇಂತಹದೇ ಸನ್ನಿವೇಶದಲ್ಲಿ ಭಾರತಕ್ಕೆ ಮತ್ತೊಂದು ಧಾರ್ಮಿಕ ಶಕ್ತಿಯಾಗಿ ಇಸ್ಲಾಂ ಧರ್ಮವು ಆಗಮಿಸಿತು. ಕ್ರಿ.ಶ. ೧೨೦೬ರಲ್ಲಿ ದೆಹಲಿ ಸಾಮ್ರಾಜ್ಯದ ಸಿಂಹಾಸನವು ಮುಸಲ್ಮಾನರ ಪಾಲಾದ ತಕ್ಷಣವೇ ಅವರು ಜೀಹಾದ್ ಕ್ರಮವನ್ನು ಅನುಸರಿಸಿ ಭಾರತದ ಮೇಲೆ ಧರ್ಮಯುದ್ಧಗೈದರು. ಪರಿಣಾಮವಾಗಿ ಇಸ್ಲಾಂ ಧರ್ಮ ಉತ್ತರದ ಗಡಿಭಾಗದಿಂದ ದಕ್ಷಿಣಭಾಗಕ್ಕೆ ಕ್ರಮಿಸತೊಡಗಿತು. ಅಲ್ಲಾವುದ್ದೀನ್ ಖಿಲ್ಜಿಯು ದಕ್ಷಿಣದ ಮೇಲೆ ಮೊಟ್ಟಮೊದಲ ಬಾರಿಗೆ ಮಲ್ಲಿಕಾಪೂರನೆಂಬ ದಂಡನಾಯಕನ ನೇತೃತ್ವದಲ್ಲಿ ನಡೆಸಿದ ದಾಳಿಗಳು ದಕ್ಷಿಣ ಭಾರತದಲ್ಲಿ ಇಸ್ಲಾಂ ಧರ್ಮ ಪ್ರಸಾರಕ್ಕೆ ನಾಂದಿ ಹಾಡಿದವು. ದೇವಗಿರಿಯ ಸೇವುಣರು, ದ್ವಾರಸಮುದ್ರದ ಹೊಯ್ಸಳರು, ಕರ್ನಾಟಕದಲ್ಲಿ ಜೈನ, ವೀರಶೈವ ಮತ್ತು ವೈಷ್ಣವ ಮತಗಳನ್ನನುಸರಿಸಿ ಆಡಳಿತವನ್ನು ನಡೆಸುತ್ತಿದ್ದರು. ಇವರುಗಳ ಮೇಲೆ ಬಂದೆರಗಿದ ಇಸ್ಲಾಂ ಧಾರ್ಮಿಕರ ದಾಳಿ ಕರ್ನಾಟಕದ ಸಂಸ್ಕೃತಿಗೆ ಮತ್ತೊಂದು ಧರ್ಮದ ಸೇರ್ಪಡೆಯನ್ನು ಕಂಡುಕೊಂಡಿತು. ಇಸ್ಲಾಂ ಧರ್ಮ ಕ್ರಿ.ಶ. ೬ನೇ ಶತಮಾನದಲ್ಲಿ ಅರೇಬಿಯನ್ ಪ್ರಾಂತಗಳಲ್ಲಿ ಉದಯಿಸಿತು. ಅದರ ಪ್ರತಿಪಾದಕ ಮಹಮ್ಮದ್ ಪೈಗಂಬರ್. ಸಹನೆ ಮತ್ತು ಭ್ರಾತೃತ್ವ ತತ್ವಗಳನ್ನು ಮುಂದಿಟ್ಟುಕೊಂಡು ಇಸ್ಲಾಮ ತನ್ನ ತಾತ್ವಿಕ ನೆಲೆಗಳನ್ನು ರೂಪಿಸಿಕೊಂಡಿತು. ಸಮಾಜದ ಯಾವುದೇ ವಿಸಂಗತಿಯು ಸಹನೆಯಿಂದ ಮತ್ತು ಭಾತೃ ಪ್ರೇಮದಿಂದ ನಾಶವಾಗುವುದೆಂದು ಆ ಧರ್ಮ ಭಾವಿಸಿತು. ಮುಹಮ್ಮದ್ ಪೈಗಂಬರನ ಈ ತತ್ವಗಳು ಅರೇಬಿಕ್ ಪ್ರಾಂತಗಳಲ್ಲಿ ಹೆಚ್ಚು ಜನಪ್ರಿಯವಾಗತೊಡಗಿದವು. ಈ ತಾತ್ವಿಕ ತಳಹದಿಯ ಜನತೆ ರಾಜಕೀಯ ಇಚ್ಛಾಶಕ್ತಿಯು ದಕ್ಷಿಣ ಏಷಿಯಾದ ಕಡೆಗೆ ವಿಸ್ತಾರಗೊಳ್ಳ ತೊಡಗಿತು. ಈ ತತ್ವಗಳನ್ನು ನೆಲೆಗೊಳಿಸಲು ಜೀಹಾದನ್ನು ಸಾರಲಾಯಿತು. ಜೀಹಾದ್ ಎಂದರೆ ಧರ್ಮಯುದ್ಧ. ಧಾರ್ಮಿಕ ಉದ್ದೇಶಕ್ಕಾಗಿ ಇಸ್ಲಾಂ ಧರ್ಮವನ್ನು

ಪ್ರತಿಷ್ಠಾಪಿಸುವುದಕ್ಕಾಗಿ ಧರ್ಮಯುದ್ಧ ಮಾಡಲಾಗುತ್ತಿತ್ತು. ಅಲ್ಲಾವುದ್ದೀನ್ ಖಿಲ್ಜಿ ಈ ಉದ್ದೇಶದಿಂದಲೇ ದಕ್ಷಿಣದ ದಂಡಯಾತ್ರೆಯನ್ನು ಕೈಗೊಂಡನು. ಇದರ ಜೊತೆಗೆ ರಾಜಕೀಯ ಇಚ್ಛಾಶಕ್ತಿಯು ನೆಲೆಗೊಂಡು ಆಕ್ರಮಣಗಳ ಮೂಲಕ ಧರ್ಮವನ್ನು ಸಾರುವುದು ಅವನ ಮೂಲ ಉದ್ದೇಶವಾಗಿತ್ತು. ಇದರ ಹಿನ್ನೆಲೆಯಲ್ಲಿಯೇ ಕರ್ನಾಟಕದಲ್ಲಿ ಬಹಮನಿಸುಲ್ತಾನರು ರಾಜ್ಯವನ್ನು ಕಟ್ಟತೊಡಗಿದರು. ಅವರ ರಾಜಕೀಯ ಇಚ್ಛಾಶಕ್ತಿಯು ನೇರವಾಗಿ ಇಸ್ಲಾಂ ಧರ್ಮವನ್ನು ವಿಸ್ತರಿಸುವುದೇ ಆಗಿತ್ತು. ಇಸ್ಲಾಂ ಸಂಸ್ಕೃತಿಯಲ್ಲಿನ ಸರಳತೆ ಮತ್ತು ಔದಾರ್ಯತೆಗಳು ಕರ್ನಾಟಕದ ಜನತೆಯನ್ನು ಆಕರ್ಷಿಸುವಲ್ಲಿ ಸಾಕಷ್ಟು ಕೆಲಸ ಮಾಡಿದವು. ಆದರೆ ಅವರ ಆಡಳಿತಾತ್ವಕ ಧೋರಣೆಗಳು, ಅವರ ರಾಜಕೀಯ ಶಕ್ತಿಗೂ ಧರ್ಮದ ತಾತ್ವಿಕ ನೆಲೆಗಳಿಗೂ ಪ್ರತಿರೋಧವನ್ನು ಬೆಳೆಸಿಕೊಂಡವು. ಇದರಿಂದಾಗಿ ಕರ್ನಾಟಕದಲ್ಲಿ ಭಾಗಶಃ ಇಸ್ಲಾಂ ಧರ್ಮ ತನ್ನ ಬೆಳವಣಿಗೆಯನ್ನು ಕಂಡಿತು. ಒಂದು ವರ್ಗ ಇಸ್ಲಾಂ ತತ್ವಗಳನ್ನು ನಿಯತ್ತಿನಿಂದ ಅನುಸರಿಸಿತು. ಕೊಪ್ಪಳ ಮತ್ತು ಉತ್ತರ ಕರ್ನಾಟಕದ ಬಹುಭಾಗ ಇಸ್ಲಾಂ ಧರ್ಮದವರಿಂದ ಸುಮರು ೬೦೦ ವರ್ಷಗಳ ಕಾಲ ಆಳಿಸಿಕೊಳ್ಳಲ್ಪಟ್ಟಿತ್ತು. ಈ ೬೦೦ ವರ್ಷಗಳಲ್ಲಿ ಇಸ್ಲಾಂ ಸಂಸ್ಕೃತಿ ಕನ್ನಡ ಸಂಸ್ಕೃತಿಯೊಂದಿಗೆ ಸಮಮಿಶ್ರಣದಿಂದ ಬೆರೆಯತೊಡಗಿತು. ಇದರ ಅಂಗವಾಗಿ ಹೊಸದೊಂದು ಭಾಷೆ ಹುಟ್ಟಿಕೊಂಡಿತು. ಅದನ್ನು ದಖನಿ ಭಾಷೆ ಎಂದು ಕರೆಯುತ್ತಾರೆ. ದಖನಿ ಭಾಷೆಯಲ್ಲಿ ಕನ್ನಡ ಮತ್ತು ಉರ್ದುವಿನ ಸಮಮಿಶ್ರಣವಿದೆ. ಬಹಮನಿ ಸುಲ್ತಾನರ ಕಾಲದಿಂದ ನವಾಬರ ಕಾಲದವರೆಗೂ ಈ ಭಾಷೆ ಉತ್ತರ ಕರ್ನಾಟಕದ ಅಧಿಕೃತ ರಾಜ್ಯಭಾಷೆಯಾಗಿ ಮೆರೆದಿದೆ. ಇದಕ್ಕೆಲ್ಲ ಕಾರಣ ಇಸ್ಲಾಂ ಧರ್ಮದ ತತ್ವಗಳು ಮತ್ತು ಇಸ್ಲಾಂ ಅರಸರುಗಳ ರಾಜಕೀಯ ಇಚ್ಛಾಶಕ್ತಿಗಳು.

ಕರ್ನಾಟಕಕ್ಕೆ ಆಗಮಿಸಿದ ಮತ್ತೊಂದು ಧರ್ಮ ಕ್ರೈಸ್ತಧರ್ಮ. ೧೪೯೮ರಲ್ಲಿ ವಾಸ್ಕೋಡಾಗಾಮ ಭಾರತಕ್ಕೆ ವ್ಯಾಪಾರೀ ಧೋರಣೆಯಿಂದ ಹೊಸ ಜಲಮಾರ್ಗವನ್ನು ಶೋಧಿಸಿ ಕೊಂಡು ಗೋವೆಗೆ ಬಂದನು. ಆ ಜಲಮಾರ್ಗವನ್ನು ಕಂಡುಕೊಂಡ ಹಿನ್ನೆಲೆಯಲ್ಲಿ ಕರ್ನಾಟಕಕ್ಕೆ ಮತ್ತೊಂದು ಹೊಸ ಧರ್ಮದ ಆಗಮನವಾಯಿತು. ವಸಾಹತುಗಳನ್ನು ನಿರ್ಮಾಣ ಮಾಡುವ

ಉದ್ದೇಶವಿದ್ದರೂ ಆದಕ್ಕಿಂತ ಪ್ರಬಲವಾದ ಉದ್ದೇಶ ಕ್ರೈಸ್ತ ಸಂಸ್ಕೃತಿಯನ್ನು ಪ್ರಸಾರ ಮಾಡುವುದಾಗಿತ್ತು. ಈ ಸಂದರ್ಭದಿಂದ ಕರ್ನಾಟಕಕ್ಕೆ ಕ್ರೈಸ್ತ ಮಿಶನರಿಗಳು ಬರಲಾರಂಭಿಸಿದವು. ಕರ್ನಾಟಕವು ಮತ್ತೊಂದು ಧರ್ಮದ ಮೌಲ್ಯಗಳನ್ನು ಕಂಡುಕೊಳ್ಳಲಾಯಿತು. ಕ್ರೈಸ್ತಧರ್ಮದ ದಯೆ, ಅನುಕಂಪೆಗಳು ಮತ್ತು ಜೀವನಪ್ರೀತಿಗಳು ಕರ್ನಾಟಕದ ಔದಾರ್ಯವುಳ್ಳ ಮನಸ್ಸುಗಳಿಂದ ಸ್ವಾಗತಿಸಲ್ಪಟ್ಟವು. ಕ್ರೈಸ್ತ ಧರ್ಮದವರು ಏಕಾಏಕಿ ಧರ್ಮ ಪ್ರಸಾರ ಕಾರ್ಯಕ್ಕಿಳಿಯದೆ ಕರ್ನಾಟಕದ ಜನತೆಯೊಡನೆ ಬೆರೆಯ ತೊಡಗಿದರು. ರಾಜಕೀಯ ಇಚ್ಛಾಶಕ್ತಿಯ ಜೊತೆಗೆ ಧಾರ್ಮಿಕ ಇಚ್ಛಾಶಕ್ತಿಯು ಅವರೊಡನೆ ಪ್ರಬಲವಾಗಿ ಕೆಲಸಮಾಡತೊಡಗಿತು. ಕೇವಲ ವಸಾಹತುಗಳನ್ನು ನಿರ್ಮಿಸಿಕೊಂಡಿದ್ದ ಅವರ ರಾಜಕೀಯ ಇಚ್ಛಾಶಕ್ತಿ ಒಮ್ಮಿಂದೊಮ್ಮೆಲೆ ಸಾಮ್ರಾಜ್ಯವನ್ನು ಕಟ್ಟುವ ಕನಸನ್ನು ಕಂಡಿತು. ಇದು ಕ್ರಮೇಣ ನನಸಾಯಿತಾದರೂ ಅವರ ಧಾರ್ಮಿಕ ಇಚ್ಛಾಶಕ್ತಿ ಅಷ್ಟೊಂದು ಫಲಭರಿತವಾಗಲಿಲ್ಲ. ಕರ್ನಾಟಕದಲ್ಲಿ ಆಳವಾಗಿ ಬೇರೂರಿದ್ದ ವೀರಶೈವ ಧರ್ಮ ತತ್ವಗಳು, ವೈದಿಕ ಧರ್ಮದ ತತ್ವಗಳು ಜನತೆಯ ಮನದಿಂದ ಕ್ರೈಸ್ತ ಮಿಶನರಿಗಳಿಂದ ಹೊರಹಾಕಲಾಗಲಿಲ್ಲ. ಇವರ ಧರ್ಮಪ್ರಸಾರ ಕಾರ್ಯವು ಹೆಚ್ಚಾಗುತ್ತಿದ್ದಂತೆಯೇ ಜನತೆಯ ಮನದೊಳಗಿದ್ದ ಆಚರಣೆಗಳು ಮತ್ತಷ್ಟು ಘನೀಕೃತವಾಗುತ್ತಿದ್ದವು. ಆದರೆ ಯುರೋಪ್ ಸಂಸ್ಕೃತಿ ಕರ್ನಾಟಕದ ಜನರನ್ನು ಆಕರ್ಷಿಷಿಕೊಂಡಿತು. ಶಿಸ್ತುಬದ್ಧ ಸಮಾಜ ಹಲವು ವೈಜ್ಞಾನಿಕ ಅಧ್ಯಯನ ಪದ್ಧತಿಗಳು ಕಂದಾಚರಣೆಗಳ ಮಬ್ಬನ್ನು ಹರಿಸಿದವು. ಈ ಕಾರಣದಿಂದಾಗಿ ಕರ್ನಾಟಕದಲ್ಲಿ ಯುರೋಪ್ ಸಂಸ್ಕೃತಿ ಆಮದಾಯಿತೇ ಹೊರತು ಕ್ರೈಸ್ತಧರ್ಮ ಆಮದಾಗಲಿಲ್ಲ. ಆದಾಗ್ಯೂ ಔದಾರ್ಯವುಳ್ಳ ಜನತೆ ಅದನ್ನು ಗೌರವಿಸಿ ಅದಕ್ಕೆ ಬೆಲೆ ಕೊಡುವ ಪರಿಪಾಠವನ್ನು ಬೆಳೆಸಿಕೊಂಡಿತು. ಕರ್ನಾಟಕದಲ್ಲಿ ಹಲವು ಚರ್ಚುಗಳು, ವಿದ್ಯಾಸಂಸ್ಥೆಗಳು ನೆಲೆಗೊಳ್ಳಲು ಕಾರಣವಾಯಿತು. ಕೊಪ್ಪಳದ ಸಂದರ್ಭದ ಧಾರ್ಮಿಕ ಪರಿಸರವು ಕ್ರೈಸ್ತಧರ್ಮೀಯರ ಆಡಳಿತವನ್ನು ಕಂಡುಂಡಿದೆ. ಅಲ್ಲಿ ಯುರೋಪಿಯನ್ ವ್ಯವಸ್ಥೆಯ ಸಂಸ್ಕೃತಿಯು ನೆಲೆಗೊಳ್ಳಲು ಕ್ರೈಸ್ತಧರ್ಮದ ಪ್ರಚಾರವೇ ಕಾರಣವಾಯಿತು.

ಕರ್ನಾಟಕದ ಧಾರ್ಮಿಕ ವಲಯದಲ್ಲಿನ ಚರಿತ್ರೆಯು ತುಂಬಾ ಕುತೂಹಲಕಾರಿಯಾಗಿದೆ.

ಪ್ರಪಂಚದ ಎಲ್ಲಾ ಧರ್ಮಗಳನ್ನೂ ನಮ್ಮ ನಾಡು ಸ್ವಾಗತಿಸಿಕೊಂಡಿದೆ. ಎಲ್ಲ ಧರ್ಮಗಳನ್ನೂ ಕಾಲಬದ್ಧವಾಗಿ ಅನುಸರಿಸಿ ನಡೆದಿದೆ. ಎಲ್ಲ ಧರ್ಮದ ಸಮಾನ ತತ್ವಗಳನ್ನು ಪಡೆದುಕೊಂಡಿದೆ. ಬದುಕಿಗೆ ಅಗತ್ಯವಾದ ಧಾರ್ಮಿಕ ನಡೆನುಡಿಗಳನ್ನು ಇಚ್ಛಾಶಕ್ತಿಗಳನ್ನೂ ಎಲ್ಲಾ ಧರ್ಮಗಳಿಂದಲೂ ಪಡೆದುಕೊಂಡಿದೆ. ಅಧ್ಯಾತ್ಮವನ್ನು ಒಂದು ಧರ್ಮದ ಸ್ವತ್ತನ್ನಾಗಿ ಮಾಡಿಕೊಳ್ಳದೆ ಎಲ್ಲ ಧರ್ಮದ ಅಂತರಾಳದ ಮೌಲ್ಯವೆಂದು ಒಪ್ಪಿಕೊಂಡಿದೆ. ಪ್ರಕೃತದ ಹಿನ್ನೆಲೆಯಲ್ಲಿ ಕೊಪ್ಪಳ ಪ್ರದೇಶದಲ್ಲಿ ಈ ಎಲ್ಲ ಧರ್ಮಗಳು ಬೆಳಕಿಗೆ ಬಂದು ಪ್ರಧಾನಧಾರೆಯಲ್ಲಿ ಬೀರಿದ ಪರಿಣಾಮಗಳನ್ನು ಗುರುತಿಸಬಹುದು. ಅವುಗಳ ಚರ್ಚೆ ಈ ಕೆಳಗಿನಂತೆ ನಿರೂಪಿತವಾಗಿದೆ.

### ೬. ೧. ಬೌದ್ಧಧರ್ಮ

ಕ್ರಿ.ಪೂ. ೬ನೇ ಶತಮಾನದಲ್ಲಿ ಬುದ್ಧನಿಂದ ಪ್ರತಿಪಾದಿಸಲ್ಪಟ್ಟ ಈ ಧರ್ಮ ಕ್ರಿ.ಶ. ಮೊದಲ ಶತಮಾನಗಳಲ್ಲಿ ಈ ಧರ್ಮ ಕರ್ನಾಟಕವನ್ನು ಪ್ರವೇಶಿಸಿತು. ಉತ್ತರದಲ್ಲಿ ಕುಶಾನರ ಸಾಮ್ರಾಜ್ಯವು ತಲೆದೋರಿ ಬೌದ್ಧ ಧರ್ಮದ ಸತ್ವವನ್ನು ಪ್ರಪಂಚದೆಲ್ಲೆಡೆಗೆ ಸಾಗಿಸುವ ಪ್ರಯತ್ನವನ್ನು ಮಾಡುತ್ತಿತ್ತು. ಕುಶಾನರ ರಾಜ ಕಾನಿಷ್ಕನು ಇದರ ಪ್ರಸಾರಕ್ಕೆ ಕಾರ್ಯಕ್ರಮವನ್ನು ರೂಪಿಸಿಕೊಂಡಿದ್ದನು. ಅವನ ನಂತರ ಮೌರ್ಯ ಸಾಮ್ರಾಜ್ಯವು ಈ ಕಾರ್ಯಕ್ರಮವನ್ನು ಮುಂದುವರಿಸಿಕೊಂಡು ಬಂದಿದೆ. ಅಶೋಕನ ಕಳಿಂಗ ಯುದ್ಧದ ನಂತರ ಧರ್ಮ ಸಾಮ್ರಾಜ್ಯವನ್ನು ಕಟ್ಟುವ ಆಶಯವನ್ನು ಹೊಂದಿದ ಹಿನ್ನೆಲೆಯಲ್ಲಿ ಕರ್ನಾಟಕಕ್ಕೆ ಈ ಧರ್ಮವು ಕಾಲಿಟ್ಟಿತು. ಅಂದಿನ ಕರ್ನಾಟಕದ ಸಂದರ್ಭದಲ್ಲಿ ಹೊಸದೊಂದು ಧರ್ಮದ ಅಗತ್ಯವಿತ್ತು. ವೈದಿಕ ಧರ್ಮ ತನ್ನ ಹಿರಿಮೆಯನ್ನು ಕಳೆದುಕೊಳ್ಳುತ್ತಾ ಕ್ಷೀಣಿಸುತ್ತಿತ್ತು. ಇಂತಹ ವಿಷಮ ಸಂದರ್ಭದಲ್ಲಿ ಅಶೋಕ ಧರ್ಮಪ್ರಸಾರಕ್ಕೆ ತನ್ನ ಅಧಿಕಾರಿಗಳನ್ನು ಕಳಿಸಿದನು. ಒರಿಸ್ಸಾ, ಕರ್ನಾಟಕ, ಮಹಾರಾಷ್ಟ್ರ, ಆಂಧ್ರಪ್ರದೇಶ, ಗೋವಾ ಮುಂತಾದ ರಾಜ್ಯಗಳಿಗೆ ದಕ್ಷಿಣದ ಧರ್ಮಾಧಿಕಾರಿಗಳ ಒಂದು ಪಡೆಯನ್ನು ಕೈಬಿಟ್ಟನು. ಪಾಟಲೀಪುತ್ರದಿಂದ ಧರ್ಮಾಧಿಕಾರಿಗಳು

ತರಬೇತಿಯನ್ನು ಹೊಂದಿ ಬೌದ್ಧ ಸಾಹಿತ್ಯ ಮತ್ತು ಆ ಧರ್ಮದ ಮೌಲ್ಯಗಳನ್ನು ದಕ್ಷಿಣಕ್ಕೆ ಪ್ರಚಾರ ಮಾಡುತ್ತಾ ಬಂದರು. ಈ ರೀತಿ ಈ ಧರ್ಮವು ಕರ್ನಾಟಕದ ಸಂದರ್ಭದಲ್ಲಿ ಹೆಚ್ಚು ಆಕರ್ಷಣೆಗೊಳಪಟ್ಟಿತು. ಅಶೋಕನ ಆಡಳಿತ ವ್ಯವಸ್ಥೆಯಲ್ಲಿ ಧರ್ಮವು ಪ್ರಧಾನ ಇಲಾಖೆಯಾಗಿದ್ದಿತು. ಈ ಹಿನ್ನೆಲೆಯಲ್ಲಿ ಕೊಪ್ಪಳದಲ್ಲಿ ಇರುವ ಶಿಲಾಶಾಸನಗಳನ್ನು ಅಧ್ಯಯನ ಮಾಡಬೇಕಾಗುವುದು. ಕೊಪ್ಪಳದಲ್ಲಿ ಎರಡು ಅಶೋಕನ ಶಾಸನಗಳಿದ್ದು ಆ ಶಾಸನಗಳು ಬೌದ್ಧಧರ್ಮದ ಇರುವಿಕೆಯ ಬಗೆಗೆ ಸ್ಪಷ್ಟಪಡಿಸುತ್ತವೆ. ಮತ್ತು ಮನುಷ್ಯ ಬೌದ್ಧಧಾರ್ಮಿಕನಾಗಲು ಆ ಶಾಸನಗಳು ಆಗ್ರಹಪಡಿಸುತ್ತವೆ. ಗವಿಮಠದ ಶಾಸನವು ನೇರವಾಗಿ ಬೌದ್ಧಧರ್ಮದ ಪ್ರಸಾರವನ್ನೇ ತನ್ನ ಗುರಿಯನ್ನಾಗಿಟ್ಟುಕೊಂಡು ಹೊರಬಂದುದಾಗಿದೆ. ಪಾಲ್ಕಿಗುಂಡಿನ ಶಾಸನವು ತ್ರುಟಿವಾಗಿರುವುದರಿಂದ ಅದರ ಪಾಠವು ನಮಗೆ ದೊರೆಯುತ್ತಿಲ್ಲ. ಆದರೆ ಗವಿಮಠದ ಶಾಸನದ ಪೂರ್ಣಪಾಠವು ಈ ತೆರನಾಗಿದೆ.

೧. ದೇವಾನಂ ಪಿಯೆ ಆಹ ಸಾತಿರೇಕಾನಿ ಅಡಿತಿಯಾನಿ ವಸಾಣಿ ಯಂ ಸು ಮಿ ಉಪಾ

೨. ಸಕೆ ಣೊ ಚು ಖೊ ಬಾಢಂ ಪಕಂತೆ ಸಂವಛರೆ ಸಾತಿರೇಕೆಯಂ ಮೆ ಸಂಘೆ ಉಪೇತಿ ಬಾಢಂ

೩. ಚ ಮೆ ಪಕಂತೆ ಸೆ ಇಮಾಯಂ ವೆಲಾಯಂ ಜಂಬೂದೀಪಸಿ ಅಮಿಸಾ ದೇವಾ ಸಮಾಣಾ

೪. ಮಾಣಸೇಪಿ ಹಿದಾಣಿ ಮಿಸಾ ಕಟಾ ಪಕಮಸ ಏಸ ಫಲೇ ಣೊ ಹಿ ಇಯಂ ಮಹತಣೇ ವಚ

೫. ಕಿಯೆ ಪಾಪೋತವೆ ಖುಡಕೇನಪಿ ಪಕಮಮಿನೇನ ವಿಪುಲೆಪಿಚ ಕಿ ಯೆ ಸ್ವಗೆ ಆರಾಧಯಿತವೆಏ.

೬. ತಾಯ ಚ ಅಠಾಯ ಇಯಂ ಸಾವಣೆ ಖುಡಕಾಚ ಉಡಾರಾಚ ಪಕಮಂತು ತಿ ಅಂತಾಪಿಚ ಜಾಣಂತೂ ಚಿರಠಿ

೭. ತಿಕೇಚ ಪಕಮೆ ಹೊ ತು ಇಯಂ ಚ ಅಠೆ ವಡಸಿತಿ ವಿಪಲೇಚದಿಯ

೮. ಢಿಯಂ ಪಿಚ ವಢಿಸಿತೀತಿ.

ದೇವತೆಗಳ ಪ್ರೀತಿಗೆ ಪಾತ್ರನಾದವನು ಹೇಳುತ್ತಾನೆ. ಈಗ ಎರಡೂವರೆ ವರುಷಗಳ ಕಾಲ ನಾನು ಉಪಾಸಕನಾಗಿದ್ದೇನೆ. ಆದರೆ ನಾನು ನಿಜವಾಗಿಯೂ ಆಸಕ್ತಿಯಿಂದ ಪ್ರವರ್ತಕನಾಗಿರಲಿಲ್ಲ. ಈಗ

ಒಂದೂವರೆ ವರುಷದಿಂದೀಚೆಗೆ ಸಂಘಕ್ಕೆ ಸೇರಿರುತ್ತೇನೆ ಮತ್ತು ಆಸಕ್ತಿಯಿಂದ ಇದರಲ್ಲಿ ಪ್ರವರ್ತಕನಾಗಿದ್ದೇನೆ. ಹೀಗೆ ಈ ಸಮಯದಲ್ಲಿ ಜಂಬೂದ್ವೀಪದಲ್ಲಿ ದೇವರ ಮಾನವರ ಸಂಗಮ ಸಾಧ್ಯವಾಗುತ್ತಿರಲಿಲ್ಲ. ಈಗ ಈ ಸಂಗಮಸಾಧ್ಯವಾಗಿದೆ. ಇದು ಆಸಕ್ತಿಯ ಫಲ. ಕೇವಲ ದೊಡ್ಡವರೇ ಇದನ್ನು ಸಾಧಿಸುತ್ತಾರೆ ಎಂದಲ್ಲ, ಪರ್ಯಾಯವಾಗಿ ತೀರ ಬಡವನೂ ಸಹ ಆಸಕ್ತಿಯಿಂದ ಪ್ರವರ್ತಿಸಿದರೆ ಘನ ಸ್ವರ್ಗವನ್ನು ಪಡೆಯುತ್ತಾನೆ. ಈ ವಿಷಯಕ್ಕಾಗಿ ಈ ಘೋಷಣೆ. ತೀರ ಕೆಳಗಿನವರು ಅರಿಯಲಿ. ಆಸಕ್ತಿಯಿಂದ, ಉತ್ಸಾಹದಿಂದ ಕೂಡಿದ ಕ್ರಿಯೆಗಳು ಸದಾ ಉಳಿಯುತ್ತಿವೆ. ಇದು ಬೆಳೆಯಲಿ, ದೂರ ದೂರದವರೆಗೂ ಬೆಳೆಯಲಿ ಬೆಳೆಯಲಿ ಮತ್ತೆ ಮತ್ತೆ ಬೆಳೆಯಲಿ.

ಈ ರೀತಿ ಬೌದ್ಧಧರ್ಮಕ್ಕೆ ಪ್ರಚಾರ ನೀಡಿದ್ದ ಅಶೋಕನು ಕರ್ನಾಟಕದಲ್ಲಿ ಬೌದ್ಧ ದರ್ಮವನ್ನು ಪ್ರಸಾರ ಮಾಡುವಲ್ಲಿ ಯಶಸ್ವಿಯಾದನು. ಈ ಹಿನ್ನೆಲೆಯಲ್ಲಿ ಕೊಪ್ಪಳವು ಅಂದು ಮಹಾನ್ ಧಾರ್ಮಿಕ ಕೇಂದ್ರವಾಗಿ ರೂಪಗೊಂಡಿತು. ಕೊಪ್ಪಳದಂತೆ ಹಂಪೆ, ಸನ್ನತಿ ಮುಂತಾದ ಕೇಂದ್ರಗಳು ಬೌದ್ಧ ಭಿಕ್ಷುಗಳಿಂದ ತುಂಬಿರುತ್ತಿದ್ದವು. ಕೊಪ್ಪಳದ ಗವಿಮಠದ ಮೂಲವಾಸ್ತುವನ್ನು ಸೂಕ್ಷ್ಮವಾಗಿ ಅವಲೋಕನ ಮಾಡಿದಾಗ ಅದು ಬೌದ್ಧ ಚೈತ್ಯಾಲಯವನ್ನು ಹೋಲುತ್ತದೆ. ಏಕೆಂದರೆ ಗೋಡೆಗಳ ಬದಿಯಲ್ಲಿರುವ ಗೂಡುಗಳು ಚೈತ್ಯಾಲಯದಂತೆ ಕಮಾನುಗಳನ್ನು ಹೊಂದಿವೆ. ಜೈನರು ಅರಸರು ಆ ಪ್ರದೇಶವನ್ನು ನೇರವಾಗಿ ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡಿದ್ದರಿಂದ ಬೌದ್ಧಧರ್ಮಕ್ಕೆ ರಾಜಮಾನ್ಯತೆ ಇಲ್ಲದೇ ಹೋಯಿತು. ಹಿಂದೊಂದು ಕಾಲದಲ್ಲಿ ಬೌದ್ಧಧರ್ಮಕೇಂದ್ರವಾಗಿ ಮೆರೆದಿದ್ದ ಕೊಪ್ಪಳವು ಜೈನಧರ್ಮಕ್ಕೆ ತನ್ನ ಮನ್ನಣೆಯನ್ನು ನೀಡಿತು. ಅಶೋಕನ ಈ ಶಾಸನಗಳಲ್ಲಿ ಕಾಲ ಮತ್ತು ಊರಿನ ಹೆಸರಿಲ್ಲದ ಕಾರಣ ಈ ಧರ್ಮ ಕೊಪ್ಪಳಕ್ಕೆ ಬಂದ ಕಾಲವನ್ನು ನಿಖರವಾಗಿ ಹೇಳಲಾಗದು. ಆದರೂ ಅಶೋಕನನ್ನು ಕಾಲಗಣನೆಗೆ ತೆಗೆದುಕೊಂಡರೆ ಈ ಧರ್ಮ ಕ್ರಿ.ಪೂ. ೩ನೇ ಶತಮಾನದ ಉತ್ತರಾರ್ಧದಲ್ಲಿ ಈ ಧರ್ಮವು ಬಂದಿರಬಹುದೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

## ೬. ೨. ಜೈನಧರ್ಮ

ಕರ್ನಾಟಕದಲ್ಲಿ ಜೈನಧರ್ಮಕ್ಕೆ ತನ್ನದೇ ಆದ ಒಂದು ಪರಂಪರೆಯಿದೆ. ಗಂಗ ಅರಸು ಮನೆತನಗಳ ಕಾಲದಲ್ಲಿ ಕೊಪ್ಪಳವು ಸಂಪೂರ್ಣವಾಗಿ ಜೈನರ ಶೈಕ್ಷಣಿಕ ಮತ್ತು ಧಾರ್ಮಿಕ ಕೇಂದ್ರವಾಗಿತ್ತು. ಶ್ರವಣಬೆಳಗೊಳದ ಒಂದು ಶಾಸನವು ಮೌರ್ಯರ ಚಂದ್ರಗುಪ್ತ ಮೌರ್ಯನು ಬಂದು ಅಲ್ಲಿ ಸಲ್ಲೇಖನ ವ್ರತವನ್ನು ಅನುಸರಿಸಿ ಪ್ರಾಣತ್ಯಾಗ ಮಾಡಿದ ಘಟನೆಯನ್ನು ನೆನಪಿಸಿಕೊಂಡರೆ ಕರ್ನಾಟಕದಲ್ಲಿ ಜೈನಧರ್ಮ ಕ್ರಿ.ಪೂ.ದಲ್ಲಿಯೇ ಇತ್ತು ಎಂಬುದನ್ನು ಒಪ್ಪಿಕೊಳ್ಳಲಾಗುತ್ತದೆ. ಜೈನರು ಕರ್ನಾಟಕದಲ್ಲಿ ವೀರಶೈವರು ಬರುವವರೆಗೆ ನಮ್ಮ ನಾಡನ್ನು ನಮ್ಮ ಸಂಸ್ಕೃತಿಯನ್ನು ಆಳುತ್ತಿದ್ದರು. ಆ ಸಂದರ್ಭದಲ್ಲಿ ಕೊಪ್ಪಳ ನಗರವು ಮಹಾಕೊಪಣ ನಗರವಾಗಿ ಪ್ರಸಿದ್ಧಿಯನ್ನು ಪಡೆದಿತ್ತು. ಆ ಪ್ರದೇಶವು ತಿರುಳ್ಗನ್ನಡದ ಪ್ರದೇಶವಾಗಿ ಹೆಸರಿಸಿಕೊಂಡಿತ್ತು. ಶುದ್ಧ ಚಾರಿತ್ರ್ಯವನ್ನು ಕುರಿತು ಮಾತನಾಡುವಾಗ ಆ ಸಂದರ್ಭದಲ್ಲಿ ಕೊಪ್ಪಳದ ಬೆಟ್ಟದಂತೆ ಪವಿತ್ರವಾದುದೆಂದು ಹೇಳುತ್ತಿದ್ದರು. ಕೊಪ್ಪಳದ ಪಾವಿತ್ರ್ಯವನ್ನು ಗಂಗಾಜಲಕ್ಕೂ ಅಜಿತಸೇನ ಮುನಿಪತಿಯ ಗುಣಸಮೃದ್ಧಿಗೂ ಹೋಲಿಸಿದುದನ್ನು ಕಾಣಬಹುದು.

ಬಿಳಿಯರಳೆಯಂತೆ ಗಂಗಾ
ಜಳದಂತೆಸೆವಜಿತಸೇನ ಮುನಿಪತಿಯ ಗುಣಾ
ವಳಿಯಂತೆ ನೆಗಳ್ದ ಕೊಪಣಾ
ಚಳದಂತೆ ಪವಿತ್ರಮತ್ತಿಮಬ್ಬೆಯ ಚರಿತಂ

ಪವಿತ್ರವಾದ ಕೊಪಣಾಚಳದಂತೆ ಅತ್ತಿಮಬ್ಬೆಯ ಜೀವನವು ಪವಿತ್ರವಾದದ್ದೆಂದು ಕವಿಯು ಹೃದಯ ತುಂಬಿ ಭಾವನೆಗಳಲ್ಲಿ ಹೊರಹೊಮ್ಮಿಸಿದ್ದಾನೆ. ಹೀಗೆ ಧ್ವನಿತವಾದ ಈ ಕಾವ್ಯದಲ್ಲಿ ಕೊಪ್ಪಳ ನಾಡವರ ಜೀವನವು ನಿರ್ಮಲವಾದದ್ದಾಗಿರಬೇಕು. ಇಲ್ಲಿಯ ಜಲವು ಗಂಗಾಜಲದಂತೆ ಪವಿತ್ರವಾದದ್ದಾಗಿರಬೇಕು. ಮುನಿಗಳು ಅಜಿತಸೇನಮುನಿಗಳಂತೆ ಗುಣಶ್ರೇಷ್ಠರು: ಅವರು

ಸ್ಥಿರಚಿತ್ತರೆಂದು ಕವಿ ರನ್ನ ಪರೋಕ್ಷವಾಗಿ ಕಾವ್ಯದ ಮೂಲಕ ತನ್ನ ಆಶಯವನ್ನು ವ್ಯಕ್ತಪಡಿಸಿರುವನು.

ಗಂಗರ ಅರಸ ರಾಚಮಲ್ಲನ ಮಂತ್ರಿಯಾದ ಚಾವುಂಡರಾಯನು ತಾನು ರಚಿಸಿದ ಚಾವುಂಡರಾಯ ಪುರಾಣದಲ್ಲಿ ಕೊಪ್ಪಳವನ್ನು ಉಲ್ಲೇಖಿಸಿದ್ದಾನೆ.

ಅಸಿಧಾರಾ ವ್ರತದಿಂದ ಪೆಂಪೆಸೆವಿನಂ ಮುಳ್ಗುಂದದೊಳ್ ಪೊನ್ನಂ ಸಂ
ನ್ಯಸನಕ್ಕೆಂದೆ ನಿವೃತ್ತಿಗೈದು ಕೊಪಣಾದ್ರಿಂದಕ್ಕೆ ವಂದಾಗಮ ಪೋ
ಕ್ತ ಸಮಾಧಾನ ನಿಧಾನಧಿಂ ಮುಡುಪಿ ಮುಕ್ತಿಸ್ಥಾನಮಂ ಮುಂಜೆ
ಧಿಸಿಕೊಂಡೊಳ್ವು ಕುಮಾರಸೇನ ಮುನಿ ಪುಂಗಕ್ಕುಂ ಪೆರರ್ಗಕ್ಕುಮ

ಪೆಂಪೆಸೆವ ಮುಳಗುಂದದಲಿ ಸಂನ್ಯಸನ್ ವ್ರತ ಸಾಧಿಸಲು ಮುನಿಪುಂಗವ ಕುಮಾರ ಸೇನನಿಗೆ ಸಾಧ್ಯವಾಗದೆ ಅಲ್ಲಿಂದ ನಿವೃತ್ತವಾಗಿ ಅದ್ರಿಗಳಲ್ಲಿ ಇಂದ್ರನಂತಿರುವ ಕೊಪಣಾದ್ರಿಗೆ ಆಗಮಿಸಿ ಆಗಮೋಕ್ತ ಸಮಾಧಾನ ವಿಧಾನದಿಂದ ಸನ್ಯಸನ ಸಲ್ಲೇಖನ ವ್ರತವನ್ನು ಸಾಧಿಸಿದನೆಂದು ತಿಳಿದು ಬರುತ್ತದೆ. ಚಾವುಂಡರಾಯನು ಕ್ರಿ.ಶ. ೧೦೭೮ರಲ್ಲಿ ಈ ಕೃತಿಯನ್ನು ರಚಿಸಿದನು. ಕತ್ತಿಯ ಮೊನೆಯ ಮೇಲೆ ನಡೆಯುವಷ್ಟು ಕಷ್ಟವಾದ ಸನ್ಯಾಸ ವ್ರತವನ್ನು ಕೈಗೊಂಡು ಅದರಿಂದ ಕಂಗೊಳಿಸುವ ಹಾಗೆ ಕುಮಾರ ಸೇನ ಮುನಿಯು ಮುಳಗುಂದದಲ್ಲಿ ಸನ್ಯಾಸ ವ್ರತವನ್ನು ಕೈಗೊಂಡನು. ಅನಂತರ ಅವರು ಕೊಪ್ಪಳದ ಬೆಟ್ಟದ ಒಡೆಯನಾದ ದೊಡ್ಡ ಬೆಟ್ಟಕ್ಕೆ ಬಂದರು. ಇಲ್ಲಿ ಅವರು ಜೈನ ಶಾಸ್ತ್ರಗಳಲ್ಲಿ ಹೇಳಿರುವ ಹಾಗೆ ಸಮಾಧಾನಭಾವದಿಂದ ಯಾವುದೇ ಕೋಪ ತಾಪಗಳಿಲ್ಲದ ಮನಸ್ಸಿನಿಂದ ಸಲ್ಲೇಖನ ವ್ರತವನ್ನು ಕೈಗೊಂಡು ಮರಣ ಹೊಂದಿದರು. ಆ ಹಿರಿಮೆ ಅವರಿಗಲ್ಲದೆ ಬೇರೆ ಯಾರಿಗಿದೆ ಎಂದು ಚಾವುಂಡರಾಯ ಪ್ರಶ್ನೆ ಮಾಡುತ್ತಾನೆ. ಕುಮರಸೇನ ಮುನಿಯು ಇಲ್ಲಿ ಸಮಾಧಿಮರಣ ಪಡೆದನು. ಶ್ರವಣಬೆಳಗೊಳದಲ್ಲಿ ಸಮಾಧಿಮರಣ ಪಡೆದವರ ಸಂಖ್ಯೆ ಹೆಚ್ಚು. ಹಲವು ನಿಶಿಧಿ ಕಲ್ಲುಗಳು ಇಲ್ಲಿವೆ. ಕೊಪಣಾಚಲದಲ್ಲೂ ನಿಶಿಧಿ ಕಲ್ಲುಗಳಿರುವುದು ತಿಳಿದುಬಂದಿದೆ.

ಕೊಪ್ಪಳದ ಪ್ರಸ್ತಾಪವು ಪ್ರಸಿದ್ಧ ಜೈನ ಕೇಂದ್ರವಾದ ಶ್ರವಣ ಬೆಳಗೊಳದಲ್ಲಿ ಹಲವು ಬಾರಿ ಕಾಣಿಸಿಕೊಳ್ಳುತ್ತದೆ. ಹೊಯ್ಸಳರ ವಿಷ್ಣುವರ್ಧನನಿಗೆ ಗೆಲುವಿನ ಹೂವಮಾಲೆ ಹಾಕಿದ ಮಹಾದಂಡನಾಯಕ ಗಂಗಣ ಈತನ ಮಹಾ ಯೋಧನಾಗಿರುವಂತೆಯೂ ಮಹಾ ಜಿನಭಕ್ತನಾಗಿದ್ದನು ಎಂಬುದನ್ನೊಳಗೊಂಡ ಶಾಸನದ ಪಾಠ ಇಲ್ಲಿದೆ.

ಮುತ್ತಿನ ಮಾತವಂತಿರಲಿ ಜೀರ್ಣ್ಣಜಿನಾಶ್ರಯ ಕೋಟಿಯಂ ಕ್ರಮಂ
ಬೆತ್ತಿರೆ ಮುನ್ನಿಂತಿರನಿತೂರ್ಗ್ಗಳಂ ನೆರೆ ಮಾಡಿಸುತ್ತ ಮ
ತ್ಯುತ್ತಮ ಪಾತ್ರದಾನದೊದವಂ ಮೆರೆವುತ್ತಿರೆ ಗಂಗವಾಡಿ ತೊಂ
ಬತ್ತರು ಸಾಸಿರಂ ಕೊಪಣಮಾದುದು ಗಂಗಣ ದಂಡನಾಥನಿಂ॥

ಮಹಾದಂಡನಾಯಕ ಗಂಗಣ ದಂಡನಾಥನಿಂದ ಗಂಗವಾಡಿ ಪ್ರದೇಶದ ಎಲ್ಲ ಜೈನ ಬಸದಿಗಳು ದುರಸ್ತಿಯನ್ನು ಹೊಂದಿ, ಕೊಪಣಾಚಲದಂತೆ ಆದವೆಂಬುದನ್ನು ಈ ಶಾಸನವು ತಿಳಿಸುತ್ತದೆ. ಮತ್ತೊಂದು ಅಂಶವು ಹೀಗಿದೆ : ಕೊಪ್ಪಳವು ಜೈನಕೇಂದ್ರವಾಗಿ ಇಡೀ ನಾಡಿನ ಸಮಸ್ತ ಜೈನವಿದ್ವಾಂಸರನ್ನು, ಜೈನ ಮುನಿಗಳನ್ನು ಅದು ಗೌರವಿಸುತ್ತಿತ್ತು. ಒಂದು ಶಾಸನ ಪಾಠವು ಹೇಳುವಂತೆ

ಪ್ರಿಯದಿನ್ದ ಹುಳ್ಳ ಸೇನಾಪತಿ ಕೊಪಣ ಮಹಾತೀರ್ಥದೊಳ್ ಧಾತ್ರಿಯುಂ
ವಾರ್ಧ್ಧಿಯು ಮುಳ್ಳನ್ನಂ ಚತುರ್ವ್ವಿಂಶತಿ ಜಿನಮುನಿಸಂಘಕ್ಕೆ ನಿಶ್ಚಿತ್ತಮಾಗ
ಕ್ಷಯದಾನಂ ಸಲ್ವಪಾಂಗಿಂ ಬಹುಕನಕಮನಾ ಕ್ಷೇತ್ರಜಗ್ಗಿತ್ತು ಸದ್ವೃ
ತ್ತಿಯನಿನ್ತೀಲೋಕಮೆಲ್ಲಂ ಪೊಗಳೆ ಬಿಡಿಸಿದಂ ಪುಣ್ಯಂ ಪುಂಜೈಕಧಾಮಂ

ಈ ಶಾಸನದ ಪ್ರಕಾರ ಕೊಪ್ಪಳ ನಗರವನ್ನು ಆದಿತೀರ್ಥವೆಂದು ಆದಿನಾಥನ ನೆಲೆಯೆಂದು ಮಹಾತೀರ್ಥವೆಂದು ತೀರ್ಥಂಕರರ ಆವಾಸಸ್ಥಾನವಾಗಿತ್ತೆಂದು ಅದನ್ನು ಗೌರವಿಸಲಾಗುತ್ತಿತ್ತು ಎಂಬುದು ತಿಳಿದುಬರುತ್ತದೆ.

ಏಚಿರಾಜ ದಂಡನಾಯಕನು ಮಹಾತೀರ್ಥವಾದ ಕೊಪ್ಪಳದಲ್ಲೂ ಬೆಳ್ವೊಲದಲ್ಲೂ ಇತರೆಡೆಗಳಲ್ಲೂ ಹಲವು ಬಸದಿಗಳನ್ನು ನಿರ್ಮಾಣಮಾಡಿದನೆಂದು ಕೊನೆಗೆ ಕೊಪ್ಪಳದಲ್ಲಿ ಸನ್ಯಾಸವಿಧಿಯಿಂದ ಸಮಾಧಿಯಾದನೆಂದೂ ಶಿವಮೊಗ್ಗ ಜಿಲ್ಲೆಯ ಪುರುಲೆ ಗ್ರಾಮದ ಒಂದು ಶಾಸನವು ತಿಳಿಸುತ್ತದೆ.

ಮಾಡಿಸಿದಂ ಜಿನೇಂದ್ರ ಭವನಂಗಳನಾ ಕೊಪಣಾದಿ ತೀರ್ತ್ಥದಲಾ
ರೂಢಿಯಿನೇಳ್ಗೆ ವೆತ್ತೆಸೆವ ಬೆಳ್ಗೊಳದಲು ಬಹುಚಿತ್ರ ಭಿತ್ತಿಯಿಂ
ನೋಡಿದರಂ ಮನಂಗೊಳಿಪುವೆಂಬಿನಮೇಚ ಚಮೂಪನರ್ತ್ಥಿಕೈ
ಗೊಡೆ ಧರಿತ್ರಿಕೊಂಡು ಕೊನೆದಾಡಿ ಜಸಂ ನಲಿದಾಡೆ ಲೀಲೆಯಿಂ॥

ಅದೇನೇ ಇದ್ದರೂ ಕೊಪ್ಪಳವು ಜೈನರ ಮಹಾಕ್ಷೇತ್ರ. ಅಲ್ಲಿ ಜೈನಧರ್ಮದ ಸ್ಮಾರಕಗಳು ಹೆಚ್ಚಿನ ಪ್ರಮಾಣದಲ್ಲಿ ದೊರೆಯುತ್ತವೆ. ಹಾಗೆಯೇ ಹೆಚ್ಚಿನ ಪ್ರಮಾಣದಲ್ಲಿ ಸ್ಮಾರಕಗಳು ಅಲ್ಲಿ ಇದ್ದವು. ಈ ಕಾರಣಕ್ಕಾಗಿ ಕೊಪ್ಪಳವನ್ನು ಬಸದಿಯ ಬೀಡು ಎಂದು ಕರೆಯುತ್ತಾರೆ.

ಕೊಪ್ಪಳವು ತೀರ್ಥಕ್ಷೇತ್ರ, ಆದಿತೀರ್ಥ, ಮಹಾತೀರ್ಥ ಎಂದೆನಿಸಿರುವಂತೆಯೇ ಬಸದಿಯ ಬೀಡು ಎಂದು ಹೆಸರುವಾಸಿಯಾಗಿದೆ. ಸ್ಥಳೀಯ ಐತಿಹ್ಯಗಳು, ಲಭ್ಯವಾದ ಪೂರಕ ಐತಿಹಾಸಿಕ ಆಕರಗಳು ಈ ಸಂಗತಿಯ ಸತ್ಯಕ್ಕೆ ನಿದರ್ಶನವಾಗಿವೆ. As regards the second point metioned above, viz., that Kopbal contained many monasteries, tradition current at Kopbal to-day asserts that there were not less than 772 basadis in that place. Hence current tradition connects Kopbal, not with Buddisim, but with Jainism (Saletore : 1938:190) ಇಲ್ಲಿ ಸುಮಾರು ೭೭೨ ಬಸದಿಗಳಿಗಿಂತ ಕಡಿಮೆ ಇರಲಿಲ್ಲವೆಂದು ಈಗಾಗಲೇ ತಿಳಿದುಬಂದಿದೆ. ಗಂಗವಾಡಿ ೯೬೦೦೦ ಜಿನಾಲಯಗಳು ಪುನರುತ್ಥಾನ ಪ್ರಕ್ರಿಯೆಯಲ್ಲಿ ಗಂಗರಾಜರು ತೊಡಗಿದರೆಂದು ಶಾಸನದಿಂದ ತಿಳಿದುಬರುತ್ತದೆ. ಆದುದರಿಂದ ಈ ಪ್ರಕ್ರಿಯೆಯಲ್ಲಿ ತೊಡಗಿದ ಗಂಗರಾಜನು ಗಂಗವಾಡಿ ನಾಡನ್ನು ಕೊಪ್ಪಳದ ನಗರದಂತೆ ಜಿನಮಂದಿರಗಳಿಂದ ಕಂಗೊಳಿಸಿದನು.

ಹುಳ್ಳ ಭಂಡಾರಿಯಂತೂ ಕೊಪ್ಪಳದಲ್ಲಿ ಹೇರಳ ಹೊನ್ನನ್ನಿತ್ತು ಭೂಮಿಯನ್ನು ಕೊಂಡು ಅದನ್ನು ಅಲ್ಲಿನ ಜಿನಾಲಯಗಳಿಗೂ, ಸವಣ ಸಂಘದ ಆಹಾರ ದಾನಕ್ಕೂ ಸಮರ್ಪಿಸಿ ಪ್ರಶಂಸಿತನಾಗಿರುವನು. ಹೀಗೆ ಕೊಪ್ಪಳೇತರ ಶಾಸನಗಳಲ್ಲಿ ಕೊಪ್ಪಳದ ಬಸದಿಗಳ ಬಗೆಗೆ ಹತ್ತಾರು ಉಲ್ಲೇಖಗಳಿವೆ. ಅವೆಲ್ಲವೂ ಏಕಕಂಠದಿಂದ ಇಲ್ಲಿನ ಜಿನಗೃಹಗಳ ಮಹಿಮೆಯನ್ನು ಹೊಗಳುತ್ತವೆ. ೧೬-೧೭ನೇ ಶತಮಾನದವರೆಗೂ ಕೊಪ್ಪಣ ನಗರವು ಜೈನ ತೀರ್ಥಕ್ಷೇತ್ರವಾಗಿ ಮುಂದುವರಿದಿತ್ತು ಎಂಬುದಕ್ಕೆ ಡಾ. ಹಂಪಾ ನಾಗರಾಜಯ್ಯನವರು ಅನೇಕ ಸಾಕ್ಷಿ ಪುರಾವೆಗಳನ್ನು ಒದಗಿಸುತ್ತಾರೆ. ಸಕಲ ಕಲಾಪ್ರವೀಣ ಚಂದ್ರಕೀರ್ತಿ ದೇವರು ಮೂಲಸಂಘ ಇಂಗುಳೇಶ್ವರ ಬಳಿಗೆ ಸೇರಿದ ಶುಭಚಂದ್ರ ದೇವರ ಪ್ರಮುಖ ಶಿಷ್ಯರು. ಇಲ್ಲಿ ಚಂದ್ರಪ್ರಭ ಪ್ರತಿಮೆ ಮಾಡಿಸಿದ್ದು ಸುಮಾರು ೧೪೦೦ರಲ್ಲಿ. ವಾದಿ ವಿದ್ಯಾನಂದರು ತಮ್ಮ ಜಿನಧರ್ಮ ಪ್ರಭಾವ ಪೂಜೆ ಉತ್ಸವಗಳನ್ನು ಕೊಪ್ಪಳದಲ್ಲಿ ಮಾಡಿದ್ದರು. ಅವರ ಕಾಲ ಕ್ರಿ.ಶ. ೫೦೦. ಆದರೆ ಈ ವೇಳೆಗೆ ಕೊಪ್ಪಳದಲ್ಲಿನ ಜಿನಾಲಯವೊಂದು ಚೆನ್ನಕೇಶವ ದೇವಾಲಯವಾಗಿ ಮತಾಂತರಗೊಂಡಿತ್ತು. ವಿಜಯನಗರ ಸಾಮ್ರಾಜ್ಯದ ಸೀಮಾ ಪ್ರದೇಶಗಳಲ್ಲಿ ಕೊಪ್ಪಳ ನಗರವೂ ಒಂದು. ಚಕ್ರವರ್ತಿ ಕೃಷ್ಣದೇವರಾಯನು ಕೊಪ್ಪಳ ಸೀಮೆಯ ನಾಯಕನನ್ನಾಗಿ ಭಂಡಾರಿ ತಿಮ್ಮಪ್ಪಯ್ಯನನ್ನು ನೇಮಿಸಿದ್ದನು. ಈತನು ೧೫೨೧ರಲ್ಲಿ ಕೊಪ್ಪಳದ ಚೆನ್ನಕೇಶವ ದೇವಾಲಯಕ್ಕೆ ಹಿರಿಯ ಸಿಂದೋಗಿ ಗ್ರಾಮವನ್ನು ದತ್ತಿಯಿತ್ತನು. ಕೊಪ್ಪಳದಲ್ಲಿ ಜೈನದೇವಾಲಯವನ್ನು ಹಿಂದೂ ದೇವಾಲಯವಾಗಿ ಪರಿವರ್ತಿಸಿದ್ದು ಅದಕ್ಕೆ ಅಧಿಕೃತವಾಗಿ ರಾಜಮನ್ನಣೆಯ ಮೊಹರು ಬಿದ್ದದ್ದು ಇದೇ ಪ್ರಥಮ ಎಂದು ಅವರು ಗುರುತಿಸುತ್ತಾರೆ. ಇದರಿಂದ ಹುರುಪುಗೊಂಡ ವೀರಶೈವ ಲಿಂಗಾಯತ ಧರ್ಮದವರು ವಿಶಾಲವೂ ವಿಖ್ಯಾತವೂ ಪ್ರಾಚೀನವೂ ಆದ ಜೈನಮಠದ ಗವಿಮಠದ ಪರಿಸರವನ್ನು ತಮ್ಮದಾಗಿಸಿಕೊಂಡರು.

## ಕೊಪ್ಪಳದಲ್ಲಿ ಜೈನಧರ್ಮದ ಸ್ಮಾರಕಗಳು

ಕೊಪ್ಪಳದಲ್ಲಿ ಜೈನರು ಗೆಲುವಿಗಾಗಿ ವಿಜಯಸ್ತಂಭಗಳನ್ನು ನಿರ್ಮಿಸಿದ್ದಾರೆ. ಸಾವಿಗಾಗಿ

ಸ್ಮೃತಿ ಸ್ಮಾರಕಗಳನ್ನು ನಿಲ್ಲಿಸಿದ್ದಾರೆ. ಇವೆರಡೂ ಹಲವು ದೇಶಗಳಲ್ಲಿ ರೂಢಿಯಿದ್ದಂತೆ ಕೊಪ್ಪಳದಲ್ಲೂ ಕಂಡುಬರುತ್ತವೆ. ವೀರಗಲ್ಲು ಹಾಕಿಸುವುದು, ಮಾಸ್ತಿಕಲ್ಲು ಮಾಡಿಸುವುದು, ಚಾಗದ ಕಂಬಗಳನ್ನು ನಿಲ್ಲಿಸುವುದು, ಶಾಸನವನ್ನು ಬರೆಸುವುದು, ನಿಷಿದಿಯ ಕಲ್ಲನ್ನು ನಿಲ್ಲಿಸುವ ಪದ್ಧತಿ ಜೈನರಲ್ಲುಂಟು. ಹೆಂಗಸರು, ಗಂಡಸರು, ಜೈನಮುನಿಗಳು, ಕಂತಿಯರು, ಮಕ್ಕಳು ದೊಡ್ಡವರು ಎಂಬ ತಾರತಮ್ಯವಿಲ್ಲದೆ ಇಲ್ಲಿ ಸತ್ತವರಿಗಾಗಿ ನಿಶಿಧಿಗಳನ್ನು ನಿಲ್ಲಿಸಿದ್ದಾರೆ. ಅದರಂತೆಯೇ ಬೇರೆ ರೂಪದಲ್ಲಿ ಮಡಿದ ಯೋಧರ ಸ್ಮರಣೆಗೆಂದು ಸ್ಮಾರಕಗಳನ್ನು ನಿರ್ಮಾಣ ಮಾಡಿದ್ದಾರೆ. ಅವುಗಳನ್ನು ಸಂಗ್ರಹವಾಗಿ ಹೀಗೆ ಹೇಳಬಹುದು:

೧. ಚಟ್ಟಲದೇವಿಯು ತನ್ನ ತಾಯಿ ಗಾವಬ್ಬರಸಿ ತಂದೆ ಅರಿಮುಳಿದೇವ ತಮ್ಮ ಲೋಕವಿದ್ಯಾಧರ ಮತ್ತು ತಂಗಿ ಕೆಂಚಲದೇವಿ ಇವರ ಪರೋಕ್ಷ ವಿನಯಾರ್ಥವಾಗಿ ಹೊಂಬುಜದಲ್ಲಿ ಇಂದಿಗೂ ವಿರಾಜಮಾನವಾಗಿರುವ ಭವ್ಯ ಪಂಚಕೂಟ ಬಸದಿಯನ್ನು ೧೦೭೭ರಲ್ಲಿ ಕಟ್ಟಿಸಿದಳು. ಕೊಪ್ಪಳದಲ್ಲಿಯೂ ಇಂತಹ ಬಸದಿಗಳಿದ್ದವು. ಆದರೆ ಅವು ಈಗ ಸುಳಿವು ಸಿಗದಂತೆ ನಾಶವಾಗಿವೆ.

೨. ಗಂಗಮಹಾನಾಯಕ ಇಮ್ಮಡಿ ಮಾರಸಿಂಹನು ಮಡಿದದ್ದು ಬಂಕಾಪುಗದಲ್ಲಾದರೂ ಆತನ ಜ್ಞಾಪಕಾರ್ಥವಾಗಿ ಪರೋಕ್ಷ ವಿನಯರೂಪದಲ್ಲಿ ಶ್ರವಣಬೆಳಗೊಳದಲ್ಲಿ ಭವ್ಯಾಕಾರದ ಮಾನಸ್ತಂಭವನ್ನು ಸ್ಥಾಪಿಸಲಾಗಿದೆ. ಆ ಹೆಸರಿನ ಮಾನಸ್ತಂಭವು ಕೂಡ ಕೊಪ್ಪಳದಲ್ಲಿ ಸಿಗುತ್ತದೆ.

೩. ಚಾವುಂಡರಾಯನು ನಿಧನವಾದಾಗ ವಿನಯಾರ್ಥವಾಗಿ ಶ್ರವಣಬೆಳಗೊಳದ ದೊಡ್ಡ ಬೆಟ್ಟದ ಮೇಲೆ ತ್ಯಾಗದ ಕಂಬವನ್ನು ನಿಲ್ಲಿಸಿದ್ದಾರೆ. ಅದೇ ಸ್ವರೂಪದ ತ್ಯಾಗದ ಕಂಬಗಳು ಕೊಪ್ಪಳದಲ್ಲಿ ಹೆಚ್ಚು ಸಿಗುತ್ತವೆ. ಶಾಂತಲದೇವಿಯ ತಾಯಿ ಮಾಚಿಕಬ್ಬೆಯು ಸಲ್ಲೇಖನ ವ್ರತದಿಂದ ನಿಧನ ಹೊಂದಿದಾಗ ಆಕೆಯ ನೆನಪಿಗಾಗಿ ಕೊಪ್ಪಳದಲ್ಲಿ ನಿಶಿಧಿ ಕಲ್ಲನ್ನು ನಿಲ್ಲಿಸಲಾಗಿದೆ. ಕೊಪ್ಪಳದಲ್ಲಿ ಬಸದಿಯೊಳಗೆ

ಬಯಲಲ್ಲಿ, ಬಸದಿಯ ಆವರಣದಲ್ಲಿ, ಬೆಟ್ಟದ ಮೇಲೆ ಮಂಟಪ ಕಟ್ಟಿ ಅದರ ನಡುವೆ ಬೆಟ್ಟದ ಬಂಡೆಯ ಮೇಲೆ ಕೆತ್ತಿ ಹೀಗೆ ನಾನಾ ರೂಪದಲ್ಲಿ ಸಚಿತ್ರ ನಿಶಿಧಿಗಳನ್ನು ನಿಲ್ಲಿಸಿರುವುದು ಕಂಡು ಬರುತ್ತದೆ. ಇಂಥ ಪರಂಪರೆಗೆ ಸೇರಿದ ನಿಶಿಧಿಗಳ ದೊಡ್ಡ ರಾಶಿಯೇ ಇಲ್ಲಿ ಪತ್ತೆಯಾಗಿದೆ. ಈ ಕಂಬಗಳ ತುದಿಯು ಗೋಪುರಾಕಾರದಲ್ಲಿ ಬಿಡಿಸಿದ್ದು ಒಟ್ಟು ಪುಟ್ಟ ಬಸದಿಗಳ ಆಕಾರದಲ್ಲಿರುವಂತೆ ಕೆತ್ತಲಾಗಿದೆ.

ಹೊಸತಾಗಿ ಲಭ್ಯವಾಗಿರುವ ಕೊಪ್ಪಳ ಶಾಸನಗಳು ಪ್ರತ್ಯೇಕ ಕಲ್ಲು ಬಂಡೆಗಳ ಮೇಲೆ ಕೆತ್ತಲ್ಪಟ್ಟಿವೆ. ಅಂದರೆ ಕೊಪ್ಪಳದಲ್ಲಿ ಒಂದು ಕಡೆ ಬಂಡೆಯಮೇಲೆ ಕೆತ್ತಿರುವ ಜಟಾಸಿಂಹ ನಂದಿ ಹೆಸರಿರುವ ರೀತಿಯವಲ್ಲ. ಶ್ರವಣಬೆಳಗೊಳವನ್ನು ಬಿಟ್ಟರೆ ಇಡೀ ಕನ್ನಡ ನಾಡಿನಲ್ಲಿ ಅಧಿಕ ಸಂಖ್ಯೆಯಲ್ಲಿ ಸಿಕ್ಕಿರುವ ನಿಶಿಧಿಗಳು ಸಿಕ್ಕಿರುವ ಸ್ಥಳ ಕೊಪ್ಪಳವಾಗಿದೆ. ಆ ಕೀರ್ತಿಗೆ ಅದು ಭಾಜನವಾಗಿದೆ. ಈ ಹೊಸ ಶೋಧನೆಯಿಂದ ಪೂರ್ವೋಕ್ತ ಜಟಾಸಿಂಹ ನಂದಿಯು ಜೈನ ಆಚಾರ ಪರಂಪರೆಯಲ್ಲಿ ಪ್ರಸಿದ್ಧರಾಗಿರುವರು. ವಾರಾಂಗಚರಿತೆ ಎಂಬ ಸಂಸ್ಕೃತ ಕಾವ್ಯವನ್ನು ರಚಿಸಿರುವರು ಎಂದು ತಿಳಿದುಬರುತ್ತದೆ. ಅಲ್ಲದೆ ಜಟಾಸಿಂಹ ನಂದಿಯ ಶಾಸನದ ಹತ್ತಿರವೇ ಅವರ ಪಾದಗಳನ್ನು ಕೆತ್ತಲಾಗಿದೆ. ಇದು ಶ್ರವಣಬೆಳಗೊಳದಲ್ಲಿ ಭದ್ರಬಾಹುಮುನಿಯ ಪಾದಗಳನ್ನು ಬಿಡಿಸಿರುವ ಮಾದರಿಗೆ ಸೇರಿದ್ದು. ಇದನ್ನು ಶ್ರವಣಬೆಳಗೊಳದಲ್ಲಿ ಭದ್ರಬಾಹು ಮುನಿಯು ಸಲ್ಲೇಖನ ವ್ರತಧಾರಿಯಾಗಿ ನಿರ್ವಾಣವನ್ನು ಹೊಂದಿರುವುದನ್ನು ತೋರಿಸುವುದು ಜೈನಪರಂಪರೆಯಲ್ಲಿ ಹಳೆಯ ಪದ್ಧತಿ. ಈ ಪದ್ಧತಿ ಇಲ್ಲೂ ಕಾಣಸಿಗುತ್ತದೆ. ಕೊಪ್ಪಳದಲ್ಲಿ ಪ್ರಸ್ತುತ ಶಾಸನಗಳು ನಾನಾ ಆಯಾಮಗಳನ್ನು ಕುರಿತು ಚರ್ಚಿಸುವ ಕಾರ್ಯ ನಮ್ಮ ಮುಂದಿದೆ. ಲಭ್ಯ ಶಾಸನಗಳ ಪಾಠವನ್ನು, ಆಯಾ ಶಾಸನಗಳ ಮಹತ್ವವನ್ನು ಜೊತೆಜೊತೆಗಿಟ್ಟು ಚರ್ಚೆ ನಡೆಯಬೇಕು. ಹೀಗೆ ಜೈನ ಧರ್ಮದ ಹರವು ಕೊಪ್ಪಳದಲ್ಲಿ ಒಂದು ಸಹಸ್ರವರ್ಷಗಳ ಪರ್ಯಂತ ಕಾಣಿಸುತ್ತದೆ.

## ೬. ೩. ವೀರಶೈವ ಧರ್ಮ

ವೀರಶೈವ ಧರ್ಮವು ೧೨ನೇ ಶತಮಾನದಿಂದೀಚೆಗೆ ಹೆಚ್ಚು ಪ್ರಚಲಿತದಲ್ಲಿರುವುದಾಗಿ ಕಂಡುಬರುತ್ತದೆ. ಮೂಲ ವೀರಶೈವ ಧರ್ಮದ ನೆಲೆಯು ವೇದಾಗಮಗಳಲ್ಲಿ ಉಂಟು. ಶಿವಾಗಮಗಳು, ವೀರಾಗಮಗಳು, ವೀರಶೈವದ ತಾತ್ವಿಕ ನೆಲೆಗಳಾದ ಅಷ್ಟಾವರಣ, ಷಟ್‌ಸ್ಥಲ ಮತ್ತು ಪಂಚಾಚಾರಗಳನ್ನು ವಿಶದಪಡಿಸುತ್ತವೆ. ಆದಿ ರೇಣುಕರ ಕಾಲದಿಂದ ವೀರಶೈವ ಧರ್ಮವು ಪ್ರಚಲಿತದಲ್ಲಿತ್ತೆಂದು ಹೇಳಲಾಗುತ್ತದೆ. ಇದಕ್ಕೆ ಆಧಾರವಾಗಿ ಸಿದ್ಧಾಂತ ಶಿಖಾಮಣಿ ಮತ್ತು ಶಿವಾಗಮಗಳಿರುವುದನ್ನು ಕಾಣಬಹುದು. ಬಸವಣ್ಣನವರು ಹೇಳಿದ ಷಟ್‌ಸ್ಥಲ, ಪಂಚಾಚಾರ ಮತ್ತು ಅಷ್ಟಾವರಣ ತತ್ವಗಳು ಸಂಸ್ಕೃತ ಭಾಷೆಯಲ್ಲಿ ಮೇಲೆ ಹೇಳಿದ ಗ್ರಂಥಗಳಲ್ಲಿ ಸಿಗುತ್ತವೆ. ಅವುಗಳ ಕಾಲ ಎಷ್ಟು ಹಳೆಯದೆಂದು ಗೊತ್ತಾಗದಿದ್ದರೂ ಬಸವಪೂರ್ವದ ರಚನೆಗಳೆಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ವೀರಶೈವ ಧರ್ಮವು ೧೨ನೆಯ ಶತಮಾನದಲ್ಲಿ ಬಸವಾದಿ ಪ್ರಮುಥರಿಂದ ಪುನರುಜ್ಜೀವನವನ್ನು ಪಡೆದುಕೊಂಡಿತು. ಕಲ್ಯಾಣದ ಕ್ರಾಂತಿ ಈ ಪುನರುಜ್ಜೀವನದ ಕ್ರಾಂತಿಯಾಗಿದೆ. ಕಲ್ಯಾಣದ ಕ್ರಾಂತಿಯ ಧಾರ್ಮಿಕ ಆಯಾಮವನ್ನು ಕುರಿತು ಚರ್ಚಿಸಿದಾಗ ಧಾರ್ಮಿಕ ವಲಯದಲ್ಲಿ ಮಹತ್ತರ ಸಾಧನೆಯಾಗಿರುವುದು ಕಂಡುಬರುತ್ತದೆ. ಕರ್ನಾಟಕ ಮಹಾರಾಷ್ಟ್ರ, ಆಂಧ್ರಪ್ರದೇಶ ರಾಜ್ಯಗಳಲ್ಲಿ ವೀರಶೈವ ಧರ್ಮವು ಪುನರುಜ್ಜೀವನ ಪಡೆದುಕೊಂಡು ಹೊಸ ಆಯಾಮಗಳನ್ನು ಬೆಳೆಸಿಕೊಂಡಿತು ಎಂದು ನಂಬಲಾಗಿದೆ. ಕರ್ನಾಟಕ ಭೂ ಭಾಗದ ಎಲ್ಲ ಪ್ರದೇಶಗಳ ಮೇಲೂ ಕಲ್ಯಾಣದ ಕ್ರಾಂತಿಯ ಪರಿಣಾಮಗಳನ್ನು ಗುರುತಿಸಬಹುದು. ಕಾಯಕ ತತ್ವ, ಮೋಕ್ಷ ಸಿದ್ಧಾಂತ ಮತ್ತು ಜೀವನ ಕ್ರಮಗಳಲ್ಲಿ ಈ ಕಲ್ಯಾಣದ ಕ್ರಾಂತಿಯು ಹಲವು ಮಾರ್ಪಾಡುಗಳನ್ನು ತಂದುಕೊಂಡಿತು. ಈ ಸರಳ ಜೀವನವನ್ನು ನಂಬಿ ಹಲವು ಜೈನ-ವೈಷ್ಣವರು ವೀರಶೈವ ಧರ್ಮದ ಅನುಯಾಯಿಗಳಾದರು. ಪ್ರತಿ ಜಾತಿಗಳು ವೀರಶೈವ ಧರ್ಮದ ವೇದಿಕೆಯಡಿ ಸಮಾನತೆಯನ್ನು ಗಳಿಸಿಕೊಂಡವು. ಈ ಹಿನ್ನೆಲೆಯಲ್ಲಿ ಅಖಂಡ ಕರ್ನಾಟಕವು ಇನ್ನಿಲ್ಲ ಎನ್ನುವಂತೆ ವೀರಶೈವ ಧರ್ಮಮಯವಾಯಿತು. ಅದು ಎಲ್ಲ ಜಾತಿ ಜನಾಂಗಗಳ

ಸಂಗಮವಾಯಿತು. ಸಾಮಾಜಿಕ ಆರ್ಥಿಕ ಶೈಕ್ಷಣಿಕ ಮತ್ತು ನೈತಿಕ ನೆಲೆಗಟ್ಟುಗಳನ್ನು ಈ ಹಿನ್ನೆಲೆಯಲ್ಲಿ ಪುನಾರಚಿಸಿಕೊಳ್ಳ ಲಾಯಿತು. ಅಗ್ರಹಾರಗಳ ಪದ್ಧತಿಗಳು ತೆರೆಕಂಡವು. ಬೌದ್ಧ ಚೈತ್ಯಾಲಯಗಳ ಶಿಕ್ಷಣವು ಅಂತಿಮವಾಯಿತು. ಯಜ್ಞಯಾಗಗಳ ಸದ್ದಡಗಿತು. ಇಂತಹ ಒಂದು ಸುಮೂರ್ತ ವೇಳೆಯಲ್ಲಿ ವೀರಶೈವ ಧರ್ಮ ಹೆಚ್ಚು ಜನಾಕರ್ಷಕವಾಗಿ ಕರ್ನಾಟಕದ ಜನಮನವನ್ನು ಗೆದ್ದಿತು.

ಕೊಪ್ಪಳ ಪ್ರದೇಶವು ಪಕ್ಕ ಜೈನಪರಿಸರವನ್ನು ಆ ಕಾಲಘಟ್ಟದಲ್ಲಿ ಹೊಂದಿತ್ತು. ಕಲ್ಯಾಣದ ಕ್ರಾಂತಿಯ ಪರಿಣಾಮವಾಗಿ ಧಾರ್ಮಿಕವಾಗಿ ಕೊಪ್ಪಳವು ಪರಿವರ್ತನೆಗೊಂಡಿತು. ಜೊತೆಗೆ ಹೊಸ ಧಾರ್ಮಿಕ ಸಿದ್ಧಾಂತ ತತ್ವಗಳನ್ನು ಅಳವಡಿಸಿಕೊಂಡು ಸರಳ ಜೀವನ ಮಾರ್ಗಗಳನ್ನು ಕಂಡುಕೊಂಡಿತು. ಕೊಪ್ಪಳದಲ್ಲಿ ಈಗ ಹೇಳಲಾಗುವ ಗವಿಮಠವು ಜೈನಧರ್ಮದ ತರುವಾಯ ವೀರಶೈವ ಧರ್ಮದ ಕೇಂದ್ರವಾಯಿತು. ಕೊಪ್ಪಳದ ಗವಿಸಿದ್ದೇಶ್ವರನ ಹಿನ್ನೆಲೆಯಲ್ಲಿ ಆ ಪ್ರದೇಶವಿಡೀ ವೀರಶೈವರ ತಾಣಗಳಾಗಿ ಮಠದ ಸಂಸ್ಕೃತಿ ಬೆಳೆಯಿತು. ವೀರಶೈವರಲ್ಲಿ ಗುಡಿ ಅಥವಾ ದೇವಾಲಯಗಳನ್ನು ಕಟ್ಟುವ ಪದ್ಧತಿ ಇಲ್ಲ. ಅದನ್ನು ವಚನ ಸಾಹಿತ್ಯವಾಗಲೀ ಶಿವಾಗಮಗಳಾಗಲೀ ಸಮರ್ಥಿಸುತ್ತವೆ. ಅದುದರಿಂದ ಅವರು ಮಠಗಳನ್ನು ಕಟ್ಟಿಕೊಳ್ಳುತ್ತಿದ್ದರು. ಮಠಗಳು ಜ್ಞಾನ ದಾಸೋಹದ ಅನ್ನದಾಸೋಹದ ಕೇಂದ್ರಗಳಾಗಿರುತ್ತಿದ್ದವು. ಧಾರ್ಮಿಕ ಸಾಧಕರು ಅಲ್ಲಿ ನೆಲೆಸಿ ಜ್ಞಾನದೀಕ್ಷೆಯನ್ನು ಪಡೆಯುತ್ತಿದ್ದರು. ವೇದಾಗಮಗಳಿಂದ ವಿಮುಖರಾಗಿ ಶಿವಾಗಮಗಳ ಕೇವಲ ತಾತ್ವಿಕ ಆಶಯಗಳನ್ನು ಪಡೆದುಕೊಂಡು ಜ್ಞಾನದ ಜಿಜ್ಞಾಸುಗಳು ಅಧ್ಯಯನ ನಡೆಸುತ್ತಿದ್ದರು. ಅವರ ಅಧ್ಯಯನಗಳು ಹೆಚ್ಚು ಪ್ರಯೋಗಶೀಲವಾಗಿರುತ್ತಿದ್ದವು. ಸಮಾಜದ ಏರುಪೇರುಗಳ ಜೊತೆಗೆ ಸಮಸ್ಪಂದನವನ್ನು ಅವು ಏರ್ಪಡಿಸಿಕೊಳ್ಳುತ್ತಿದ್ದವು. ಸರಳ ಜೀವನದ ಸೂತ್ರಗಳನ್ನು ಕಂಡುಕೊಳ್ಳಲು ಅಧ್ಯಾತ್ಮವನ್ನು ಬಳಸಿಕೊಳ್ಳುವ ಅನುಭಾವ ತತ್ವವನ್ನು ಅವರು ಪ್ರಚುರಪಡಿಸುತ್ತಿದ್ದರು. ಈ ಹಿನ್ನೆಲೆಯಲ್ಲಿ ಕೊಪ್ಪಳದ ಗವಿಮಠವು ಬೇರೆಯೆಂದು ಹೇಳಬೇಕಾಗಿಲ್ಲ.

ಕೊಪ್ಪಳದಲ್ಲಿ ಅನೇಕ ಶೈವದೇವಾಲಯಗಳಿವೆ. ಸ್ಥಾವರ ಲಿಂಗವನ್ನು ಪೂಜೆ ಮಾಡುವ ಪರಿಪಾಠ ಇಲ್ಲದಿದ್ದರೂ ಅದನ್ನು ಪವಿತ್ರ ಕೇಂದ್ರವೆಂದು ಬಗೆಯಲು ಸ್ಥಾವರಲಿಂಗಗಳ ಪ್ರತಿಷ್ಠಾಪನೆ ಅಲ್ಲಿ ನಡೆದಿದೆ. ಕ್ರಿ.ಶ. ೧೨ನೇ ಶತಮಾನದಿಂದೀಚೆಗೆ ತೀರ ವಿರಳವಾಗಿ ಶಿವಲಿಂಗವಿರುವ ದೇವಾಲಯಗಳು ನಮಗೆ ದೊರೆಯುತ್ತವೆ. ಕೊಪ್ಪಳದ ಗವಿಸಿದ್ಧ ಮಹಾನ್ ಅನುಭಾವಿ. ಅವನನ್ನು ಶಿವನ ಒಂದು ಅವತಾರವೆಂದೇ ಪೂಜಿಸುತ್ತಾರೆ. ಗವಿಸಿದ್ಧನೆಂದರೆ ಗವಿಯಲ್ಲಿ ತಪೋಗೈದು ಲೋಕಕಲ್ಯಾಣಾರ್ಥವಾಗಿ ಜ್ಞಾನದೀಕ್ಷೆಯನ್ನು ನೀಡಿದ ಮಹಾಪುರುಷನೆಂದು ಅಲ್ಲಿನ ಜನಗಳು ಅರ್ಥೈಸುತ್ತಾರೆ.

೧೨ನೇ ಶತಮಾನದ ಪೂರ್ವದಲ್ಲಿ ಕೊಪ್ಪಳ ಪ್ರದೇಶದಲ್ಲಿ ಕಾಳಾಮುಖರು, ಪಾಶುಪತರು, ಕಾಪಾಲಿಕರು ಶಿವನ ಉಪಾಸಕರೆಂದು ಉಲ್ಲೇಖಿಸಲ್ಪಟ್ಟಿದ್ದಾರೆ. ಪುರಾತತ್ವ ಇಲಾಖೆಯ ಆಕರಗಳಿಂದ ಇಲ್ಲಿ ಒಂದನೇ ಶತಮಾನದಿಂದಲೇ ಶಿವಧರ್ಮ ಊರ್ಜಿತದಲ್ಲಿತ್ತೆಂದು ಹೇಳಲಾಗುತ್ತಿದೆ. ಹಿರೇಹಡಗಲಿ (ಬಳ್ಳಾರಿ ಜಿಲ್ಲೆ)ಯ ತಾಮ್ರಶಾಸನವೊಂದರಲ್ಲಿ ಶಿವಸ್ಕಂದವರ್ಮ, ತಾಳಗುಂದ (ಶಿವಮೊಗ್ಗ ಜಿಲ್ಲೆ) 'ಶಾತಕರ್ಣಿ ಅರಸನಿಂದ ಪೂಜಿಸಲ್ಪಟ್ಟ ಮಹಾದೇವ ' ವಾಸನ (ನರಗುಂದ ತಾಲ್ಲೂಕು, ಧಾರವಾಡ ಜಿಲ್ಲೆ) ಚಂಡಶಿವ ಈ ಉಲ್ಲೇಖಗಳು ಈ ಭಾಗದಲ್ಲಿ ಶೈಧರ್ಮ ಆಚರಣೆಯಲ್ಲಿತ್ತು ಎಂಬುದನ್ನು ತಿಳಿಸುತ್ತವೆ. ಕುಕನೂರು ಗ್ರಾಮದ ಮಲ್ಲಿಕಾರ್ಜುನ ಗುಡಿಯಲ್ಲಿರುವ ಶಾಸನವು ಶ್ರೀ ಮಲ್ಲಿಕಾರ್ಜುನ ದೇವರ ನಂದಾದೀವಿಗೆ ಎಂದು ಹೇಳುತ್ತದೆ. ಅಳವಂಡಿ ಗ್ರಾಮದಲ್ಲಿರುವ ಮಠದ ಶಾಸನದಲ್ಲಿ ಶೈವಧರ್ಮದ ಉಲ್ಲೇಖವಿದೆ. ಅದೇ ಶಾಸನದಲ್ಲಿ ''ವೇದಾನಂದ ಮಠ ಸತ್ರ ಸದಾಶಿವ ವಿಷ್ಣುವಾಗ್ಮಿ'' ಎಂದು ಉಲ್ಲೇಖಿಸಲ್ಪಟ್ಟಿದೆ ಮತ್ತು ಮಾದಿನೂರು ಗ್ರಾಮದ ಕ್ರಿ.ಶ. ೧೨ನೇ ಶತಮಾನದ ಒಂದು ಶಾಸನದಲ್ಲಿ ತ್ರೈಪುರುಷ ದೇವರ ಪ್ರತಿಷ್ಠೆ ಎಂದು ಬ್ರಹ್ಮ ವಿಷ್ಣು ಮಹೇಶ್ವರರನ್ನು ಸ್ತುತಿಸಿರುವ ಪಾಠಗಳಿವೆ. ಇವುಗಳಿಂದ ವ್ಯಾಪಕವಾಗಿರುವ ಕೊಪ್ಪಳದಲ್ಲಿ ಶೈವಧರ್ಮವು ಆಚರಣೆಯಲ್ಲಿದ್ದುದು ನಿರ್ವಿವಾದ. ಕೊಪ್ಪಳದಲ್ಲಿ ದೊರೆತ ಶಾತವಾಹನರ ಕಾಲದ ನಾಣ್ಯದಲ್ಲಿ ಮಹಾರತಿಸ ಶಿವಸತಕನಿಸ - ಇಲ್ಲಿ ಶಿವ ಎಂಬ

ಪದವಿರುವುದು ಶೈವ ಧರ್ಮದ ಸೂಚನೆಗಳನ್ನು ಕೊಡುತ್ತದೆ. ಇಲ್ಲಿರುವ ವಿವಿಧಾಕಾರದ ಶಿವಲಿಂಗಗಳು ಕೂಡಾ ಬಸವಪೂರ್ವದವು ಎಂಬುದನ್ನು ತಿಳಿಸುತ್ತವೆ.

ಮಳೆಮಲ್ಲಪ್ಪನ ದೇವಸ್ಥಾನದಲ್ಲಿ ಇರುವ ಶಿವಲಿಂಗವು ಕೊಪ್ಪಳದಲ್ಲಿದ್ದ ಶೈವರ ಮಹತ್ವವನ್ನು ಹೇಳುತ್ತದೆ. ಆ ದೇವಸ್ಥಾನದಲ್ಲಿ ರೇಖಾಕೃತಿಯ ಶಿವಲಿಂಗವೊಂದು ಕಂಡುಬರುತ್ತದೆ. ಆ ಶಿವಲಿಂಗವು ಕರ್ಣಗಳಿಂದ ಕೂಡಿದ ಮತ್ತು ಮೇಲೆ ಕೆಳಗೆ ಎಳೆದ ಎರಡು ಗೆರೆಗಳಿಂದ ಚಿತ್ರಿಸಲಾಗಿದೆ. ಮೇಲಿನ ಸಮಾನಾಂತರ ರೇಖೆಯ ಮಧ್ಯದಲ್ಲಿ ಲಿಂಗಾಕಾರದ ಗೆರೆ ಎಳೆಯಲಾಗಿದೆ. ಇದನ್ನು ಶಿವ ಸಂಕೇತವೆಂದು ಭಾವಿಸಲಾಗುತ್ತದೆ. ಅದರ ಮುಂದೆ ನಂದಿಯ ವಿಗ್ರಹವಿದೆ. ಮಳೆಮಲ್ಲಪ್ಪನ ದೇವಸ್ಥಾನದಲ್ಲಿ ಈ ಲಿಂಗಮುದ್ರೆಯ ಕಲ್ಲುಗಳಿದ್ದು ಅವುಗಳಲ್ಲಿ ಶಿವನನ್ನು ರೇಖೆಗಳಲ್ಲಿ ಚಿತ್ರಿಸಲಾಗಿದೆ. ಈ ವಿಗ್ರಹಕ್ಕೆ ಗುಮ್ಮಣ್ಣನ ವಿಗ್ರಹವೆಂದು ಸ್ಥಳೀಯರು ಈ ದೇವಸ್ಥಾನವನ್ನು ಗುಮ್ಮಣನ ಗವಿ ಎಂದು ಕರೆಯುತ್ತಾರೆ. ಮಳೆಮಲ್ಲಪ್ಪನ ದೇವಸ್ಥಾನವು ಗುಡ್ಡಬೆಟ್ಟಗಳ ಸಂದುಗಳಲ್ಲಿದ್ದು ಗವಿಗಳಿಗೆ ಹೊಂದಿಕೊಂಡಿದೆ. ಬರಗಾಲ ಬಂದಾಗ ವಿಶೇಷ ಪೂಜೆ ಮಾಡಿ ಮಳೆಯನ್ನು ತರಿಸಲಾಗುತ್ತಿತ್ತು ಎನ್ನುವ ಐತಿಹ್ಯವನ್ನು ಈ ದೇವಸ್ಥಾನವು ಹೊಂದಿದೆ.

ತ್ರಿಶೂಲ, ನಾಗ ಢಮರುಗಗಳು ಸ್ಥಾವರಲಿಂಗಗಳು, ಬಂಡೆಯಲ್ಲಿ ಕೆತ್ತಿದ ಲಿಂಗಗಳು, ರೇಖೆಯಲ್ಲಿಯ ಲಿಂಗಗಳ ಚಿತ್ರಗಳು ಇಲ್ಲಿಯ ಗವಿಗಳಲ್ಲಿ ದೊರೆಯುತ್ತವೆ. ಮಳೆಮಲ್ಲಪ್ಪನ ಪರ್ವತ ಶ್ರೇಣಿಗಳಲ್ಲಿ ಸ್ಥಳೀಯರು ಕರೆಯುವ ಪಾಂಡವ ವಠಾರದಲ್ಲಿ ಶಿವನು ತ್ರಿಶೂಲಧಾರಿಯಾಗಿ ನಾಗವನ್ನು ಕೊರಳಲ್ಲಿ ಹೊಂದಿದ್ದಾನೆ. ಕೈಯಲ್ಲಿ ಢಮರುಗವನ್ನು ಹಿಡಿದ ಶಿವನನ್ನು ಅಲ್ಲಿ ಕೆತ್ತಲಾಗಿದೆ.

ಮಳೆಮಲ್ಲೇಶ್ವರನಿಗೆ ರಾಜ್ಯದ ಹೆದ್ದಾರಿಯಿಂದ ಕವಲೊಡೆದ ದಾರಿಯ ಈಚೆಗೆ ಇರುವ ಒಂದು ಶಿವಾಲಯದಲ್ಲಿ ಸಪ್ತ ಲಿಂಗಗಳು ದೊರೆತಿವೆ. ಬಂಡೆಯ ಮಧ್ಯದ ಎತ್ತರದ ಭಾಗವನ್ನು

ಲಿಂಗಗಳನ್ನು ಕೆತ್ತಲು ಬಳಸಲಾಗಿದೆ. ಸಮಾನ ವ್ಯಾಸವುಳ್ಳ ಸಮಾನಗಾತ್ರದ ಸಮಾನ ಎತ್ತರದ ಮತ್ತು ಸಮಾನ ಅಂತರದಲ್ಲಿ ಸಪ್ತ ಲಿಂಗಗಳನ್ನು ಪ್ರತಿಷ್ಠಾಪಿಸಿರುವಂತೆ ಕೆತ್ತಲಾಗಿದೆ. ಇವುಗಳಿರುವ ಗುಡ್ಡಕ್ಕೆ ಏಳುಲಿಂಗಪ್ಪನ ಬೆಟ್ಟವೆಂದು ಸ್ಥಳೀಯರು ಕರೆಯುತ್ತಾರೆ.

ಪ್ರಾರಂಭದ ಮಳೆಮಲ್ಲಪ್ಪನ ಗುಡ್ಡದ ಗವಿಯ ಮುಂಭಾಗದ ಸಮಮಟ್ಟದ ಬಂಡೆಯಮೇಲೆ ಒಂದು ಉಬ್ಬು ಶಿವಲಿಂಗದ ಚಿತ್ರವನ್ನು ಕೆತ್ತಿರುವರು. ಇದನ್ನು ವಿಶ್ವನಾಥ ಲಿಂಗ ಎಂದು ಪೂಜಿಸುತ್ತಾರೆ ಅಲ್ಲದೆ ಶ್ರಾವಣಮಾಸದಲ್ಲಿ ಈ ವಿಶ್ವನಾಥನ ಪೂಜೆಯನ್ನು ಕೊಪ್ಪಳ ಪ್ರದೇಶದ ಜನರು ವಿಶೇಷ ಆಕರ್ಷಣೆಯಿಂದ ಮಾಡುತ್ತಾರೆ.

ಕೊಪ್ಪಳದ ಪಶ್ಚಿಮಕ್ಕಿರುವ ಪರ್ವತ ಸಾಕಷ್ಟು ಎತ್ತರವೂ ವಿಶಾಲವೂ ಆಗಿದ್ದು ಭೂಮಟ್ಟದಿಂದ ಸುಮಾರು ೨೭೦ ಮೀಟರ್ ಎತ್ತರದಲ್ಲಿದೆ. ಈ ಬೆಟ್ಟವನ್ನು ಸ್ಥಳೀಯರು ಮಳೆಮಲ್ಲಪ್ಪನಗುಡ್ಡವೆಂದು ಸ್ಥಳೀಯರು ಕರೆಯುತ್ತಾರೆ. ಆ ಗುಡ್ಡದ ಮೇಲಿರುವ ದೇವಸ್ಥಾನವನ್ನು ಮಳೆಮಲ್ಲಪ್ಪನ ದೇವಸ್ಥಾನವೆಂದು ಕರೆಯಲಾಗುತ್ತಿದೆ. ದೇವಾಲಯವು ಪಶ್ಚಿಮಾಭಿಮುಖವಾಗಿದೆ. ವಿಶಾಲ ಪ್ರಾಕಾರದಲ್ಲಿರುವ ಈ ದೇಗುಲ ಗರ್ಭಗೃಹವನ್ನು ಮಾತ್ರಹೊಂದಿದ್ದು ಅದು ಇತ್ತೀಚೆಗೆ ಪುನರ್‌ನಿರ್ಮಿತವಾಗಿದೆ. ಈ ಹಿಂದೆ ದೇವಾಲಯವಿದ್ದಿರಬೇಕು. ಗರ್ಭಗೃಹದಲ್ಲಿ ಶಿವಲಿಂಗದಲ್ಲಿದೆ. ಇದು ನೆಲಮಟ್ಟದಲ್ಲಿದ್ದು ಸರ್ವಕಾಲದಲ್ಲಿಯೂ ನೀರಿನಿಂದಾವೃತವಾಗಿರುತ್ತದೆ.

ಶಂಭುಲಿಂಗದೇವಾಲಯವು ಪೂರ್ವಾಭಿಮುಖವಾಗಿದ್ದು ಇದು ೧೨-೧೩ನೇ ಶತಮಾನದ ಕಾಲದಿಂದೀಚೆಗೆ ಹುಟ್ಟಿಕೊಂಡಿದೆ ಎಂದುಭಾವಿಸಬಹುದು. ಏಕೆಂದರೆ ಕಲ್ಯಾಣಿ ಚಾಲುಕ್ಯರ ಶೈಲಿಯಲ್ಲಿ ಇದನ್ನು ಕಟ್ಟಲಾಗಿದೆ. ಎರಡೂವರೆ ಅಡಿ ಎತ್ತರದ ಜಗತಿಯ ಮೇಲೆ ನಿರ್ಮಾಣವಾದ ಈ ದೇವಾಲಯ ಗರ್ಭಗೃಹ, ಅಂತರಾಳ ಮತ್ತು ಸಭಾಮಂಟಪಗಳನ್ನು ಒಳಗೊಂಡಿದೆ. ಗರ್ಭಗೃಹದಲ್ಲಿ ಎರಡು ಅಡಿ ಎತ್ತರದ ಶಿವಲಿಂಗವಿದೆ. ಇದನ್ನು ಕಪ್ಪುಶಿಲೆಯಿಂದ ಕೆತ್ತಲಾಗಿದೆ. ಮೇಲ್ಭಾಗದಲ್ಲಿ ವೃತ್ತಾಕಾರ ಹಾಗೂ

ಗಂಟೆಯಾಕಾರವನ್ನು ಕೆತ್ತಲಾಗಿದೆ. ಸಭಾಮಂಟಪದಲ್ಲಿ ಚಿಕ್ಕದಾದ ನಂದಿಯ ಶಿಲ್ಪವಿದೆ. ಅದೇನೇ ಇದ್ದರೂ ಗವಿಮಠದ ಹಿನ್ನೆಲೆಯಲ್ಲಿ ಕೊಪ್ಪಳದಲ್ಲಿ ಶೈವಧರ್ಮವು ಆವಲಂಬನೆಗೊಂಬನೆಗೊಂಡಿತ್ತು ಎಂಬುದನ್ನು ಅರಿಯಬಹುದು. ಅದು ರುದ್ರಮುನಿ ಶಿವಯೋಗಿಗಳ ಸಂಕಲ್ಪಗಳಿಂದ ವೀರಶೈವ ಧರ್ಮದ ಕೇಂದ್ರವಾಗಿ ಪರಿವರ್ತನೆಯಾಯಿತು. ಶ್ರೀ ರುದ್ರಮುನಿ ಶಿವಯೋಗಿಗಳು ಕೊಪ್ಪಳದಲ್ಲಿ ವೀರಶೈವ ಧರ್ಮಕ್ಕೆ ನೀಡಿದ ಚೇತನ ಅದ್ವಿತೀಯವಾದುದು. ರುದ್ರಮುನಿ ಶಿವಯೋಗಿಗಳ ಪೂರ್ವದಲ್ಲಿದ್ದ ಪೂಜ್ಯ ಗವಿಸಿದ್ದೇಶ್ವರ ಶರಣರು ರುದ್ರಮುನಿ ಶಿವಯೋಗಿಗಳ ಕಾಲದಲ್ಲಿ ಹೆಚ್ಚು ಪ್ರಸಿದ್ಧಿಗೆ ಬಂದರು. ರುದ್ರಮುನಿ ಶಿವಯೋಗಿಗಳು ಮತ್ತು ಗವಿಸಿದ್ದೇಶ್ವರರು ಕಾಶೀ ಜ್ಞಾನಸಿಂಹಾಸನ ಪೀಠದ ಶಾಖಾಮಠದವರೆಂದು ತಮ್ಮನ್ನು ಗುರುತಿಸಿಕೊಳ್ಳುತ್ತಾರೆ. ಹೀಗಾಗಿ ಈ ಮಠಕ್ಕೆ ಒಂದು ವಿಶಿಷ್ಟ ಪರಂಪರೆಯಿದೆ. ಏಕೆಂದರೆ ಈಗ ಮಠವು ವಿರಕ್ತಮಠವೆಂದು ಗುರುತಿಸಿಕೊಂಡಿದೆ. ಪೂರ್ವದಲ್ಲಿ ಇದು ಕಾಶಿ ಜ್ಞಾನಪೀಠದ ಶಾಖಾಮಠವೆಂದು ಪಂಚಪೀಠಾಧೀಶ್ವರರ ತಾಣವಾಗಿತ್ತೆಂದು ಗುರುತಿಸುತ್ತಾರೆ. ಇವರುಗಳು ಕೊಪ್ಪಳದಲ್ಲಿ ವೀರಶೈವ ಮತಕ್ಕೆ ಭದ್ರವಾಗಿ ಬುನಾದಿ ಹಾಕಿರಬೇಕು. ಈಗ ಅದು ಸಾವಿರ ವರ್ಷಗಳ ಇತಿಹಾಸವುಳ್ಳ ಜೈನಧರ್ಮವನ್ನು ಮೂಲೆಗೆ ತಳ್ಳಿ ವೀರಶೈವ ಧರ್ಮವು ನೆಲೆನಿಲ್ಲಲು ಕಾರಣವಾಗಿರಬೇಕು. ಶ್ರೀ ಗವಿಸಿದ್ಧೇಶ್ವರರು ಕೊಪ್ಪಳದ ಮಾಲಿಗೌಡ ಬಸವನಗೌಡರ ಮನೆಯಲ್ಲಿದ್ದು ಸಾಧನೆಗೈದವರು. ಹೈದರಾಬಾದ್ ದೊರೆ ಮತ್ತು ಮೀರಾಲಾಂ ದೊರೆಗೆ ಅಂಟಿದ ರೋಗವು ವಾಸಿಯಾಗಲು ಪ್ರಸಾದವನ್ನು ನೀಡಿ ಅದನ್ನು ಗುಣಪಡಿಸಿದರೆಂಬ ಪ್ರತೀತಿಯಿದೆ. ಇದರಿಂದ ಪ್ರಭಾವಿತನಾದ ಹೈದರಾಬಾದ್ ನಿಜಾಮನು ಈ ಗವಿಮಠದ ದಾಸೋಹಕ್ಕೆ ಜಹಗೀರು ಹಾಕಿಕೊಟ್ಟನು. ಅಂದಿನಿಂದ ಅಲ್ಲಿ ವೀರಶೈವ ಧರ್ಮವು ರಾಜಾಶ್ರಯವನ್ನು ಪಡೆದುಕೊಂಡಿತು. ನಿಜಾಮರಾದಿಯಾಗಿ ಎಲ್ಲ ಜಾತಿ ಜನಾಂಗದವರು ಗವಿಮಠದ ಪ್ರೇರಣೆ, ಪ್ರಭಾವಕ್ಕೆ ಒಳಗಾಗಿದ್ದಾರೆ. ಈ ಹಿನ್ನೆಲೆಯಲ್ಲಿ ಕೊಪ್ಪಳವು ಇಂದು ವೀರಶೈವಧರ್ಮ ಕೇಂದ್ರಗಳಲ್ಲೊಂದಾಗಿ ಪರಿಣಮಿಸಿದೆ.

## ೬. ೪. ವೈದಿಕ ಧರ್ಮ

ಕರ್ನಾಟಕದಲ್ಲಿ ವೈದಿಕ ಧರ್ಮವು ಪ್ರಾರಂಭದಿಂದಲೂ ಚರಿತ್ರೆಯ ಮೇಲೆ ತನ್ನ ಹಿಡಿತವನ್ನು ಸಾಧಿಸಿಕೊಂಡು ಬಂದಿದೆ. ದೇವಾಲಯ ಸಂಸ್ಕೃತಿ ವಾಸ್ತವವಾಗಿ ಅವರಿಂದಲೇ ಬೆಳೆದಿರುವುದು ವಾಸ್ತವದ ಸಂಗತಿ. ಕರ್ನಾಟಕದಲ್ಲಿ ವೈದಿಕ ಧರ್ಮವು ಎಂದು ಆಗಮನವಾಯಿತು ಎಂಬುದಕ್ಕೆ ನಿಖರವಾದ ಆಧಾರಗಳಿಲ್ಲದಿದ್ದರೂ ಚರಿತ್ರೆಯುದ್ದಕ್ಕೂ ಅದರ ಉಲ್ಲೇಖಗಳು ಸಿಗುತ್ತವೆ. ಕರ್ನಾಟಕದ ಒಂದು ಪ್ರಬಲ ವರ್ಗಬ್ರಾಹ್ಮಣ ಧರ್ಮವನ್ನು ಅನುಸರಿಸಿತ್ತು ಎಂಬುದನ್ನು ತಿಳಿಯಬಹುದು. ಏಕೆಂದರೆ ಪೂರ್ವದಲ್ಲಿ ಅಗ್ರಹಾರಗಳಲ್ಲಿ ವೈದಿಕ ಪಂಡಿತರದ್ದೇ ಮೇಲುಗೈ. ವೇದಪಾಠಗಳನ್ನು ತಲೆಮಾರಿನಿಂದ ತಲೆಮಾರಿಗೆ ಪ್ರಸಾರ ಮಾಡುತ್ತಿದ್ದರೆಂದು ಹಲವು ಉಲ್ಲೇಖಗಳು ತಿಳಿಸುತ್ತವೆ. ಕದಂಬರ ಮಯೂರವರ್ಮನು ಕರ್ನಾಟಕದಲ್ಲಿ ಮೊದಲು ವೈದಿಕ ಸಾಮ್ರಾಜ್ಯವನ್ನು ನಿರ್ಮಾಣ ಮಾಡಿರುವನು. ಅನಂತರ ಹಿಂದೂ ಧರ್ಮವನ್ನು ಎತ್ತಿ ಹಿಡಿಯಲೆಂದೇ ವಿಜಯನಗರ ಸಾಮ್ರಾಜ್ಯವು ತಲೆಯೆತ್ತಿತ್ತು. ಹೊಯ್ಸಳರ ಆಡಳಿತದ ಕಾಲದಲ್ಲಿ ಶ್ರೀ ಶಂಕರಾಚಾರ್ಯರ ಪ್ರಭಾವವು ವೈದಿಕ ಧರ್ಮವು ಕರ್ನಾಟಕದಲ್ಲಿ ನೆಲೆಗೊಳ್ಳಲು ಕಾರಣವಾಯಿತು. ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಮುಂತಾದ ತತ್ವಪ್ರಣಾಳಿಗ7'ಳ ಹಿನ್ನೆಲೆಯಲ್ಲಿ ವೈದಿಕ ಧರ್ಮವು ಪ್ರಬಲವಾಗಿ ನೆಲೆಯೂರಲು ಕಾರಣವಾಯಿತು. ದಾಸ ಚಳುವಳಿಯು ವೈದಿಕ ಧರ್ಮವನ್ನು ಮತ್ತಷ್ಟು ಗಟ್ಟಿಗೊಳಿಸಿತು. ಅದೇನೇ ಇದ್ದರೂ ವೈದಿಕ ಧರ್ಮ ಕರ್ನಾಟಕದಲ್ಲಿ ಅಷ್ಟೊಂದು ವರ್ಗಸಂಘರ್ಷಕ್ಕಿಳಿದಿಲ್ಲ. ಇದಕ್ಕೆ ಕಾರಣ ಕರ್ನಾಟಕದಲ್ಲಿ ಆದ ವಚನಚಳುವಳಿ ಎಂದು ನೇರವಾಗಿ ಹೇಳಬಹುದು. ವಿಜಯನಗರ ಸಾಮ್ರಾಜ್ಯದ ಅರಸರು ವೈದಿಕ ಧರ್ಮಕ್ಕೆ ಹೆಚ್ಚು ಮನ್ನಣೆಯನ್ನು ಕೊಟ್ಟು ಪೋಷಿಸಿದರು. ಅವರ ಕಾಲದಲ್ಲಿ ಅನೇಕ ವೈದಿಕ ದೇವಾಲಯಗಳು ನಿರ್ಮಾಣವಾದವು. ರಾಜಧಾನಿ ಹಂಪೆಯು ಕೊಪ್ಪಳದ ಪ್ರದೇಶಕ್ಕೆ ಸಮೀಪವಿದ್ದು ಅನೇಕ ವೈದಿಕ ದೇವಾಲಯಗಳನ್ನು ಹೊಂದಿದೆ. ಹಜಾರಾ ರಾಮಸ್ವಾಮಿ, ಮಾಲ್ಯವಂತ ರಘುನಾಥ, ಶ್ರೀಕೃಷ್ಣ ದೇವಾಲಯ, ರಾಮಲಕ್ಷ್ಮಣ ದೇವಸ್ಥಾನ, ವಿಜಯ ವಿಠ್ಠಲ ದೇವಸ್ಥಾನ, ವಿದ್ಯಾಶಂಕರ ದೇವಾಲಯ, ಗಾಣಗಿತ್ತಿ ದೇವಾಲಯ, ಪುರಂದರಮಂಟಪ ಮುಂತಾದವುಗಳು ವೈದಿಕ

ಮತಕ್ಕೆ ವಿಜಯನಗರದ ಅರಸರು ಕೊಟ್ಟ ಕೊಡುಗೆಯಾಗಿದೆ. ಕೊಪ್ಪಳ ಪ್ರದೇಶಕ್ಕೆ ಹತ್ತಿರವಿರುವ ಆನೆಗೊಂದಿಯಲ್ಲಿಯೂ ಕೂಡಾ ಹಲವು ವೈದಿಕ ದೇವಾಲಯಗಳನ್ನು ಕಾಣಬಹುದು.

ಪ್ರಕೃತ ಕೊಪ್ಪಳದಲ್ಲಿ ಹಲವು ವೈದಿಕ ಧರ್ಮವೈದಿಕ ದೇವಾಲಯಗಳಿವೆ. ಅವುಗಳಲ್ಲಿ ರಾಮಮಂದಿರ, ಮಾಧವಮೂರ್ತಿ ದೇವಾಲಯ, ಕಾಳಿಂಗಮರ್ಧನ ದೇವಾಲಯ, ವೆಂಕಟೇಶ್ವರ ದೇವಾಲಯ, ರಾಘವೇಂದ್ರ ದೇವಾಲಯಗಳು ಇಂದಿಗೂ ಜೀವಂತವಾಗಿವೆ. ಕೊಪ್ಪಳದ ಹೆಚ್ಚು ಜನ ಈ ದೇವಾಲಯಗಳಿಗೆ ನಡೆದುಕೊಳ್ಳುವುದುಂಟು. ರಾಮಮಂದಿರ ದೇವಾಲಯವು ಅತ್ಯಂತ ಸುಂದರವಾದ ಕಟ್ಟಡ. ಶ್ರೀರಾಮಚಂದ್ರ ದೇವಾಲಯದ ಗರ್ಭಗುಡಿಯಲ್ಲಿ ಸುಂದರವಾದ ಶ್ರೀರಾಮ ಮತ್ತು ಸೀತೆಯರ ವಿಗ್ರಹಗಳಿವೆ. ಶ್ರೀರಾಮನು ಸೀತೆಯನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿ ಕೊಂಡಿರುವನು. ಶ್ರೀರಾಮನವಮಿಯ ಸಂದರ್ಭದಲ್ಲಿ ಈ ದೇವಸ್ಥಾನಕ್ಕೆ ಹೆಚ್ಚು ಮೆರಗುಂಟಾಗುತ್ತದೆ. ಸುತ್ತಮುತ್ತಲಿನ ಪ್ರದೇಶದ ಜನರು ಈ ದೇವಸ್ಥಾನಕ್ಕೆ ಬಂದುಹೋಗುತ್ತಾರೆ. ಇದೇ ದೇವಾಲಯದಲ್ಲಿ ಗರ್ಭಗುಡಿಯ ಬಲಭಾಗದಲ್ಲಿ ದತ್ತನ ಪಾದಗಳಿವೆ. ದತ್ತನ ಪಾದಗಳು ಸೂಫಿ ಪಂಥದ ಬೆಳವಣಿಗೆಯನ್ನು ಸೂಚಿಸುತ್ತವೆ. ಹೆದ್ರಾಬಾದ್ ಕರ್ನಾಟಕದ ಪ್ರದೇಶದಲ್ಲಿ ಇಂತಹ ಸೂಫಿ ಪಂಥಕ್ಕೆ ವಿಶೇಷ ಚರಿತ್ರೆಯಿದೆ. ಎಡಭಾಗದಲ್ಲಿ ಶಿವಲಿಂಗವಿದೆ. ಈ ಹಿನ್ನೆಲೆಯಲ್ಲಿ ಈ ದೇವಾಲಯವು ಸರ್ವಧರ್ಮಗಳ ಸಂಗಮವಾಗಿದೆ.

ಡಣಕನ ಬಾವಿಯ ಮೆಟ್ಟಿಲುಗಳ ಮೇಲೆ ಗೋಡೆಗೆ ಹೊಂದಿಸಿ ಕಟ್ಟಲ್ಪಟ್ಟ ಚಿಕ್ಕ ದೇಗುಲವಿದೆ. ಇಲ್ಲಿ ಮಾಧವಮೂರ್ತಿ ಪ್ರತಿಷ್ಠಾಪನೆಗೊಂಡಿದ್ದಾನೆ. ಮಾಧವಮೂರ್ತಿಯ ಶಿಲ್ಪವು ತುಂಬ ಆಕರ್ಷಕವಾಗಿದೆ. ಮೂರ್ತಿಯು ಚತುರ್ಭುಜವನ್ನು ಹೊಂದಿದ್ದು ಕೆಳಗಿನ ಬಲಗೈಯಲ್ಲಿ ಗದೆಯನ್ನು ಮೇಲಿನ ಬಲಗೈಯಲ್ಲಿ ಚಕ್ರವನ್ನು ಮತ್ತು ಮೇಲಿನ ಎಡಗೈಯಲ್ಲಿ ಶಂಖವನ್ನು ಹಿಡಿದಿದ್ದಾನೆ. ಈ ಮೂರ್ತಿಯ ಬಲಬದಿಯಲ್ಲಿ ಕೈಜೋಡಿಸಿಕೊಂಡು ನಿಂತಿರುವ ಗರುಡನ ಚಿತ್ರವಿದೆ.

ಎಡಬದಿಯಲ್ಲಿ ಲಕ್ಷ್ಮಿಯ ಚಿತ್ರವಿದೆ. ಅದೇ ಡಣಕನ ಬಾವಿಯ ಪಶ್ಚಿಮಕ್ಕೆ ಕಾಡುಗಲ್ಲುಗಳಿಂದ ಕಟ್ಟಿದ ಚಿಕ್ಕ ದೇವಾಲಯವಿದೆ. ಅದು ಕಾಳಿಂಗ ಮರ್ದನನ ದೇವಾಲಯ. ಕಾಳಿಂಗಮರ್ದನ ಮೂರ್ತಿಯು ತನ್ನ ಎಡಗೈಯಲ್ಲಿ ಕಾಳಿಂಗಸರ್ಪದ ಬಾಲವನ್ನು ಎತ್ತಿ ಹಿಡಿದು ಹೆಡೆಯಮೇಲೆ ತನ್ನ ಕಾಲನ್ನಿಟ್ಟು ತುಳಿಯುತ್ತಿರುವ ಚಿತ್ರವಿದೆ. ಕೊಪ್ಪಳದಲ್ಲಿ ಸಿಗುವ ಮತ್ತೊಂದು ವೈದಿಕ ದೇವಾಲಯವೆಂದರೆ ವೆಂಕಟೇಶ್ವರ ದೇವಾಲಯ. ಇದು ಗರ್ಭಗುಡಿಯನ್ನು ಹೊಂದಿದ್ದು ಅದರಲ್ಲಿ ವೆಂಕಟೇಶ್ವರನ ಸುಂದರ ಮೂರ್ತಿಯಿದೆ. ಈ ಗರ್ಭಗುಡಿಯ ಸುತ್ತಲಿರುವ ವಿಸ್ತಾರವಾದ ಪ್ರದಕ್ಷಿಣಾ ಪಥದ ನಂತರ ಬರುವ ಪ್ರಾಕಾರಕ್ಕೆ ಕಲಾಪೂರಿತ ಮಹಾದ್ವಾರವಿದೆ. ಇಲ್ಲಿ ಧಾರ್ಮಿಕ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳು ಇಂದಿಗೂ ನಡೆಯುತ್ತಿವೆ. ಯಂಕಡೆ ಬಾವಿಯ ದಕ್ಷಿಣ ದಡದ ಕಲ್ಲಿನಲ್ಲಿ ಶಂಖ, ನಾಮ, ಚಕ್ರ ಕೆತ್ತಿರುವುದರಿಂದ ಇದನ್ನು ವೆಂಕಟೇಶ್ವರನ ಬಾವಿಯೆಂದು ಸ್ಥಳೀಯರು ಹೇಳುತ್ತಾರೆ. ಕೊಪ್ಪಳದ ಗಾಂಧಿನಗರದಲ್ಲಿರುವ ಶ್ರೀ ರಾಘವೇಂದ್ರಸ್ವಾಮಿಗಳ ಮಠ ಮತ್ತೊಂದು ವೈದಿಕ ದೇವಾಲಯ. ಇದು ಗರ್ಭಗುಡಿಯನ್ನು ಹೊಂದಿದ್ದು ಶ್ರೀರಾಘವೇಂದ್ರ ಸ್ವಾಮಿಗಳ ವಿಗ್ರಹ ಪ್ರತಿಷ್ಠಾಪನೆ ಮಾಡಲಾಗಿದೆ. ಗರ್ಭಗುಡಿಗಳ ಸುತ್ತಲೂ ಪ್ರದಕ್ಷಿಣಾ ಪಥವಿದೆ. ಇದು ಇತ್ತೀಚೆಗೆ ಕಟ್ಟಿದ ದೇವಾಲಯವಾಗಿರುವುದರಿಂದ ವಾಸ್ತು ವಿಷಯಗಳಿಗಿಂತ ಅಗತ್ಯಕ್ಕೆ ತಕ್ಕಂತೆ ಕಟ್ಟಲ್ಪಟ್ಟಿದೆ.

ಕರ್ನಾಟಕದಲ್ಲಿ ವೈದಿಕ ಧರ್ಮವು ಚರಿತ್ರೆಯಲ್ಲಿ ಹಲವು ಏರಿಳಿತಗಳನ್ನು ಕಂಡಿದೆ. ಹಲವು ಬಾರಿ ರಾಜಾಶ್ರಯವನ್ನು ಹೊಂದಿದೆ. ಮತ್ತೆ ಕೆಲವು ಬಾರಿ ರಾಜಮನ್ನಣೆಯನ್ನು ಕಳೆದುಕೊಂಡಿದೆ. ಆದರೂ ಆ ಧರ್ಮವನ್ನು ಕರ್ನಾಟಕದಲ್ಲಿ ಏಕಘನಾಕೃತಿಯನ್ನಾಗಿ ಕಾಣಬಹುದು. ಧರ್ಮಶಾಸ್ತ್ರಗಳ ಹಿನ್ನೆಲೆಯಲ್ಲಿ ಧರ್ಮವು ಮತ್ತೆ ಮತ್ತೆ ಪುನಾರಚಿಸಲ್ಪಟ್ಟಿದೆ. ಮೂಲ ಮನುಧರ್ಮ ಶಾಸ್ತ್ರವನ್ನು ಮತ್ತೊಮ್ಮೆ ಪರಿಶೋಧಿಸಿ ಶ್ರೀ ಶಂಕರಾಚಾರ್ಯರು ತಮ್ಮ ಪ್ರಸ್ಥಾನತ್ರಯಗಳಲ್ಲಿ ಮರು ನಿರೂಪಣೆಗೊಳಪಡಿಸಿದರು. ಹಾಗೆಯೇ ವಿಜಯನಗರದ ಕಾಲದಲ್ಲಿ ಸಾಯಣ ಮತ್ತು ವಿದ್ಯಾರಣ್ಯರು ಧರ್ಮಶಾಸ್ತ್ರಗಳಿಗೆ ಮತ್ತೊಮ್ಮೆ ಭಾಷ್ಯಗಳನ್ನು ಬರೆದಿದ್ದಾರೆ. ಕರ್ನಾಟಕದ ದಾಸಕೂಟವು ಈ ಧರ್ಮವನ್ನು ಸರಳೀಕರಿಸಿ ನಿರೂಪಿಸಿದೆ. ಇಂತಹ ಸಂದರ್ಭದಲ್ಲಿ ವೈದಿಕ ಧರ್ಮದಲ್ಲಿ ಕಂಡುಬರುವ

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂಬ ನಾಲ್ಕು ವರ್ಣಗಳಲ್ಲಿನ ಅಂತರವು ವಿರಳವಾಗಿ ವ್ಯಕ್ತವಾಗುತ್ತದೆ. ಕರ್ನಾಟಕದ ಕರಾವಳಿಯುದ್ದಕ್ಕೂ ವೈದಿಕ ಧರ್ಮ ಚರಿತ್ರೆಯಾದ್ಯಂತ ತನ್ನ ಮಹತ್ವದ ಪಾತ್ರವನ್ನು ನಿರ್ವಹಿಸಿಕೊಂಡು ಬಂದಿದೆ. ಕ್ರೈಸ್ತ ಮಿಶನರಿಗಳು ಭಾರತಕ್ಕೆ ಬರುವವರೆಗೂ ಅಲ್ಲಿ ಏಕಮೇವ ಧರ್ಮವು ಆಚರಣೆಯಲ್ಲಿತ್ತು. ಇದೊಂದು ಕರ್ನಾಟಕದ ವಿಶೇಷವೇ ಸರಿ. ವೈದಿಕ ಪಂಡಿತರು ಕರ್ನಾಟಕದ ಎಲ್ಲ ಭಾಗಗಳಲ್ಲಿ ನೆಲೆಗೊಂಡಿದ್ದಾರೆ. ವೇದಾಗಮ ಶಾಸ್ತ್ರಗಳನ್ನು ಓದಿಕೊಂಡ ಇವರು ವೈದಿಕ ಸಾಹಿತ್ಯವನ್ನು ಪೀಳಿಗೆಯಿಂದ ಪೀಳಿಗೆಗೆ ಸಾಗಿಸುವ ಮಾಧ್ಯಮಗಳಂತಿದ್ದಾರೆ. ಈ ಕಾರಣದಿಂದ ಕರ್ನಾಟಕದ ಒಂದು ಪ್ರಬಲ ವರ್ಗವು ಪ್ರಬಲ ವರ್ಗವಾಗಿಯೇ ಉಳಿದಿದೆ.

### ೬. ೫. ಇಸ್ಲಾಂ ಧರ್ಮ

ಇಸ್ಲಾಂ ಧರ್ಮವು ಕೊಪ್ಪಳವನ್ನು ಎಂದು ಪ್ರವೇಶಿಸಿತು ಎಂಬುದಕ್ಕೆ ಸ್ಪಷ್ಟ ಆಧಾರಗಳಿಲ್ಲ. ಮಲ್ಲಿಕಾಪುರನ ದಂಡಯಾತ್ರೆಯ ಸಂದರ್ಭದಲ್ಲಿ ದೇವಗಿರಿಯ ಸೇವುಣರು ಮತ್ತು ಹೊಯ್ಸಳರ ವೀರಬಲ್ಲಾಳರು ದೆಹಲಿಯ ಸುಲ್ತಾನರಿಗೆ ಶರಣಾಗತಿಯಾಗುವುದರ ಮೂಲಕ ಇಸ್ಲಾಂ ಧರ್ಮ ಕರ್ನಾಟಕವನ್ನು ಪ್ರವೇಶಿಸಿದೆ. ಆದರೆ ಅಂದಿನಿಂದ ಕರ್ನಾಟಕದ ಬೇರೆ ಬೇರೆ ಪ್ರದೇಶವು ಒಂದಲ್ಲಾ ಒಂದು ರೀತಿಯಿಂದ ಇಸ್ಲಾಂ ಆಳ್ವಿಕೆಗೆ ಒಳಪಟ್ಟಿವೆ. ವಿಜಯನಗರದ ಸಾಮ್ರಾಜ್ಯದ ಅರಸರ ಕಾಲದಲ್ಲಿ ಇಸ್ಲಾಂ ಧರ್ಮ ಕರ್ನಾಟಕ ಅಥವಾ ಕೊಪ್ಪಳ ಪ್ರದೇಶಕ್ಕೆ ವಿರೋಧಿ ಶಕ್ತಿಯಾಗಿ ಬೆಳೆಯಿತು. ಬಹಮನಿ ಸುಲ್ತಾನರು ಮತ್ತು ವಿಜಯನಗರದ ಸಾಮ್ರಾಜ್ಯದ ಅರಸರ ನಡುವೆ ದೋ- ಆಬ್ ಪ್ರದೇಶಕ್ಕಾಗಿ ನಡೆಯುತ್ತಿದ ಯುದ್ಧಗಳ ಬಿಸಿಯು ಕೊಪ್ಪಳ ಪ್ರದೇಶಕ್ಕೆ ತಟ್ಟುತ್ತಿತ್ತು. ಬಿಜಾಪುರ ಸುಲ್ತಾನರು ತಾಳಿಕೋಟೆ ಕದನದಲ್ಲಿ ಗೆದ್ದ ನಂತರ ಕೊಪ್ಪಳವು ನೇರವಾಗಿ ಅವರಿಂದ ಆಳಿಸಿಕೊಳ್ಳಲ್ಪಟ್ಟಿತು. ರಾಜಕೀಯ ಇಚ್ಛಾಶಕ್ತಿಯ ಜೊತೆಗೆ ಮುಸಲ್ಮಾನ ಅರಸರಿಗೆ ಧರ್ಮದ ಬಗೆಗಿನ ಅಪಾರ ಕಾಳಜಿಯು ಬೆಳೆಯಿತು. ಈ ಕಾರಣದಿಂದ ಕೊಪ್ಪಳ ಪ್ರದೇಶದಲ್ಲಿ ಹಲವು ಬಾರಿ ಜಿಹಾದ್‌ಗಳನ್ನು ಅಂದರೆ ಧರ್ಮದ

ಉದ್ದೇಶಕ್ಕಾಗಿ ಆಕ್ರಮಣವನ್ನು ಕಾಣಬಹುದು. ಕೊಪ್ಪಳವು ಬಿಜಾಪುರ ಸುಲ್ತಾನರ ಕೈಸೇರುತ್ತಲೆ ಜೈನ ಮತ್ತು ಹಿಂದೂ ಧರ್ಮದ ನೆಲೆಯಾಗಿದ್ದ ಆ ಪ್ರದೇಶವು ಒಮ್ಮಿಂದೊಮ್ಮಿಗೆ ಇಸ್ಲಾಂ ಧರ್ಮವನ್ನು ಸ್ವೀಕರಿಸಬೇಕಾಯಿತು. ಇಸ್ಲಾಂ ಧರ್ಮದ ಶಕ್ತಿ ರಾಜಕಾರಣವು ಕೊಪ್ಪಳ ಪ್ರದೇಶದ ಜನರ ಮೇಲೆ ಗದಾ ಪ್ರಹಾರವನ್ನು ಮಾಡಿತು. ಅದು ಸಾಮ್ರಾಜ್ಯರಕ್ಷಣಗೆ ಕೋಟೆಯನ್ನು ಕಟ್ಟುವುದರ ಮೂಲಕ ವ್ಯಕ್ತವಾಯಿತು. ಬಿಜಾಪುರ ಸುಲ್ತಾನರ ಸಾಮ್ರಾಜ್ಯಶಾಹಿ ಧೋರಣೆಗಳು ಕೊಪ್ಪಳ ಪ್ರದೇಶದಲ್ಲಿ ನಿಜವಾಗಲೂ ಗರಿಗೆದರಿದವು. ಕೋಟೆಯನ್ನು ಕಟ್ಟಿ ಕೋಟೆಯ ಸುತ್ತೆಲ್ಲ ಇಸ್ಲಾಂ ಶಾಸನಗಳನ್ನು ನೆಡಿಸಿದರು. ಕೊಪ್ಪಳದ ಜನತೆ ಅನ್ಯಭಾಷಿಕರ ಅನ್ಯ ಧರ್ಮೀಯರ ಮತ್ತು ಅನ್ಯ ಸಂಸ್ಕೃತಿಯ ಹಿನ್ನೆಲೆಯಲ್ಲಿ ಆಳಿಸಿಕೊಳ್ಳಲ್ಪಟ್ಟಿತ್ತು. ಇದರಿಂದಾಗಿ ಅಗ್ರಹಾರಗಳು ಮಸೀದಿಗಳಾದವು. ಕೋಟೆಯ ಮೇಲಿರುವ ದೇವಾಲಯಗಳು ಇಸ್ಲಾಂ ಧರ್ಮದ ಸ್ವರೂಪವನ್ನು ತಾಳಿದವು. ಇಂಡೋ ಸೆರ್ಸೆನಿಕ್ ಆರ್ಟ್ ಬೆಳೆಯತೊಡಗಿತು. ಜೊತೆಜೊತೆಗೆ ಹಿಂದೂ ಮತ್ತು ಇಸ್ಲಾಂ ಸಂಸ್ಕೃತಿಯನ್ನು ಸಮನ್ವಯ ಮಾಡಿಕೊಂಡು ಒಂದು ಆಧ್ಯಾತ್ಮ ಪಂಥ ಹುಟ್ಟಿಕೊಳ್ಳಲು ಕಾರಣವಾಯಿತು. ಆ ಪಂಥವು ಸೂಫಿ ಪಂಥವೆಂದು ಗುರುತಿಸಬಹುದು. ಕೊಪ್ಪಳದಲ್ಲಿ ಇಸ್ಲಾಂ ಅರಸರು ಹಿಂದುಗಳ ಮೇಲೆ ಜಿಜಿಯಾ (ಧಾರ್ಮಿಕ ತೆರಿಗೆ) ಹಾಕುತ್ತಿದ್ದರೆನ್ನುವುದಕ್ಕೆ ಆಧಾರಗಳು ಸಿಕ್ಕಿಲ್ಲ. ವಿಗ್ರಹಭಂಜನೆ ಮತ್ತು ಕೊಳ್ಳೆಗಳಂಥಹ ಘಟನೆಗಳು ದಾಖಲಾಗಿಲ್ಲ. ಇದರಿಂದಾಗಿ ಇಸ್ಲಾಂ ಆಳಿಕೆಯಲ್ಲಿ ಕೊಪ್ಪಳವು ಶಾಂತಿಯ ತಾಣವಾಗಿತ್ತು ಎಂದು ಸುಲಭವಾಗಿ ಹೇಳಬಹುದು. ಇಸ್ಲಾಂ ಅರಸರು ಯಾವುದೇ ಬೇಧಭಾವಗಳಿಲ್ಲದೆ ಕೋಟೆಯ ಮೇಲೆ ಮತ್ತು ಕೆಳಗೆ ವಾಸವಾಗಿದ್ದ ಜನರ ಹಿತಾಸಕ್ತಿಗಳನ್ನು ಕಾಪಾಡಲು ಹಲವು ಲೋಕೋಪಯೋಗಿ ಇಲಾಖೆಗಳನ್ನು ಮಾಡಿರುವ ಬಗ್ಗೆ ಶಾಸನಗಳ ಉಲ್ಲೇಖವಿದೆ. ಮೋತಿಕೆರೆ (ಸಿಹಿನೀರಿನ ಕೆರೆ) ಮಣ್ಣಿನ ಕೋಟೆ ಸಂಧಿಸುವ ಸ್ಥಳದಿಂದ ತುಸು ಹೊರಗಡೆಯ ಪ್ರದೇಶದಲ್ಲಿ ಬಿಜಾಪುರದ ಅರಸನಿಂದ ಕಟ್ಟಲ್ಪಟ್ಟ ಕಟ್ಟಡಗಳು ಲಭ್ಯವಾಗಿವೆ. ಅಲ್ಲಿ ಇರುವ ಶಾಸನವು ಈ ರೀತಿಯಾಗಿದೆ.

" ಅಲ್ಲಾಹ ಮಹಮ್ಮದ ಅಲಿ ಬರ್ ಹಕೆ

ದರ್ ಜಮಾನೆ ಷಾಹ ಇಬ್ರಾಹಿಮ್ ಸಾನಿ ಷುದ್ ಹಿಸಾರ
ಬಾದ ಪಾಯಿಂದಾ ವ ಬಾಕಿ ತಾ ಸಲ್ತನತಾರಾ ಕರಾರ
ತಹತೆ ಹಾಕಿಮೆ ಹಫ್ತ ಕಿಷ್ವರ್ ವ ಬಂದಾ ಸರ್ ಕುಷಾನತ್ ವರಾ (?)
ಹಾಸಿದಾನೆ ಗೋರೆ ದರ್ ಕಹರೆನಾರ್ ಕರ್ ದುಷ್ಮನಾನತ್
ಖಾದಿಮ್ ಷಾಹ ಜಮಾ ಸುಲ್ತಾನ ಅಲಿ ಬಸ ನಾಮದಾರ
ಮಿ ನಮೂದಿಷ್ ತರಹ ಬಸತಹಷೆ ಬಾ ಬಜಲಿ ಕಾಮಗಾರ
ಬುವದ್ ಮೋಸಮೆ ಹಂಗಾಮೆ ರಜೀ ವ ಪೆಸ್ಲೆಬಹಾರ್
ಬಾದೆ ಹಿಜರಿ ಅಜ್ಮೆಅಜಾ ದರ್ ಷಹರಿ ಬಿಲ್ಲಜೆ ಷುದ್ ಷಮಾರ
..........ಅಜಿಜ್ ದರಹಾ............ಕರ್ದ
ಷುದ್ ಮುರತ್ತಬ್ ಬಾಬೆ ಅಲೀ...........ಜಹಾನಿಷಕಾರ್''

ಕನ್ನಡ ಭಾಷಾಂತರ

'' ಅಲ್ಲಾ ಪ್ರವಾದಿ ಮಹಮ್ಮದ್ ಅಲಿ ಸತ್ಯರು

(೧) ಅರಸು ೨ನೆಯ ಇಬ್ರಾಹಿಂ ಕಾಲದಲ್ಲಿ ಕೋಟೆಯ ಆವರಣ ಗೋಡೆ
( ) ಕಟ್ಟಲ್ಪಟ್ಟಿತು. ಈ ರಾಜ್ಯ ಮುಂದುವರಿದಂತೆ ಇದು ಉಳಿಯಲಿ ಮತ್ತು ಬಾಳಲಿ

(೨) ಏಳು ನಾಡಿನ ಅರಸನಾದ (ಈತನ) ಆದೇಶದಂತೆ ನಿನ್ನ ವೈರಿಗಳಿಗೆ ಅಗ್ನಿ ಕುಂಡವು ವಿಶ್ರಾಂತಿ ಧಾಮವಾಗಲಿ.

(೩) ಜಗದೊಡೆಯನ ಸೇವಕ ಕೀರ್ತಿವಂತ ಸುಲ್ತಾನ ಅಲಿ ನಾಮಧಾರ ಇದನ್ನು (ಪ್ರಕಾರ) ಆವರಣದ ಗೋಡೆಯನ್ನು ಅರ್ಹ ಸಹವರ್ತಿಗಳೊಂದಿಗೆ ಭೂ ಮಟ್ಟದವರೆಗೂ ಕಟ್ಟಿಸಿದನು.

(೪) ವಸಂತ ಸಮಯ ಮತ್ತು ಋತು ಅರಳುವ ಕಾಲ ಪವಿತ್ರ ಧರ್ಮಯುದ್ಧ ಸುರುವಿನ ನಂತರ ಇದು ಜುಲ್ ಹಜ್ ತಿಂಗಳಿಗೆ ಹೊಂದಿಕೊಳ್ಳುತ್ತದೆ.

(೫) ವಿನಮ್ರ ಅಲಿಯ ದ್ವಾರ ಕಟ್ಟಲ್ಪಟ್ಟಿತು.

ಶತ್ರುಗಳಿಂದ ಜನರನ್ನು ರಕ್ಷಿಸಲು ಹಲವು ಕಾಮಗಾರಿಗಳನ್ನು ನಡೆಸಿರುವುದು ತಿಳಿದುಬರುತ್ತದೆ. ಅದೇನೇ ಇದ್ದರೂ ಇಸ್ಲಾಂ ಧರ್ಮ ಕೊಪ್ಪಳದಲ್ಲಿ ಬಿಜಾಪುರ ಸುಲ್ತಾನರ ಕಾಲದಿಂದ ಹೈದರಾಬಾದ್ ನಿಜಾಮರ ಕಾಲದವರೆಗೆ ರಾಜಮನ್ನಣೆಯನ್ನು ಪಡೆದುಕೊಂಡಿತು. ಸ್ವಾತಂತ್ರ್ಯಸಂಗ್ರಾಮ ಮತ್ತು ಆನಂತರದ ಸಂದರ್ಭದಲ್ಲಿ ಹಿಂದೂ-ಮುಸ್ಲಿಂ ಸಂಘರ್ಷಗಳು ನಡೆದಿದ್ದರೂ ಅವು ಧಾರ್ಮಿಕ ಕಾರಣವಾಗಿಯೇ ನಡೆಯದೆ ರಾಜಕೀಯಕ್ಕಾಗಿಯೇ ನಡೆದಿವೆ ಎಂದು ತಿಳಿದುಬರುತ್ತದೆ. ಹೈದರಾಬಾದ್ ನಿಜಾಮನು ಸ್ವಾತಂತ್ರ್ಯೋತ್ತರ ಭಾರತದಲ್ಲಿ ಸ್ವತಂತ್ರ ರಾಷ್ಟ್ರವನ್ನಾಗಿ ಹೈದರಾಬಾದ್ ಪ್ರಾಂತವನ್ನು ಉಳಿಸಿಕೊಳ್ಳಲು ಮಾಡಿದ ಪ್ರಯತ್ನದ ಹಿನ್ನೆಲೆಯಲ್ಲಿ ರಜಕಾರರ ದಾಳಿಯ ಸಂದರ್ಭದಲ್ಲಿ ಮಾತ್ರ ಇತಿಹಾಸದಲ್ಲಿಯೇ ಕಪ್ಪುಚುಕ್ಕೆಯಂತಹ ಹಿಂದು-ಮುಸ್ಲಿಂ ಸಂಘರ್ಷಗಳನ್ನು ಕಾಣಬಹುದು. ಹೈದರಾಬಾದ್ ಕರ್ನಾಟಕ ಪ್ರದೇಶ ಈ ಸಂದರ್ಭದಲ್ಲಿ ತನ್ನ ಜಂಘಾಬಲವನ್ನು ಉಡುಗಿಸಿಕೊಂಡಿತು. ಏಕೆಂದರೆ ರಜಕಾರರ ಹಾವಳಿ ಆ ಸ್ವರೂಪದ್ದಾಗಿತ್ತು ಎಂದು ಬೇರೆ ಹೇಳಬೇಕಾಗಿಲ್ಲ. ಈ ದಾಳಿಯು ಧಾರ್ಮಿಕವಾದ ಉದ್ದೇಶದಿಂದ ನಡೆಯದೆ ರಾಜಕೀಯ ಇಚ್ಛಾಶಕ್ತಿಗಾಗಿ ನಡೆದ ಹೋರಾಟವಾದುದರಿಂದ ಧರ್ಮಸಮನ್ವಯತೆಗೆ ಇದರಿಂದ ಯಾವ ಕುಂದು ಉಂಟಾಗಲಿಲ್ಲ. ಕರ್ನಾಟಕ ಜನಗಳ ಧಾರ್ಮಿಕ ಔದಾರ್ಯತೆ ಇಂತಹ ಸಂದರ್ಭಗಳಲ್ಲಿ ಮೆಚ್ಚತಕ್ಕದ್ದು.

ಈ ಹಿನ್ನೆಲೆಗಳೇನೇ ಇದ್ದರೂ ಇಸ್ಲಾಂ ಅರಸರು ಕೊಪ್ಪಳದಲ್ಲಿ ಅನೇಕ ಮಸೀದಿಗಳನ್ನು ಕಟ್ಟಿಸಿರುವರು. ಇದು ಅವರ ಧಾರ್ಮಿಕ ಸಹಿಷ್ಣುತೆಗೆ ಸಾಕ್ಷಿಯಾಗಿದೆ.

ಬಿಜಾಪುರದ ಇಬ್ರಾಹಿಂ ಆದಿಲ್‌ಷಾನನ್ನು ಇಬ್ರಾಹಿಂ ಜಗದ್ಗುರು ಎಂದು ಕರೆಯುವ ವಾಡಿಕೆಯೂ ಇತ್ತು. ಇದು ಉತ್ತರ ಕರ್ನಾಟಕದಲ್ಲಿ ಜನಜನಿತವಾಗಿದ್ದ ವೀರಶೈವ ಧರ್ಮದೊಂದಿಗಿನ ಧರ್ಮಸಾಮರಸ್ಯದ ಪ್ರತೀಕವೆಂದು ಬೇರೆ ಹೇಳಬೇಕಾಗಿಲ್ಲ. ಕೊಪ್ಪಳವನ್ನು ಆಳಿದ ಇಸ್ಲಾಂ ಅರಸುಮನೆತನಗಳಲ್ಲಿ ಬಹಮನಿಯ ಬಿಜಾಪುರದ ಅರಸು ಅಲಿ ಆದಿಲ್‌ಷಾ ಮುಖ್ಯನಾಗಿ ಕಾಣಿಸುತ್ತಾನೆ.

ಕೊಪ್ಪಳದ ಮಿಟ್ಟಿಕೇರಿಯಲ್ಲಿ ಹಿಜರಿ ೧೦೧೪ರಲ್ಲಿ ಒಂದು ಮಸೀದಿಯನ್ನು ಕಟ್ಟಿಸಿದನು. ಕೊಪ್ಪಳಕ್ಕೆ ಆಗಮಿಸುವ ಇಸ್ಲಾಂ ಬಾಂಧವರಿಗೆ ಪ್ರಾರ್ಥನೆಯ ಸಲುವಾಗಿ ಮತ್ತು ವಸತಿಯ ಸಲುವಾಗಿ ಈ ಮಸೀದಿಯನ್ನು ಕಟ್ಟಿಸಿದನೆಂದು ಶಾಸನಗಳು ಹೇಳುತ್ತವೆ. ಈ ಶಾಸನದ ಪ್ರಕಾರ ಇಸ್ಲಾಂ ಧರ್ಮ ಸುಮಾರು ೩೬೦ ವರ್ಷಗಳ ಪೂರ್ವದಿಂದಲೇ ಕೊಪ್ಪಳದಲ್ಲಿ ನೆಲೆಸಿತ್ತೆಂದು ಹೇಳಬಹುದು. ಈ ಮಸೀದಿಯೇ ಕೊಪ್ಪಳದಲ್ಲಿಯ ಮೊದಲ ಮಸೀದಿಯಾಗಿದ್ದು ಇದನ್ನು ಜಾಮಿಯಾ ಮಸೀದಿ ಎಂದು ಕರೆಯುತ್ತಾರೆ. ಇದನ್ನು ಎತ್ತರದ ಕಟ್ಟೆಯ ಮೇಲೆ ಕಟ್ಟಲಾಗಿದೆ. ಗಚ್ಚಿನ ಕೋಟೆಯೊಳಗೆ ನೆಲೆಸಿದ ಇಸ್ಲಾಂ ಧರ್ಮದವರಿಗೆ ಪ್ರಾರ್ಥನೆಯ ಸಲುವಾಗಿ ಮಸೀದಯನ್ನು ಕಟ್ಟಲಾಗಿದೆ ಎಂದು ಅದೇ ಶಾಸನವು ತಿಳಿಸುತ್ತದೆ. ಹಿಜರಿ ಸನ್ ೧೦೨೮ರಲ್ಲಿ ಅದೇ ಅರಸುಮನೆತನವು ಮತ್ತೊಂದು ಮಸೀದಿಯನ್ನು ಕಟ್ಟಿಸಿತು ಎಂದು ಇಲ್ಲಿಯ ಮತ್ತೊಂದು ಶಾಸನವು ತಿಳಿಸುತ್ತದೆ. ಜೊತೆಗೆ ಈ ಮಸೀದಿಗಳ ಮುಂದೆ ಸೇವೆಗಾಗಿ ಭೂಮಿಯನ್ನು ಜಹಗೀರು ಹಾಕಿಕೊಟ್ಟರೆಂದು ಶಾಸನದಿಂದ ತಿಳಿದುಬರುತ್ತದೆ.

ಬಿಜಾಪುರದ ಅರಸರ ಪತನದ ನಂತರ ಮೊಗಲರ ಸುಬೇದಾರ ಪ್ರಾಂತವಾಗಿದ್ದ ಹೈದರಾಬಾದ್ ಪ್ರಾಂತಕ್ಕೆ ಕೊಪ್ಪಳವು ಸೇರಿತು. ಹೈದರಾಬಾದ್ ಸುಬೇದಾರ ಸ್ವಾತಂತ್ರ್ಯಾನಂತರ ಹೈದರಾಬಾದ್ ನಿಜಾಮನ ಆಡಳಿತಕ್ಕೆ ೧೭೨೪ ರಲ್ಲಿ ಕೊಪ್ಪಳವು ಹೈದರಾಬಾದ್ ನಿಜಾಮರ ಆಡಳಿತಕ್ಕೆ ಸೇರಿತು. ಅರಸು ನಿಜಾಮನು ತನ್ನ ಪ್ರಧಾನಿ ತುರಾಬಾಲಿಖಾನ್ ನವಾಬಾ ಸಾಲಾರ್‌ಜಂಗ್ ಬಹಾದ್ದೂರನಿಗೆ ಕೊಪ್ಪಳ ಮತ್ತು ಯಲಬುರ್ಗಾ ತಾಲ್ಲೂಕುಗಳಿಗೆ ಜಹಗೀರು ಹಾಕಿಕೊಟ್ಟನು. ಕೊಪ್ಪಳವು ಅಂದಿನಿಂದ ಜಿಲ್ಲಾ ಕೇಂದ್ರವಾಯಿತು. ಈ ಸಂದರ್ಭದಲ್ಲಿ ಅನೇಕ ಮಹಮ್ಮದೀಯ ಕುಟುಂಬಗಳು ಕೊಪ್ಪಳದಲ್ಲಿ ನೆಲೆಸತೊಡಗಿದವು. ಜಿಲ್ಲಾ ಕೇಂದ್ರವಾದನಂತರ ಅಲ್ಲಿ ಎಲ್ಲ ಅಧಿಕಾರಿಗಳು ಇಸ್ಲಾಂ ಧರ್ಮದವರೇ ಆಗಿದ್ದರು. ಅವರ ನಿವೃತ್ತಿಯ ನಂತರ ಅಲ್ಲೇ ನೆಲೆಸಿದ್ದುದರಿಂದ ಕೊಪ್ಪಳದಲ್ಲಿ ಅವರ ಜನಸಂಖ್ಯೆ ಹೆಚ್ಚುತ್ತಾ ಹೋಯಿತು.

ಮೂರನೆಯ ಮತ್ತು ಕೊನೆಯ ಸಾಲಾರ್‌ಜಂಗ್ ನವಾಬನು ಮೀರ್ ಯೂಸಫ್

ಅಲಿಖಾನ್ ಹೈದರಾಬಾದಿನಿಂದ ಕೊಪ್ಪಳಕ್ಕೆ ಆಗಮಿಸಿದಾಗ ಸ್ಥಳೀಯರ ಮುಹಮ್ಮದೀಯರ ಬೇಡಿಕೆಯನ್ನು ಮನ್ನಿಸಿ ಕಲ್ಲುಮಣ್ಣಿನಿಂದ ಕಟ್ಟಿದ ಮಸೀದಿಯನ್ನು ಗಚ್ಚು ಕಲ್ಲುಗಳಿಂದ ಅದೇ ಸ್ಥಳದಲ್ಲಿ ಕಟ್ಟಲು ಹಣ ಮಂಜೂರು ಮಾಡಿದನು. ಕೆಲವೇ ವರ್ಷಗಳ ನಂತರ ಈ ಮಸೀದಿ ಆಧುನೀಕರಣಗೊಂಡಿತು. ಇತ್ತೀಚೆಗೆ ಈ ಮಸೀದಿಗೆ ಸುಂದರ ಮಿನಾರ್ ಕಟ್ಟಲಾಗಿದೆ. ಇದರಿಂದ ಮಸೀದಿಯು ಮತ್ತಷ್ಟು ಸುಂದರವಾಗಿ ಕಾಣುತ್ತದೆ.

ಹುಲಿಕೆರೆಗೆ ಹೋಗುವ ಮಾರ್ಗದ ಬಲಬದಿಗೆ ಭೂಮಟ್ಟದಿಂದ ಸುಮಾರು ೭೫ ಮೀಟರ್ ಎತ್ತರದಲ್ಲಿ ಗುಡ್ಡದ ಓರೆಯ ಸೊಬಗಿನಲ್ಲಿ ಮರ್ದಾನಗೈವ ದರ್ಗಾವಿದೆ. ಮೇಲಿರುವ ಸುಮಾರು ೧೩೦ ಮೆಟ್ಟಿಲುಗಳಿಗೆ ಕಾಡುಗಲ್ಲುಗಳನ್ನಿಟ್ಟು ಹೊಂದಿಸಿ ಕಟ್ಟಲಾಗಿದೆ. ಗವಿಯಲ್ಲಿ ಹುತಾತ್ಮರ ಗೋರಿಯಿದೆ. ಈ ಗೋರಿಗೆ ಸಂಬಂಧಿಸಿದಂತೆ ಇಂದಿಗೂ ಕೂಡಾ ಉರುಸ್ ಅದ್ಭುತವಾಗಿ ನಡೆಯುತ್ತದೆ. ಇದರ ಪಕ್ಕದಲ್ಲಿರುವ ಚಿಕ್ಕ ಗುಡ್ಡದ ಮೇಲೆ ಹಜರತ್ ರಾಜಾಭಕ್ಷಾ ದರ್ಗಾವಿದೆ. ಇದರ ಉರುಸು ಕೂಡಾ ಬಹಳ ವೈಭವದಿಂದ ನಡೆಯುತ್ತದೆ. ಇವೆರಡೂ ದರ್ಗಾಗಳ ನಿರ್ವಹಣೆಗೆ ಭೂಮಿಯನ್ನು ಜಹಗೀರು ಹಾಕಿಕೊಟ್ಟದ್ದಕ್ಕೆ ಶಾಸನವೊಂದು ಸಿಗುತ್ತದೆ. ಶೈಲಾಣಿ ಓಣಿಯ ಖಾದರಲಿಂಗ ಗೋರಿಗೆ ನೀರು ತುಂಬಿದ ತಾಮ್ರ ತಂಬಿಗೆ ಹಿಡಿದುಕೊಂಡು ಮೌನವಾಗಿ ಪ್ರದಕ್ಷಿಣೆ ಹಾಕಿದರೆ ಸಂಕಲ್ಪಗಳು ಸಿದ್ಧಿಯಾಗುತ್ತವೆ. ಎಂಬುವ ನಂಬುಗೆ ಇದೆ. ಇಸ್ಲಾಂಧರ್ಮ ರಜಕಾರರ ಚಳುವಳಿಯ ನಂತರವೂ ಕೊಪ್ಪಳ ಪ್ರದೇಶದದಲ್ಲಿ ಸ್ವಯಂಸ್ಫೂರ್ತಿಯಿಂದ ನೆಲೆಗೊಂಡಿದೆ. ಜೊತೆಜೊತೆಗೆ ಇಸ್ಲಾಂ ಶೈಕ್ಷಣಿಕ ಸಂಸ್ಥೆಗಳು ಹುಟ್ಟಿಕೊಂಡು ಹಲವು ಶಾಲಾ ಕಾಲೇಜುಗಳನ್ನು ನಡೆಸಿಕೊಂಡು ಹೋಗುತ್ತಿದೆ. ಹಲವು ಇಸ್ಲಾಂ ಸಂಗತಿಗಳು ಕೊಪ್ಪಳದಲ್ಲಿದ್ದು ಸಾಮಾಜಿಕ ಕಾರ್ಯಗಳಲ್ಲಿ ತೊಡಗಿಕೊಂಡಿವೆ. ಅದೇನೇ ಇದ್ದರೂ ಜೈನಧರ್ಮ ಮತ್ತು ಇಸ್ಲಾಂ ಧರ್ಮಗಳು ಮಾತ್ರ ಕೊಪ್ಪಳದಲ್ಲಿ ಹೆಚ್ಚು ಪ್ರಭಾವವನ್ನು ಬೀರಿರುವರು ಎಂಬುದಂತೂ ಸ್ಪಷ್ಟ.

## ೬. ೬. ಕ್ರೈಸ್ತಧರ್ಮ

ವಸಾಹತು ಕಾಲಘಟ್ಟದಲ್ಲಿ ಕ್ರೈಸ್ತಧರ್ಮದ ಪ್ರಭಾವವನ್ನು ಭಾರತದ ಭೂಪ್ರದೇಶದ ಮೇಲೆ ಕಾಣಬಹುದು. ಕರ್ನಾಟಕವು ಹೈದರಾಲಿ ಮತ್ತು ಟಿಪ್ಪೂವಿನ ಆಡಳಿತ ಸಂದರ್ಭದಲ್ಲಿ ಮೈಸೂರು ಅರಸರಿಂದ ಆಳಿಸಿಕೊಳ್ಳಲ್ಪಡುತ್ತಿತ್ತು. ಈ ಸಂದರ್ಭದಲ್ಲಿ ಮೂರು ಮತ್ತು ನಾಲ್ಕನೆಯ ಆಂಗ್ಲ ಮೈಸೂರು ಯುದ್ಧಗಳು ಕರ್ನಾಟಕದ ಬಹುಭಾಗ ಭೂ ಪ್ರದೇಶವನ್ನು ಆಂಗ್ಲ ಕೈವಶಕ್ಕೆ ಒಪ್ಪಿಸಿದವು. ಟಿಪ್ಪು ಸಂಪೂರ್ಣವಾಗಿ ಸೋತು ಆಂಗ್ಲರಿಗೆ ಶರಣಾದ. ಈ ಹಿನ್ನೆಲೆಯಲ್ಲಿ ಕನ್ನಡ ನಾಡು ನಾಲ್ಕೈದು ಪ್ರಾಂತಗಳಲ್ಲಿ ಸೇರಿಹೋಯಿತು. ಕೊಪ್ಪಳವು ಹೈದರಾಬಾದ್ ಪ್ರಾಂತಕ್ಕೆ ಸೇರಿಕೊಂಡಿತು. ಇದರಿಂದ ಕ್ರೈಸ್ತಧರ್ಮದ ಆಡಳಿತೆಯನ್ನು ಪರೋಕ್ಷವಾಗಿ ಕಾಣುತ್ತೇವೆ. ಏಕೆಂದರೆ ಹೈದರಾಬಾದ್ ನಿಜಾಮರು ಕಾರ್ನಾಟಿಕ್ ಯುದ್ಧಗಳಲ್ಲಿ ತಮ್ಮ ಪ್ರಾಂತವನ್ನಾಗಲೇ ಬ್ರಿಟಿಷರ ಆಡಳಿತಕ್ಕೆ ಒಪ್ಪಿಸಿದ್ದರು. ಈ ಹಿನ್ನೆಲೆಯಲ್ಲಿ ನಿಜಾಮರು ನಿಜಾಮರಾಗಿದ್ದರೇ ಹೊರತು ಅರಸರಾಗಿರಲಿಲ್ಲ. ಬ್ರಿಟಿಷರು ಅವರ ಮೇಲೆ ರಾಜಾಜ್ಞೆಗಳನ್ನು ಹೊರಡಿಸುತ್ತಿದ್ದರು. ಸ್ವಾತಂತ್ರ್ಯ ಚಳುವಳಿಯ ಸನ್ನಿವೇಶದಲ್ಲೂ ಇಲ್ಲಿ ಕ್ರೈಸ್ತಧರ್ಮದ ಆಳ್ವಿಕೆಯನ್ನು ಅಪ್ರತ್ಯಕ್ಷವಾಗಿ ಕಾಣಬಹುದು. ಈ ಕಾರಣದಿಂದ ನೇರವಾಗಿ ಕೊಪ್ಪಳ ಪ್ರದೇಶವು ಇವರ ಆಳ್ವಿಕೆಗೆ ಒಳಪಡಲಿಲ್ಲ.

ವಸಾಹತು ಕಾಲಘಟ್ಟದ ಆರಂಭದಲ್ಲಿ ಕ್ರೈಸ್ತ ಪಾದ್ರಿಗಳು ಕರ್ನಾಟಕದ ಪರಂಪರೆಯ ಶೋಧನೆಗೆ ತೊಡಗಿದರು. ಕರ್ನಾಟಕದ ಭೂಭಾಗದಾದ್ಯಂತ ಈ ಕಾರಣಕ್ಕಾಗಿ ಸುತ್ತಿದರು. ಕನ್ನಡ ನಾಡಿನ ಭಾಷೆ, ಆಚರಣೆ, ಭಾವನೆಗಳನ್ನು ಅರಿಯಲು ಅವರಿಗೆ ಇದೊಂದೇ ಮಾರ್ಗವಾಗಿತ್ತು. ಕ್ರೈಸ್ತಧರ್ಮದ ಪ್ರಸಾರವನ್ನು ಮನಸ್ಸಿನಲ್ಲಿಟ್ಟುಕೊಂಡು ಹಿಂದೂ ಧರ್ಮದ ಬೇರುಗಳು ಜನಮನವನ್ನು ಬೇರೂರಿರುವ ರೀತಿಯನ್ನು ಕಂಡುಕೊಳ್ಳತೊಡಗಿದರು. ಶತಶತಮಾನಗಳಿಂದ ಬೇರೂರಿದ್ದ ಧಾರ್ಮಿಕ ಜೀವನ ಕ್ರಮವು ಒಮ್ಮೆಲೆ ಕ್ರೈಸ್ತಧರ್ಮವನ್ನು ಸ್ವೀಕರಿಸಲಿಲ್ಲ. ೧೨ನೆಯ ಶತಮಾನದಲ್ಲಿ ನಡೆದಿದ್ದ ಕಲ್ಯಾಣದ

ಕ್ರಾಂತಿಯ ಹಿನ್ನೆಲೆಯಲ್ಲಿ ಬೇರೊಂದು ಧರ್ಮದ ಅಗತ್ಯವು ಕೊಪ್ಪಳದ ಜನತೆಗೆ ಇರಲಿಲ್ಲ. ಕೈಸ್ತ ಮಿಶನರಿಗಳು ಇದನ್ನು ಕಂಡುಕೊಂಡವು. ಜನರಲ್ಲಿ ಆಳವಾಗಿ ಬೇರೂರಿದ್ದ ಮತ ಪರಂಪರೆಗಳನ್ನು ಅವರ ಮನದಿಂದ ಬೇರುಸಹಿತ ಕಿತ್ತೊಗೆಯಲು, ಜನಮನದಲ್ಲಿ ಬೆರೆತು ಕೆಲಸ ಮಾಡಬೇಕೆಂಬುದು ಅವರ ಮನದ ಇಂಗಿತವಾಗಿತ್ತು. ಕನ್ನಡ ನಾಡಿನ ಸಾಹಿತ್ಯ ಅದರ ಚರಿತ್ರೆಯ ಕಾಲಾನುಕ್ರಮಣಿಕೆಯನ್ನು ತಯಾರಿಸುವಲ್ಲಿ ಆಸಕ್ತಿಯನ್ನು ಹೊಂದತೊಡಗಿದರು. ಊರೂರು ಅಲೆದು ನಿಘಂಟುಗಳ ರಚನೆಗೆ ಮುಂದಾದರು. ಅವರ ಅಧ್ಯಯನಶೀಲತೆಗೆ ಕನ್ನಡ ನಾಡು ಒಂದು ಪ್ರಯೋಗಸಾಲೆಯಾಯಿತು. ಈ ಕಾರಣದಿಂದಲೇ ಕನ್ನಡದಲ್ಲಿ ನಿಘಂಟು ಸಾಹಿತ್ಯ, ಶಿಲಾಶಾಸನಗಳ ಅಧ್ಯಯನ, ಗ್ರಂಥಸಂಪಾದನೆ, ಜಾನಪದ ವಿಷಯಗಳ ಮೇಲಿನ ಕ್ರಮಬದ್ಧ ಅಧ್ಯಯನಗಳು, ಭಾಷಾಶಾಸ್ತ್ರ ಮುಂತಾದ ಹತ್ತು ಹ ಲವು ಸಂಗತಿಗಳು ಹುಟ್ಟಿಕೊಂಡವು. ಅವರು ಹಾಕಿಕೊಟ್ಟ ಮುನ್ನುಡಿಯಲ್ಲಿ ಇಂದಿನ ಅಧ್ಯಯನ ಶಿಸ್ತುಗಳು ರೂಪುಗೊಂಡಿವೆ. ಎಪಿಗ್ರಾಫಿಕಾ ಇಂಡಿಯಾ, ಕೈಫಿಯತ್ತುಗಳು, ಲಾವಣಿಗಳ ಸಂಗ್ರಹ ಮುಂತಾದ ಹತ್ತುಹಲವು ಸಂಗ್ರಹಕಾರ್ಯಗಳು ಒಂದು ವ್ಯವಸ್ಥಿತ ಅಧ್ಯಯನವಾಗಿ ಮಾರ್ಪಾಡಾದವು. ಇದು ಕೊಪ್ಪಳದಲ್ಲಿ ಮಾತ್ರವಲ್ಲ ಇಡೀ ಕನ್ನಡ ನಾಡಿಗೆ ಅನ್ವಯಿಸತಕ್ಕದ್ದು. ಫ್ಲೀಟ್, ರಾಬರ್ಟ್‌ಸನ್, ರೈಸ್, ಕಿಟೆಲ್ ಮುಂತಾದ ಮಿಶನರಿಗಳು ಕೊಪ್ಪಳ ಪ್ರದೇಶಕ್ಕೆ ಭೇಟಿಕೊಟ್ಟು ಅಲ್ಲಿನ ಜೀವನಕ್ರಮ, ಶೈಕ್ಷಣಿಕ ಸ್ಥಿತಿಗತಿಗಳು, ಜಾನಪದ ಪರಂಪರೆ, ಅಲ್ಲಿನ ಆಚರಣೆಗಳು ಇತ್ಯಾದಿಗಳನ್ನು ಶೋಧಿಸಿ ತಮ್ಮ ತಮ್ಮ ಪುಸ್ತಕಗಳಲ್ಲಿ ದಾಖಲುಮಾಡಿದ್ದಾರೆ.

ಪ್ರಕೃತ ಕೊಪ್ಪಳದಲ್ಲಿ ಕೈಸ್ತಧರ್ಮ ವಿರಳವಿರಳವಾಗಿ ಕಾಣಿಸಿಕೊಳ್ಳುತ್ತದೆ. ಇತ್ತೀಚೆಗೆ ವಲಸೆ ಬಂದ ಕುಟುಂಬಗಳು ಶೈಕ್ಷಣಿಕ ಸಂಸ್ಥೆಗಳನ್ನು, ಒಂದೆರಡು ಚರ್ಚುಗಳನ್ನು ಕಟ್ಟಿಕೊಂಡು ಧರ್ಮಸಮನ್ವಯದ ಪ್ರಣಾಳಿಯೊಳಗೆ ಸಮೃದ್ಧಿಯಿಂದ ನೆಲೆಸಿವೆ.

## ೬. ೭. ಸೂಫಿ ಪಂಥ

ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ರಾಜಕೀಯ ಇಚ್ಛಾಶಕ್ತಿ ಬೆಳೆಯುತ್ತಲೇ ಧರ್ಮದ ಕುರಿತು ಆಸಕ್ತಿಯು ಮೂಡತೊಡಗಿತು. ಕುರಾನ್ ನಿರ್ದೇಶಿತ ಆಡಳಿತ ಮತ್ತು ವಚನ ಚಳುವಳಿ ನಿರ್ದೇಶಿತ ಜೀವನ ಕ್ರಮ ಇವುಗಳ ಹಿನ್ನೆಲೆಯಲ್ಲಿ ಧರ್ಮಸಮನ್ವಯವನ್ನು ಸಾರಬೇಕೆಂಬ ಒಂದೇ ಉದ್ದೇಶಕ್ಕಾಗಿ ಸೂಫಿ ಪಂಥವು ಆ ಭಾಗದಲ್ಲಿ ಹುಟ್ಟಿಕೊಂಡಿತು. ವೈದಿಕ ಧರ್ಮದ ಜೀವನ ಮೌಲ್ಯಗಳು ವಚನತತ್ವದ ಹಿನ್ನೆಲೆಯಲ್ಲಿ ಮಾರ್ಪಾಡಾಗಿದ್ದವು. ಆದುದರಿಂದ ಹಿಂದೂ ಧರ್ಮ ವೀರಶೈವ ಧರ್ಮದ ಮೂಲಕ ಹೊಸ ಹೊಳಹುಗಳನ್ನು ಪಡೆದುಕೊಂಡಿತು. ಅನಂತರದ ದಾಸ ಸಾಹಿತ್ಯವು ಅದಕ್ಕೆ ಪೂರಕವಾದ ಅಂಶಗಳನ್ನು ಒದಗಿಸಿತು. ಇಸ್ಲಾಂ ರಾಜಸತ್ತೆಯನ್ನು ಜನಗಳು ವಿರೋಧಿಸಬಾರದು ಎಂಬ ಮತ್ತು ಧಾರ್ಮಿಕವಾಗಿ ವೈಷಮ್ಯವು ತಲೆದೋರಬಾರದು ಎಂಬ ರಾಜಕೀಯ ನೇತಾರರ ಅವಕಾಶವಾದಿ ಚಿಂತನವು ಒಂದರ್ಥದಲ್ಲಿ ಸೂಫಿ ಪಂಥವು ಆ ಪ್ರದೇಶದಲ್ಲಿ ಹುಟ್ಟಿಕೊಳ್ಳಲು ಕಾರಣವಾಯಿತೆನ್ನಬಹುದು. ರಾಯಚೂರು, ಬೀದರ್, ಗುಲಬರ್ಗಾ, ಕೊಪ್ಪಳ, ಧಾರವಾಡ, ಹಾವೇರಿ, ಗದಗ ಮುಂತಾದ ಕಡೆಗಳಲ್ಲಿ ವೀರಶೈವಧರ್ಮವು ಸುಸ್ಥಿತಿಯಲ್ಲಿತ್ತು ಮತ್ತು ಜನಗಳು ಆ ಧರ್ಮವನ್ನು ಒಪ್ಪಿಕೊಂಡಿದ್ದರು. ವೀರಶೈವಧರ್ಮದಲ್ಲಿನ ಅನುಭಾವ ಇಸ್ಲಾಂ ಧರ್ಮದ ಪ್ರಣಾಳಿಯಲ್ಲಿ ಬೆರೆಸಿ ಒಂದು ಹೊಸ ಜೀವನ ಕ್ರಮವನ್ನು ಹೊಂದಿಸಲು ಸೂಫಿ ಪಂಥವು ಸಂಕಲ್ಪಿಸಿಕೊಂಡಿತು. ಇಸ್ಲಾಂ ಧರ್ಮದ ತತ್ವಗಳು ವೀರಶೈವಧರ್ಮದಲ್ಲಿನ ತತ್ವಗಳೊಂದಿಗೆ ಮಿಳಿತವಾದವು. ಈ ಸಮ್ಮಿಲನದಿಂದ ಜೀವನ ಕ್ರಮವನ್ನು ಮತ್ತಷ್ಟು ಸರಳಗೊಳಿಸಿ ನಿರೂಪಿಸಲು ಸಾಧುಸಂತರಿಗೆ ಸಾಧ್ಯವಾಯಿತು.

ಕೊಪ್ಪಳ ಪ್ರದೇಶದಲ್ಲಿ ಸೂಫಿ ಪಂಥದ ಬೆಳವಣಿಗೆಯನ್ನು ವಿರಳವಾಗಿ ಕಾಣಬಹುದು. ಅನೇಕ ಸೂಫಿಗಳು ಕೊಪ್ಪಳ ಪರಿಸರದಲ್ಲಿ ಆಗಿಹೋಗಿರಬಹುದು. ಆದರೆ ಅವರ ಬಗೆಗೆ ಮಾಹಿತಿಗಳು ಸರಿಯಾಗಿ ಸಿಗುತ್ತಿಲ್ಲ.

ನಗರದ ದಕ್ಷಿಣ ಭಾಗಕ್ಕೆ ಶಿರಸಪ್ಪಯ್ಯನ ಮಠ ಸ್ಮಾರಕವು ನೆಲೆಗೊಂಡಿದ್ದು ಪೂರ್ವಾಭಿಮುಖವನ್ನು ಹೊಂದಿದ್ದು ಈಗಲೂ ಉತ್ತಮ ಸ್ಥಿತಿಯಲ್ಲಿದೆ. ಇದು ಹಿಂದೂ ಮುಸ್ಲಿಂ ಶೈಲಿಯನ್ನು

ಹೊಂದಿದ್ದು ಕ್ರಿ.ಶ. ಸುಮಾರು ೧೬-೧೭ನೇ ಶತಮಾನದಲ್ಲಿ ಕಟ್ಟಲ್ಪಟ್ಟಿದೆ ಎಂದು ಗುರುತಿಸಬಹುದು. ಈ ಕಟ್ಟಡವು ಹಿಂದೂ ಮುಸ್ಲಿಂ ಶೈಲಿಯಲ್ಲಿದೆ. ಕೊಪ್ಪಳದ ಪ್ರಸಿದ್ಧ ಮಠಗಳಲ್ಲಿ ಇದೂ ಒಂದು. ಶಿರಸಪ್ಪಯ್ಯನೆಂಬುವವನು ಒಬ್ಬ ಸೂಫಿ ಸಂತ. ಇವನು ೧೭-೧೮ನೇ ಶತಮಾನದಲ್ಲಿ ಬದುಕಿ ಬಾಳಿದ್ದವನು. ಆ ಕಾರಣದಿಂದ ಇದನ್ನು ಸ್ಥಳೀಯರು ಶಿರಸಪ್ಪಯ್ಯನ ಮಠವೆಂದೇ ಕರೆಯುತ್ತಾರೆ. ಇದು ಗರ್ಭಗೃಹವನ್ನು ಹೊಂದಿದ್ದು ಅದರಲ್ಲಿ ಒಂದು ಗದ್ದುಗೆಯಿದೆ. ಆ ಗದ್ದುಗೆಯು ಶಿರಸಪ್ಪಯ್ಯನ ಗದ್ದುಗೆಯಾಗಿದೆ ಎಂದು ಹೇಳುತ್ತಾರೆ. ೩ ಗರ್ಭಗೃಹಗಳನ್ನು ಹೊಂದಿದ ಈ ದೇವಾಲಯವು ಒಂದರಲ್ಲಿ ವೀರಭದ್ರನ ಕಂಚಿನ ಪ್ರತಿಮೆಯನ್ನು ಒಳಗೊಂಡಿದೆ. ಬಲಬದಿಯ ಗರ್ಭಗೃಹದಲ್ಲಿ ಯಾವುದೇ ಮೂರ್ತಿಯಿಲ್ಲ. ಮುಖ್ಯ ಗರ್ಭಗೃಹದ ಬಾಗಿಲುವಾಡದಲ್ಲಿ ಪದ್ಮವಿದೆ. ಸಭಾಮಂಟಪದಲ್ಲಿ ಎರಡು ಕಪ್ಪು ನಯಶಿಲೆಯ ಕಂಬಗಳಿವೆ. ಇವು ಹೊಯ್ಸಳರ ಶೈಲಿಯಲ್ಲಿದ್ದು ಅತ್ಯಂತ ನಯವಾಗಿವೆ. ಸಭಾಮಂಟಪದ ಮುಂದಿನ ಆವರಣವು ಹಿಂದೂ ಮುಸ್ಲಿಂ ಶೈಲಿಯ ಕಮಾನಿನ ಆಕಾರದಲ್ಲಿ ಕಲ್ಲು ಮತ್ತು ಗಾರೆಗಳಿಂದ ಕಟ್ಟಲ್ಪಟ್ಟಿದೆ. ಅದರ ಎಡ ಮತ್ತು ಬಲ ಭಾಗಗಳಲ್ಲಿ ಜಾಲಂದ್ರಗಳನ್ನು ಬೆಳಕಿನ ಸಲುವಾಗಿ ನಿರ್ಮಿಸಿರುವರು. ಈ ಮಠವು ಹಿಂದೂ ಮತ್ತು ಮುಸ್ಲಿಂ ಧರ್ಮಗಳ ಜನರ ಪೂಜ್ಯನೀಯ ಕೇಂದ್ರ. ಇಲ್ಲಿ ಮೊಹರಂ ಹಬ್ಬದ ಸಂದರ್ಭದಲ್ಲಿ ವಿಶೇಷ ಉತ್ಸವ, ಆಚರಣೆಗಳು ನಡೆಯುತ್ತವೆ. ಈ ಮಠದ ಅರ್ಚಕರು ವಿಶ್ವಕರ್ಮ ಜನಾಂಗದವರಾಗಿದ್ದಾರೆ. ಇದಕ್ಕೆ ಸುಲ್ತಾನರ ಕಾಲದಲ್ಲಿ ಕಟ್ಟಲಾದ ಮಹಾದ್ವಾರವಿದೆ. ಹಿಂದೂ ಮುಸ್ಲಿಂ ಶೈಲಿಗೆ ಈ ಮಠವು ಒಂದು ಉದಾಹರಣೆಯಾಗಿದೆ. ಮಠದ ಆವರಣದಲ್ಲಿ ಕಲ್ಯಾಣಿ ಚಾಲುಕ್ಯರ ಕಾಲದ ಕಂಬವಿದ್ದು ಅದರಲ್ಲಿ ಭೈರವಿ ಮೊದಲಾದ ಶಿಲ್ಪಗಳನ್ನು ಕಾಣಬಹುದು. ಅಲ್ಲದೆ ಈ ಮಠದ ಮುಂಭಾಗದಲ್ಲಿ ಇದರ ಅರ್ಚಕರ ಪೂರ್ವಜರ ಸಮಾಧಿಗಳಿವೆ.

ಅದೇನೇ ಇದ್ದರೂ ಕೊಪ್ಪಳ ಪ್ರದೇಶವು ಸರ್ವಧರ್ಮಗಳ ನೆಲೆವೀಡಾಗಿದೆ. ಇತಿಹಾಸದುದ್ದಕ್ಕೂ ಅನೇಕ ಧರ್ಮಗಳಿಗೆ ಇದು ತನ್ನ ಒಲವನ್ನು ಅಭಿವ್ಯಕ್ತಪಡಿಸಿದೆ. ಕನ್ನಡ ನಾಡಿನಲ್ಲಿ ಆಗಿಹೋದ ಎಲ್ಲ ಪ್ರಮುಖ ಧರ್ಮಗಳಿಗೂ ಕೇಂದ್ರಶಕ್ತಿಯಾಗಿ ಚರಿತ್ರೆಯುದ್ದಕ್ಕೂ ನಿಂತಿದೆ.

ಬೌದ್ಧಧರ್ಮ ಆದಿಯಲ್ಲಿ ಈ ಪ್ರದೇಶದಲ್ಲಿ ನೆಲೆಗೊಂಡಿತ್ತು. ಅದನ್ನು ಅಳಿಸಿ ಹಾಕಿ ಜೈನಧರ್ಮ ತನ್ನ ವೈಭವೋಪೇತ ಪ್ರಗತಿಯನ್ನು ಅಲ್ಲಿ ಕಂಡುಕೊಂಡಿತು. ಈ ಜೈನಧರ್ಮವು ವಚನ ಚಳುವಳಿಯ ಹಿನ್ನೆಲೆಯಲ್ಲಿ ನಾಮಾವಶೇಷವಾಗಿ ಜನಮನದಲ್ಲಿ ವೀರಶೈವ ಧರ್ಮವು ನೆಲೆಗೊಂಡಿತು. ಈ ವೀರಶೈವ ಧರ್ಮದ ಜೊತೆಜೊತೆಗೆ ಇಸ್ಲಾಂ ಧರ್ಮ ಕೊಪ್ಪಳದಲ್ಲಿ ತನ್ನ ಸ್ಥಾನಮಾನಗಳನ್ನು ಹೊಂದಿತ್ತು. ಕ್ರೈಸ್ತಧರ್ಮ ತನ್ನ ನೆರಳನ್ನು ಕೊಪ್ಪಳದ ಮೇಲೆ ಬಿಟ್ಟಿತಾದರೂ ಅದು ಅಲ್ಲಿ ನೆಲೆಗೊಳ್ಳಲಿಲ್ಲ. ಇಲ್ಲಿ ಧರ್ಮಸಮನ್ವಯತೆಗೆ ಹಲವು ಪ್ರಯತ್ನಗಳು ನಡೆದಿವೆ. ಪ್ರತಿಯೊಂದು ಧರ್ಮ ಬೇರೆ ಧರ್ಮಗಳನ್ನು ಗೌರವಿಸಿದೆ. ಇದು ಆ ನೆಲದ ಗುಣವಿರಬಹುದು. ಹೀಗಿರುವುದರಿಂದ ಎಲ್ಲ ಧರ್ಮಗಳು ಅಲ್ಲಿ ನೆಲೆಗೊಂಡಿದ್ದು ಯಾವ ಸಂಘರ್ಷಕ್ಕೆ ಇಳಿಯದಿರುವುದು ಒಂದು ವಿಶೇಷವೇ ಸರಿ. ಸ್ವಾತಂತ್ರ್ಯ ಸನ್ನಿವೇಶದ ಸಂದರ್ಭದಲ್ಲಿ ಇಲ್ಲಿ ಮೂರು ಧರ್ಮಗಳು ನಡೆದುಕೊಂಡ ರೀತಿ ಶ್ಲಾಘನೀಯವಾದದ್ದು. ಜನಮನದಲ್ಲಿ ವೀರಶೈವಧರ್ಮವು ಜನಾನುರಾಗಿಯಾಗಿದ್ದರೆ, ಶೈಕ್ಷಣಿಕ ಮತ್ತು ಆಡಳಿತಾತ್ಮಕ ವಿಷಯಗಳಲ್ಲಿ ಇಸ್ಲಾಂ ಧರ್ಮವು ಸಮಸ್ಥಾನವನ್ನು ಪಡೆದುಕೊಂಡಿತ್ತು. ಅಂತಿಮವಾಗಿ ಕ್ರೈಸ್ತಧರ್ಮದ ಸಾಮ್ರಾಜ್ಯಕ್ಕೆ ಈ ಪ್ರದೇಶವು ಒಳಗೊಂಡಿದ್ದರೂ ಯಾವ ಅಡ್ಡಿ ಆತಂಕಗಳಿಲ್ಲದೆ ಒಂದಕ್ಕೊಂದು ಸಮನ್ವಯಗೊಂಡು ಕಾಲವನ್ನು ಚರಿತ್ರೆಯ ಗರ್ಭದಲ್ಲಿ ಅಡಗಿಸಿಡಲು ಪ್ರಯತ್ನಪಟ್ಟಿವೆ. ಇಂತಹ ಧರ್ಮಸಮನ್ವಯತೆಯ ಪ್ರಯೋಗಶಾಲೆ ಈ ಪ್ರದೇಶವಾಗಿದೆ. ಇದು ಭಾರತದ ಇತರ ಪ್ರದೇಶಗಳಿಗೂ ಮಾದರಿಯಾಗಿದೆ ಎಂಬ ಮಾತು ಅತಿಶಯೋಕ್ತಿಯಲ್ಲ.

# ಅಧ್ಯಾಯ ೭

# ಸಾಮಾಜಿಕ-ಶೈಕ್ಷಣಿಕ-ಆರ್ಥಿಕ ಮತ್ತು ಆಡಳಿತಾತ್ಮಕ ಸ್ಥಿತಿಗತಿಗಳು

ಅಧ್ಯಾಯ ೭

# ಸಾಮಾಜಿಕ-ಶೈಕ್ಷಣಿಕ-ಆರ್ಥಿಕ
# ಮತ್ತು
# ಆಡಳಿತಾತ್ಮಕ ಸ್ಥಿತಿಗತಿಗಳು

ಕೊಪ್ಪಳ ಪ್ರದೇಶವು ಸಾಂಸ್ಕೃತಿಕವಾಗಿ ತನ್ನ ಹಿರಿಮೆಯನ್ನು ಕಾಪಾಡಿಕೊಂಡಿದೆ. ಚರಿತ್ರೆಯಾದ್ಯಂತ ಅಲ್ಲಿ ಜನಗಳ ಜೀವನಕ್ರಮವು ಸುಗಮವಾಗಿ ನಡೆದುಹೋಗಿದೆ. ಭವಿಷ್ಯದಲ್ಲೂ ಕೊಪ್ಪಳ ಪ್ರದೇಶವು ಪರಂಪರೆಯನ್ನು ಹಿಂದಿಟ್ಟುಕೊಂಡು ನೆಮ್ಮದಿಯ ಬದುಕನ್ನು ರೂಢಿಸಿಕೊಳ್ಳಲು ಪ್ರಯತ್ನಿಸುತ್ತಿದೆ. ಈ ಹಿನ್ನೆಲೆಯಲ್ಲಿ ಈ ಅಧ್ಯಯನವು ಅದಕ್ಕೆ ನೆರವಾಗಲೆಂಬ ಉದ್ದೇಶದಿಂದ ಪ್ರಕೃತ ಚರ್ಚೆಯನ್ನು ಆರಂಭಿಸಲಾಗಿದೆ. ಕೊಪ್ಪಳವು ಒಂದು ಧಾರ್ಮಿಕ ಕೇಂದ್ರಶಕ್ತಿಯಾಗಿ ಇತಿಹಾಸದುದ್ದಕ್ಕೂ ಮಹತ್ವದ ಪಾತ್ರವನ್ನು ವಹಿಸಿದೆ. ಇಂತಹ ಸಂದರ್ಭದಲ್ಲಿ ಅಲ್ಲಿನ ಸಾಮಾಜಿಕರ ಬದುಕು ಹೇಗಿದ್ದಿರಬಹುದು ಎಂಬುದು ಕುತೂಹಲಕಾರಿಯಾದ ಅಂಶ. ಪ್ರಾಗೈತಿಹಾಸಿಕ ಕಾಲಘಟ್ಟದಲ್ಲಿಯೇ

ಕೊಪ್ಪಳದಲ್ಲಿ ಸಾಮಾಜಿಕ ಸಂಘಟನೆಯಿತ್ತು ಎಂಬುದು ವೇದ್ಯ ಸಂಗತಿ. ಆ ಕಾಲಘಟ್ಟದಲ್ಲಿ ಅಲೆಮಾರಿ ಸ್ವಭಾವವನ್ನು ಹೊಂದಿದ್ದ ಮನುಷ್ಯ ಒಂದೆಡೆ ನೆಲೆನಿಂತು ಸಾಮಾಜಿಕವಾಗಿ ಬಾಳುವುದನ್ನು ಕಲಿತ. ಅವನ ಈ ನೆಲೆ ನಿಲ್ಲುವಿಕೆಯು ಒಂದು ಸಮಾಜದ ಆರಂಭದ ಸ್ಥಿತಿಯೆನ್ನಬಹುದು. ಅನಂತರ ರಾಜಕೀಯ ಸಂಘಟನೆಗಳು ತಲೆದೋರಿದಮೇಲೆ ಸಾಮಾಜಿಕ ಬದುಕಿನಲ್ಲಿ ಹಲವು ಬದಲಾವಣೆಗಳು ಉಂಟಾಗುತ್ತಾ ಬಂದವು. ಮೌರ್ಯರ ಕಾಲದಲ್ಲಿ ಕೊಪ್ಪಳವು ಒಂದು ಧಾರ್ಮಿಕ ಕೇಂದ್ರವಾಗಿ ಬೆಳವಣಿಗೆಯಾದ ಹಿನ್ನೆಲೆಯಲ್ಲಿ ಅಲ್ಲಿನ ಬದುಕು ಬದಲಾಯಿತು. ಜೊತೆಜೊತೆಗೆ ಶೈಕ್ಷಣಿಕ ಮತ್ತು ಆರ್ಥಿಕ ಚಟುವಟಿಕೆಗಳು ವಿಭಿನ್ನ ಸ್ವರೂಪವನ್ನು ಹೊಂದಿದವು. ಕದಂಬರ ಕಾಲದಲ್ಲಾಗಲೇ ಕೊಪ್ಪಳವು ನಗರೀಕರಣ ಪ್ರಕ್ರಿಯೆಗೆ ಒಳಪಟ್ಟಿತ್ತು. ಚಾಲುಕ್ಯ ಗಂಗ ವಂಶಜರ ಆಳ್ವಿಕೆಯಲ್ಲಿ ಕೊಪ್ಪಳವು ಪಟ್ಟಣ ಸಂಸ್ಕೃತಿಯನ್ನು ಪಡೆದು ಕೊಂಡಿತು. ವಿಜಯನಗರದರಸರ ಮತ್ತು ಬಹಮನಿ ಸುಲ್ತಾನರಲ್ಲಿ ರಾಜಧಾನಿಗೆ ನಿಕಟವಾದ ಸಂಪರ್ಕವನ್ನು ಹೊಂದಿದ್ದು ಹಲವು ಸಂದರ್ಭಗಳಲ್ಲಿ ಅದು ಸಾಮ್ರಾಜ್ಯಗಳ ಸಾಂಸ್ಕೃತಿಕ ರಾಜಧಾನಿಯಾಗಿ ಗುರುತಿಸಿಕೊಂಡಿತು. ಈ ಹಿನ್ನೆಲೆಯಲ್ಲಿ ಜನರ ಸಾಮಾಜಿಕ ಬದುಕು ಶಾಂತಿ ನೆಮ್ಮದಿ, ಸಹಕಾರ ತತ್ವಗಳ ಆಧಾರದಿಂದ ಅರ್ಥಪೂರ್ಣವಾಗಿತ್ತು ಎನ್ನುವುದನ್ನು ಚರ್ಚಿಸಿಕೊಳ್ಳಬಹುದು.

## ೭. ೧. ಸಾಮಾಜಿಕ ಜೀವನ

ಸಾಮಾಜಿಕ ಬದುಕು ಪ್ರಾಗೈತಿಹಾಸಿಕ ಕಾಲದಲ್ಲಿ ಕೊಪ್ಪಳದಲ್ಲಿ ಸಮಾಜಸಂಸ್ಕೃತಿಯನ್ನು ಕಾಣುತ್ತೇವೆ. ಕುಟುಂಬವು ಸಮಾಜದ ಒಂದು ಚಿಕ್ಕಘಟಕ. ಈ ಘಟಕದಲ್ಲಿ ಅವಿಭಾಜಿತ ಕುಟುಂಬಗಳು ಕಂಡುಬರುವುದರಿಂದ ಸಮಾಜದ ಶಕ್ತಿಗಳಾಗಿ ಅವು ಬೆಳೆಯತೊಡಗಿದವು. ಕೂಡಿ ಬಾಳಿದರೆ ಸ್ವರ್ಗಸುಖ ಎಂಬ ಮಾತೊಂದಿದೆ. ಈ ಮಾತಿನ ತತ್ವವನ್ನರಿತುಕೊಂಡು ಕುಟುಂಬಗಳಲ್ಲಿ ಐಕ್ಯಮತ್ಯವು ಹುಟ್ಟಿ ಸಮಾಜವು ಸಂರಚನೆಯಾಗುತ್ತಿತ್ತು. ಇಂತಹ ಪರಿಸರದಲ್ಲಿ ಸಾಮಾಜಿಕ ಜೀವನವನ್ನು ಸಹಕಾರದ ಆಧಾರದ ಮೇಲೆ ಕಟ್ಟಲು ಪ್ರಭಾವಶಾಲಿಯಾದ ಪ್ರಯತ್ನಗಳು ಕೊಪ್ಪಳ ಪ್ರದೇಶದಲ್ಲಿ ನಡೆದವು. ಅದರ ಮಹತ್ವವನ್ನರಿಯಬೇಕಾದರೆ ಅಲ್ಲಿನ ಸಾಮಾಜಿಕ ಜೀವನದ ಸ್ವರೂಪವನ್ನು ತಿಳಿಯುವುದು ಆವಶ್ಯಕ.

ಆದರೆ ಇದನ್ನು ತಿಳಿಯುವುದಕ್ಕೆ ಇರುವ ಆಧಾರಗಳು ಕಡಿಮೆ. ಈ ಆಧಾರಗಳನ್ನು ಹುಡುಕಿಕೊಂಡು ಹೋದಾಗ ನಮಗೆ ಸಿಗುವುದು ಧರ್ಮಶಾಸ್ತ್ರಗಳು, ಅದರ ಜೊತೆಗೆ ಶಾಸನದ ಆಧಾರಗಳು ಮತ್ತು ವಿದೇಶೀಯರು ಭೇಟಿ ಕೊಟ್ಟ ಬರವಣಿಗೆಗಳು. ಇವೆಲ್ಲವನ್ನೂ ಅವಲಂಬಿಸಿ ಜನಜೀವನದ ಸ್ವರೂಪವನ್ನು ಕುರಿತು ಒಂದೆರಡು ಮಾತುಗಳನ್ನು ಹೇಳಬಹುದು. ವ್ಯವಸಾಯವೇ ಇಲ್ಲಿನ ಜನರ ಮುಖ್ಯ ಕಸುಬಾಗಿತ್ತು. ಅದಕ್ಕೆ ಸಂಬಂಧಿಸಿದ ಇತರ ಕಸುಬುಗಳು ಅಂದರೆ ಬಡಗಿ, ಕಮ್ಮಾರ, ಚಮ್ಮಾರ, ಕುಂಬಾರ ಮೊದಲಾದವುಗಳು ಬೆಳೆದಿದ್ದವು. ಕೊಪ್ಪಳವು ಪ್ರಾಚೀನ ಕಾಲದಲ್ಲಿಯೇ ಈ ಅಂಶಗಲ್ಲಿ ಸ್ವಯಂ ಪೂರ್ಣವಾಗಿತ್ತು ಎಂಬುದನ್ನು ಕಂಡುಕೊಳ್ಳಬಹುದು. ಈ ಎಲ್ಲಾ ಕಸುಬುಗಳು ಸಾಮಾನ್ಯವಾಗಿ ವಂಶಪಾರಂಪರ್ಯವಾಗಿ ಬರುತ್ತಿದ್ದವು. ವಿವಿಧ ಧರ್ಮಗಳ ಹಿನ್ನೆಲೆಯಲ್ಲಿ ಹಬ್ಬ, ಜಾತ್ರೆಗಳು, ಧಾರ್ಮಿಕ ಉತ್ಸವಗಳು ಸಮಾಜದಲ್ಲಿ ನಡೆಯುತ್ತಿದ್ದವು. ಮನರಂಜನೆ ಮತ್ತು ಧರ್ಮಜಾಗೃತಿಗಳೆರಡಕ್ಕೂ ಅವು ಕಾರಣವಾಗುತ್ತಿದ್ದವು. ಶೆಟ್ಟಿ, ಬಣಗಾರ ಮೊದಲಾದ ಹೆಸರುಗಳಿಂದ ಕೂಡಿದ ವ್ಯಾಪಾರಿಗಳು ಜನರಿಗೆ ಅವಶ್ಯಕವಾದ ಸಾಮಾನುಗಳನ್ನು ಒದಗಿಸುತ್ತಿದ್ದರು. ಪರಸ್ಪರ ಸಹಕಾರ ತತ್ವದ ಆಧಾರದಿಂದ ಜೀವನದ ಅವಶ್ಯಕತೆಗಳ ಪೂರೈಕೆ ನಡೆಯುತ್ತಿತ್ತು ಮತ್ತು ಸ್ವಯಂರಕ್ಷಣೆಯ ಆತ್ಮವಿಶ್ವಾಸ ಈ ಜನರಲ್ಲಿ ಮೂಡಿನಿಂತಿರುವುದು ಶಾಸನಗಳಿಂದ ತಿಳಿದುಬರುತ್ತದೆ.

ವಿದ್ಯಾಭ್ಯಾಸದಲ್ಲಿ ಜನರಿಗೆ ಆಸಕ್ತಿಯಿತ್ತು. ಆದರೆ ಸಮಾಜದಲ್ಲಿ ಎಲ್ಲರಿಗೂ ವಿದ್ಯಾಭ್ಯಾಸ ಅವಶ್ಯಕವೆಂಬ ಭಾವನೆ ಅಷ್ಟಾಗಿದ್ದಂತೆ ತೋರುವುದಿಲ್ಲ. ಬ್ರಾಹ್ಮಣರು ಮತ್ತು ಕೆಲವು ವೇಳೆ ಕ್ಷತ್ರಿಯರಿಗೆ ಮಾತ್ರ ಅಕ್ಷರ ವಿದ್ಯೆ ಅಗತ್ಯವಿತ್ತೆಂದು ಕಾಣಿಸುತ್ತದೆ. ಬಹುತೇಕ ಸಮಾಜದಲ್ಲಿ ತಮ್ಮ ತಮ್ಮ ಉದ್ಯೋಗಗಳ ವಿದ್ಯೆಯೇ ಸಾಕೆಂದು ನಂಬಿದ್ದರು. ಕಾಲಕಾಲಕ್ಕೆ ಕೊಪ್ಪಳಕ್ಕೆ ಬಂದು ನೆಲೆಸಿದ ಮತ್ತು ಮೊದಲಿನಿಂದಲೂ ಇಲ್ಲಿಯೇ ಇದ್ದ ಆದಿನಿವಾಸಿಗಳ ಅನೇಕ ಜನಾಂಗಗಳು ಇಲ್ಲಿ ಸಮಾವೇಶಗೊಂಡಿದ್ದವು.

ರಾಷ್ಟ್ರಕೂಟರ ಕಾಲದಲ್ಲಿ ಬಂದ ಕೆಲವು ವಿದೇಶೀ ಪ್ರವಾಸಿಗರು ಈ ಭಾಗಕ್ಕೆ ಭೇಟಿ ಕೊಟ್ಟಿರಬೇಕು. ರಾಷ್ಟ್ರಕೂಟರ ರಾಜ್ಯಕ್ಕೆ ಭೇಟಿ ನೀಡಿದ ಹಲವು ವಿದೇಶೀ ಯಾತ್ರಿಕರು ತಕ್ಕಮಟ್ಟಿಗೆ ಸಾಮಾಜಿಕ ವಿವರಗಳನ್ನು ಕೊಡುತ್ತಾರೆ. ಅವರು ಗುರುತಿಸುವ ಬಹಳ ಮಹತ್ವದ ಅಂಶವೆಂದರೆ ಸಮಾಜದಲ್ಲಿ ನೆಲೆಗೊಂಡಿದ್ದ ಬ್ರಾಹ್ಮಣ ಕ್ಷತ್ರಿಯ, ವೈಶ್ಯ ಶೂದ್ರ ಎಂಬ ವರ್ಣವ್ಯವಸ್ಥೆ. ಹ್ಯೂಯೆನ್ ತ್ಸಾಂಗ್‌ನು ಕೊಪ್ಪಳವನ್ನು ಕಂಕೋಲಪುರವೆಂದು ಕರೆದಿರುವನು. ಅಲ್ಬರೂನಿ ಎಂಬ ಪರ್ಶಿಯನ್ ಯಾತ್ರಿಕನು ಈ ಭಾಗಕ್ಕೆ ಭೇಟಿ ಕೊಟ್ಟಂತೆ ಕಾಣುತ್ತದೆ. ಅವನು ಇಲ್ಲಿ ಹದಿನಾರು ಜಾತಿಗಳು ನೆಲೆಸಿದ್ದವೆಂದು ಹೇಳುತ್ತಾನೆ. ಅದೇನೇ ಇದ್ದರೂ ಈ ವರ್ಣವ್ಯವಸ್ಥೆಯಲ್ಲಿ ಬ್ರಾಹ್ಮಣರು ಮತ್ತು ಕ್ಷತ್ರಿಯರಿಗೆ ಹೆಚ್ಚು ಅಧಿಕಾರಗಳು ಇದ್ದವೆಂದು ತೋರುತ್ತದೆ. ವೇದಾಧ್ಯಯನ ಮತ್ತು ಅದರ ಕರ್ಮಗಳ ನಿರ್ವಹಣೆಗಳು ಬ್ರಾಹ್ಮಣರಿಗೆ ಸೇರಿದ್ದವು. ರಾಜ್ಯಾಧಿಕಾರ ಮತ್ತು ಯುದ್ಧದಂತಹ ಕಠಿಣ ಕೆಲಸಗಳು ಕ್ಷತ್ರಿಯನವಾಗಿದ್ದವು. ವ್ಯವಸಾಯ, ವ್ಯಾಪಾರದಂತಹ ವಿಷಯಗಳು ವೈಶ್ಯನಿಗೆ ಸೇರಿದ್ದವು. ಶೂದ್ರರು ಅತ್ಯಂತ ಕನಿಷ್ಟ ಮಟ್ಟದ ಕೆಲಸಗಳನ್ನು ನಿರ್ವಹಿಸುತ್ತಿದ್ದರು. ರಾಷ್ಟ್ರಕೂಟರ ಕಾಲಕ್ಕಿಂತ ಬಹು ಹಿಂದಿನಿಂದಲೇ ಈ ಜಾತಿಪದ್ಧತಿ ಬೆಳೆದು ಬಂದಿರಬಹುದೆಂದು ತೋರುತ್ತದೆ.

ವ್ಯವಸ್ಥಿತವಾದ ಕೌಟುಂಬಿಕ ಜೀವನ ಕೊಪ್ಪಳದ ಇತಿಹಾಸದ ಪ್ರಾರಂಭದಿಂದಲೂ ಕಂಡುಬರುತ್ತದೆ. ತಂದೆ-ತಾಯಿ ಬಂಧುಬಳಗದವರೆಲ್ಲರೂ ಕೂಡಿ ಬದುಕುವ ಒಟ್ಟು ಕುಟುಂಬಗಳೇ ಹೆಚ್ಚು. (Joint family) ಆದರೆ ಅಣ್ಣ ತಮ್ಮಂದಿರು ಬೇರೆ ಬೇರೆಯಾಗಿ ಪಿತ್ರಾರ್ಜಿತ ಆಸ್ತಿಯನ್ನು ಹಂಚಿಕೊಳ್ಳುತ್ತಿದ್ದರು. ಚಿಕ್ಕ ಬಾಗೇವಾಡಿ, ಬೆಂಡಿಗೇರಿ ಮೊದಲಾದ ಶಾಸನಗಳಲ್ಲಿ ಅಣ್ಣ ತಮ್ಮಂದಿರು ಆಸ್ತಿಯನ್ನು ವಿಭಾಗಿಸಿ ಹಂಚಿಕೊಂಡಿದ್ದರ ಬಗ್ಗೆ ಉಲ್ಲೇಖಗಳು ಸಿಗುತ್ತವೆ. ಉತ್ತರಾಧಿಕಾರಿಗಳಾಗಲಿ, ಹತ್ತಿರದ ಬಂಧುಗಳಾಗಲೀ ಇಲ್ಲದವನು ಸತ್ತರೆ ಅವನ ಆಸ್ತಿ ದೇವಾದಾಯವಾಗಿ ಸೇರಿ ಊರೊಟ್ಟಿನ ಧರ್ಮಕಾರ್ಯಕ್ಕೆ ವಿನಿಯೋಗವಾಗುತ್ತಿತ್ತು. ಆಸ್ತಿಯನ್ನು ಪಾಲುಗೊಳ್ಳುವುದರಲ್ಲಿ ಹೆಣ್ಣು ಮಕ್ಕಳಿಗೂ ಅಧಿಕಾರವಿತ್ತೆಂದು ಲಕ್ಕುಂಡಿ ಶಾಸನವೊಂದು ತಿಳಿಸುತ್ತದೆ. ವಿಧವೆಯರು ಹಕ್ಕುದಾರರಾಗಿದ್ದರೂ ಸ್ತ್ರೀ

ಧನ ಎಂಬುದರ ಉಲ್ಲೇಖ ಅಲ್ಲಲ್ಲಿ ಸಿಗುತ್ತದೆ. ಶಾಸನಗಳ ಮಾಹಿತಿಯ ಪ್ರಕಾರ ಮದುವೆ ಸಂಸ್ಕಾರ ಬಹಳ ಚಿಕ್ಕವಯಸ್ಸಿನಲ್ಲಿಯೇ ನಡೆಯುತ್ತಿತ್ತು. ಮದುವೆಯಾಗುವಾಗ ಹುಡುಗನಿಗೆ ಹದಿನಾರು ವರ್ಷ ಹುಡುಗಿಗೆ ೧೨ ವರ್ಷಕ್ಕಿಂತಲೂ ಹೆಚ್ಚು ವಯಸ್ಸಾಗಿರುತ್ತಿರಲಿಲ್ಲ. ಕೊನೆಯ ಪಕ್ಷ ಬ್ರಾಹ್ಮಣರಲ್ಲಿಯಂತೂ ಇದು ಮೀರಲಾಗದ ನಿಯಮವಾಗಿತ್ತು. ಸತಿ ಅಥವಾ ಸಹಗಮನ ಪದ್ಧತಿಯ ಬಗೆಗೆ ಕೊಪ್ಪಳದಲ್ಲಿ ತಿಳಿದುಬಂದಿಲ್ಲ. ವಿಧವೆಯರ ತಲೆಯನ್ನು ಬೋಳಿಸುವ ಪದ್ಧತಿಯು ಬ್ರಾಹ್ಮಣರಲ್ಲಿ ರಾಷ್ಟ್ರಕೂಟರ ಕಾಲಕ್ಕಾಗಲೇ ಬಂದಿದ್ದಿತು. ವಿಧವೆಯರ ಜೀವನ ಕ್ರಮವನ್ನು ಅತಿವಿವರವಾಗಿ ನಿರೂಪಿಸುವ ಸ್ಮೃತಿಗಳು ಕೂಡಾ ತಲೆಯ ಕೂದಲನ್ನು ತೆಗೆಸಬೇಕೆಂಬ ವಿಧಿಯನ್ನು ಹೇಳುವುದಿಲ್ಲ. ಚಾಲುಕ್ಯರ ಯುಗದಲ್ಲಿದ್ದಂತೆ ಹೊಯ್ಸಳರ ಕಾಲದಲ್ಲಿ ಸ್ತ್ರೀಯರಿಗೆ ಕೆಲವು ರಂಗಗಳಲ್ಲಿ ವಿಶೇಷ ಅವಕಾಶಗಳಿದ್ದವು. ಕರಕುಶಲತೆ ಮೊದಲಾದವುಗಳಲ್ಲಿ ಅವರ ಕೈ ಮೇಲಾಗಿತ್ತು. ಚಾಲುಕ್ಯರ ಕಾಲದಲ್ಲಿ ರಾಜಕೀಯದಲ್ಲಿಯೂ ಸ್ತ್ರೀಯರು ಪ್ರಧಾನ ಪಾತ್ರವನ್ನುವಹಿಸುತ್ತಿದ್ದರು. ವಿಜಯಾಂಬಿಕೆ ರಾಜ್ಯದ ಒಂದು ವಿಭಾಗವನ್ನು ಆಳುತ್ತಾ ತಾನೇ ಸ್ವತಂತ್ರವಾಗಿ ಶಾಸನಗಳನ್ನು ಬರೆಯಿಸಿರುವುದು ಕಂಡುಬರುತ್ತದೆ. ಆಕೆ ಸ್ವತಃ ಕವಿಯತ್ರಿಯಾಗಿದ್ದಳು. ಕೊಪ್ಪಳದ ಅಗ್ರಹಾರದಲ್ಲಿ ಕೆಲ ದಿನಗಳು ತಂಗಿದ್ದಳು ಎಂಬ ಅಂಶವು ಕೊಪ್ಪಳದ ಶಾಸನಗಳಲ್ಲಿ ಸಿಗುತ್ತದೆ. ದೇವಾಲಯಗಳ ನಿರ್ಮಾಣ, ನಾಟ್ಯ ಸಂಗೀತ, ಸಾಹಿತ್ಯ ಮೊದಲಾದ ಕಲಾರಂಗಗಳಲ್ಲಿ ಸ್ತ್ರೀಯರ ಪಾತ್ರ ಸಮಸಮವಾಗಿ ಕಂಡುಬರುತ್ತದೆ. ಬಾದಾಮಿ ಚಾಲುಕ್ಯರ ಲೋಕ ಮಹಾದೇವಿ ಮತ್ತೆ ತ್ರೈಲೋಕ್ಯ ಮಹಾದೇವಿ ಇವರು ಪಟ್ಟದ ಕಲ್ಲಿನಲ್ಲಿ ಕಟ್ಟಿಸಿದ ದೇವಾಲಯಗಳನ್ನು ನೆನಪಿಗೆ ತಂದುಕೊಳ್ಳಬಹುದು. ಹಾಗೆಯೇ ಅಕ್ಕಮಹಾದೇವಿ, ಅತ್ತಿಮಬ್ಬೆ, ಗಂಗಾಂಬಿಕೆ ಈ ಮೊದಲಾದ ಹೆಸರುಗಳು ಇಲ್ಲಿ ಸುಳಿಯುತ್ತವೆ. ವಿಷ್ಣುವರ್ಧನನ ರಾಣಿ ಶಾಂತಲೆಯನ್ನು ಈ ಸಂದರ್ಭದಲ್ಲಿ ಮರೆಯುವುದು ಸಾಧ್ಯವಿಲ್ಲ. ಒಂದನೇ ಬಲ್ಲಾಳನ ಬಳಿಯಲ್ಲಿ ದಂಡನಾಯಕನಾಗಿದ್ದ ಮರಿಯಾನೆಯು ಸಕಲ ಕಲೆಗಳಲ್ಲಿ ಪರಿಣಿತರಾಗಿದ್ದು ತನ್ನ ಮೂವರು ಮಕ್ಕಳನ್ನು ಬಲ್ಲಾಳನಿಗೆ ಮದುವೆ ಮಾಡಿಕೊಟ್ಟನು. ಗಂಗರಾಜ ಪೆರುಮಾಡಿ ನರ್ತನದಲ್ಲಿ ಪ್ರವೀಣಳಾದ ಮರಿಯಾನೆಯ ಬಲಿಚಾದೇವಿಯನ್ನು ಮದುವೆಯಾದನು. ಆ ಬಲಿಚಾದೇವಿ ಕೊಪ್ಪಳದಲ್ಲಿ ಬಂದು

ನಿಶಿಧಿಯಾಗಿರುವ ಅಂಶವು ಕೊಪ್ಪಳದಲ್ಲಿ ದೊರೆತ ನಿಶಿಧಿಕಲ್ಲುಗಳಿಂದ ತಿಳಿದುಬರುತ್ತದೆ. 'ಪಾತ್ರೆಜಗದಲೆ' ಎಂಬ ಬಿರುದನ್ನು ಅವಳು ಪಡೆದ ಬಗ್ಗೆ ಉಲ್ಲೇಖವಿದೆ. ರಾಷ್ಟ್ರಕೂಟರ ಕಾಲದ ದೇವದಾಸಿ ಪದ್ಧತಿ ಹೊಯ್ಸಳರ ಕಾಲದಲ್ಲಿ ಕಂಡುಬರುವುದಿಲ್ಲ. ಆದರೆ ವಿಜಯನಗರ ಕಾಲದಲ್ಲಿ ವೇಶ್ಯಾಪದ್ಧತಿಯು ಒಂದು ವ್ಯವಸ್ಥಿತ ರೂಪವಾಗಿ ಮಾರ್ಪಾಡಾಗಿದೆ. ಅನೇಕ ದೇವಾಲಯಗಳಲ್ಲಿ ಅಂಗ ಮತ್ತು ರಂಗಭೋಗಕ್ಕೆ ಇವರು ನೇಮಕಗೊಳ್ಳುತ್ತಿದ್ದರೆಂದು ವಿಜಯನಗರದ ಶಾಸನವು ತಿಳಿಸುತ್ತದೆ.

ವಿಜಯನಗರ ಕಾಲದಲ್ಲಿಯೂ ಸಾಮಾಜಿಕ ಜೀವನ ಇದಕ್ಕಿಂತ ಭಿನ್ನವಾಗಿರಲಿಲ್ಲ. ಅವರ ಸಮಾಜದಲ್ಲಿ ಜಾತಿಪದ್ಧತಿ ಇನ್ನೂ ಜಟಿಲವಾಗಿ ಬೆಳೆಯುತ್ತಾ ಹೋಯಿತು. ಚತುರ್ವರ್ಣಗಳಲ್ಲದೆ ಅವುಗಳಲ್ಲಿ ಬೆಳೆದಿದ್ದ ಅಂತರ್ವಿಭಾಗಗಳು ಇನ್ನೂ ಹೆಚ್ಚಿದವು. ಕಸುಬಿಗನುಗುಣವಾಗಿ ಜಾತಿಗಳು ಉಂಟಾಗಿದ್ದವು. ಮತ್ತೆ ಅವುಗಳಲ್ಲಿ ಉಪಜಾತಿಗಳೂ ಏರ್ಪಟ್ಟಿದ್ದವು. ಕಲ್ಯಾಣದ ಚಳುವಳಿಯು ಸಮಾಜದಲ್ಲಿ ಹಲವು ಬದಲಾವಣೆಗಳನ್ನು ತರಲು ಪ್ರಯತ್ನಿಸಿತು. ಜಾತಿಜಾತಿಗಳ ನಡುವಿನ ಗೋಡೆಯನ್ನು ಕೆಡವಲು ಕರೆಕೊಟ್ಟಿತು. ಹರಳಯ್ಯನ ಮಗ ಮತ್ತು ಮಧುವರಸರ ಮಗಳ ವಿವಾಹದ ಸಂದರ್ಭದಲ್ಲಿ ಕಲ್ಯಾಣದ ಕ್ರಾಂತಿ ಸಾಮಾಜಿಕ ಸಮನ್ವಯತೆಯನ್ನು ಧಿಕ್ಕರಿಸಿ ನಡೆಯಿತು. ಕಲ್ಯಾಣದ ಕ್ರಾಂತಿ ವಿಫಲವಾಯಿತಾದರೂ ಅದರ ಪರಿಣಾಮಗಳು ಕರ್ನಾಟಕದ ಎಲ್ಲೆಡೆ ಉಂಟಾದವು. ಸಮಾಜದ ಎಲ್ಲ ಜಾತಿ ಉಪಜಾತಿಗಳನ್ನು ವೀರಶೈವ ಎಂಬ ಏಕೀಕೃತ ಪ್ರಣಾಳಿಯಲ್ಲಿ ಹಿಡಿದಿಡುವಲ್ಲಿ ಕಲ್ಯಾಣದ ಚಳುವಳಿಯು ಮಹತ್ವಪೂರ್ಣ ಸಾಧನೆಯನ್ನು ಮಾಡಿತು.

ಕೊಲುವವನೇ ಮಾದಿಗ ಹೊಲಸು ತಿಂಬುವನೇ ಹೊಲೆಯ
ಕುಲವೇನು ಆವಂದಿರ ಕುಲವೇನು ಸಕಲ ಜೀವಾತ್ಮರಿಗೆ
ಲೇಸನು ಬಯಸುವ ನಮ್ಮ ಕೂಡಲ ಸಂಗನ ಶರಣರೆಲ್ಲ ಕುಲಜರು॥

ಎಂಬ ಬಸವಣ್ಣನವರ ಘೋಷಣೆಯು ಕೊಪ್ಪಳದ ಪ್ರದೇಶಕ್ಕೂ ಬಂದು ಮುಟ್ಟಿತು. ಆದುದರಿಂದ ಅಲ್ಲಿ ಸಾಮಾಜಿಕ ಬದಲಾವಣೆಗಳು ಕಾಣತೊಡಗಿದವು. ಷಡ್ದರ್ಶನಗಳನ್ನು ಹಿಂದಿಕ್ಕಿ

ಎಲ್ಲರಿಗೂ ಅಧ್ಯಾತ್ಮದ ಬೆಳಕು ಶರಣನೆಂಬ ಪರಿಕಲ್ಪನೆಯನ್ನು ರೂಢಿಸಿಕೊಂಡಿತು. ಮಾದಾರ ಚನ್ನಯ್ಯನ ಮಾತಿನಲ್ಲಿಯೇ ಹೇಳುವುದಾದರೆ

ಸಾಂಖ್ಯ ಶ್ವಪಚ, ಅಗಸ್ತ್ಯ ಕಬ್ಬಿಲ ದುರ್ವಾಸ ಮಚ್ಚಿಗ
ದಧೀಚಿ ಕೀಲಿಗ ಕಶ್ಯಪ ಕಮ್ಮಾರ ರೋಮಜ ಕಂಚುಗಾರ
ಕೌಂಡಿಲ್ಯ ನಾವಿಂದ ಎಂದುದನರಿಯದೆ
ಮತ್ತೆ ಕುಲವುಂಟೆಂದು ಛಲಕ್ಕೆ ಹೋರಲೇತಕ್ಕೆ?

ಎಂಬ ಸತ್ಯವನ್ನು ಬಯಲಿಗೆಳೆದು ಸಮಾಜದ ಮುಂದಿಟ್ಟರು. ಇದರಿಂದಾಗಿ ಸಮಾಜದ ವಿವಿಧ ಜಾತಿ, ವರ್ಣಗಳು ತನ್ನಿಂತಾನೇ ಹೇಳ ಹೆಸರಿಲ್ಲದೆ ಹೊರಟು ಹೋಗಿ ವೀರಶೈವವೆಂಬ ಎಲ್ಲ ಜಾತಿಗಳ ಸಂಗಮದ ಒಂದು ಪ್ರಣಾಳಿಯನ್ನು ಪಟ್ಟಭದ್ರಗೊಳಿಸತೊಡಗಿದವು. ಅಂತಿಮವಾಗಿ ವಚನ ಚಳುವಳಿಯ ಉದ್ದೇಶ ಸಾಮಾಜಿಕ ಪರಿವರ್ತನೆಯೇ ಆಗಿದೆ. ಅದಕ್ಕೆ ಅವರು ಬಳಸಿಕೊಂಡಿದ್ದು ಅಧ್ಯಾತ್ಮದ ವೇದಿಕೆ, ಹೇಳಿದ್ದು ಅನುಭಾವತತ್ವ, ಘೋಷಿಸಿದ್ದು ಈ ತೆರನಾದ ಸಂದೇಶವನ್ನು.

ಕಳಬೇಡ ಕೊಲಬೇಡ ಹುಸಿಯನುಡಿಯಲುಬೇಡ
ಮುನಿಯಬೇಡ ಅಸಹ್ಯಪಡಬೇಡ ತನ್ನ ಬಣ್ಣಿಸಬೇಡ
ಇದಿರು ಹಳಿಯಲುಬೇಡ ಇದೇ ಅಂತರಂಗ ಶುದ್ಧಿ
ಇದೇ ಬಹಿರಂಗಶುದ್ಧಿ ಇದೇ ನಮ್ಮ ಕೂಡಲಸಂಗಮದೇವನೊಲಿಸುವ ಪರಿ

ಈ ಮಾತುಗಳು ಸಾಮಾಜಿಕ ಪರಿವರ್ತನೆಯ ಮೂಲಸೆಲೆಗಳಾದವು. ಇಡೀ ಉತ್ತರ ಕರ್ನಾಟಕ ಒಂದು ಕುಟುಂಬವೆನ್ನುವಂತೆ ಭಾವಿಸಲಾಯಿತು. ಎಲ್ಲರೂ ಕಲ್ಯಾಣದ ಕಹಳೆಯ ಕೂಗಿಗೆ ಓಗೊಟ್ಟರು. ಸುಸಂಸ್ಕೃತ ವ್ಯಕ್ತಿಯ ನೈತಿಕ ಜೀವನದ ಸಾರವನ್ನು ಈ ವಚನಗಳು ಜನಮನದಲ್ಲಿ ಹೇಳತೊಡಗಿದವು. ಈ ಹಿನ್ನೆಲೆಯಲ್ಲಿ ಎಲ್ಲ ಜಾತಿಗಳ ಏಕೀಕರಣ ತುಸುಮಟ್ಟಿಗೆ ಸಾಧ್ಯವಾಯಿತು. ಆದರೆ ವಿಜಯನಗರದ ಅರಸರ ಕಾಲದಲ್ಲಿ ವೈದಿಕ ಧರ್ಮ ಮತ್ತೆ ರಾಜಾಶ್ರಯವನ್ನು ಪಡೆದುಕೊಳ್ಳುತ್ತಲೆ

ಮೂಲ ಜಾತಿಗಳು ಮತ್ತೆ ನೆಲೆಗೊಳ್ಳಲಾರಂಭಿಸಿದವು. ಹೀಗಿರುವುದರಿಂದ ಸಾಮಾಜಿಕ ಜೀವನವು ಯಾವುದೇ ಸಿದ್ಧಾಂತಗಳ ಆಧಾರಗಳಿಲ್ಲದೆ ಸ್ವೇಚ್ಛೆಯಾಗಿ ಬೆಳೆಯತೊಡಗಿತು. ಕೊಪ್ಪಳ ಜಿಲ್ಲೆಯ ಶಾಸನಗಳನ್ನು ಗಮನಿಸಿದಾಗ ಹಲವು ಜಾತಿಗಳ ಬಗೆಗೆ ನೇರ ಉಲ್ಲೇಖಗಳು ಸಿಗುತ್ತವೆ. ಕಲ್ಲೂರ ಶಾಸನದಲ್ಲಿ ಪಂಚಮವರ್ಗವೆಂಬು ಮತ್ತೊಂದು ವರ್ಣದ ಉಲ್ಲೇಖವಿದೆ. ಅವರ ಜಾತಿಯ ರೀತಿ-ರಿವಾಜು ಹಾಗೂ ಇತರ ಜಾತಿಗಳಿಗಿಂತ ಮೇಲೆಂಬ ಅಂಶವನ್ನು ಸಾಬೀತುಪಡಿಸುವ ಎರಡು ಜಯರೇಖೆಗಳು ದೊರೆತಿವೆ. ಆನೆಗೊಂದಿಯಲ್ಲಿ ದೊರೆತಿರುವ ತಾಮ್ರಶಾಸನದಲ್ಲಿ ಕುಂಬಾರರಿಗೆ ಆ ವೃತ್ತಿ ಬಂದ ರೀತಿಯ ವಿವರ ಹೀಗಿದೆ: ತಾವು ಈಗ ಮಾಡುತ್ತಿರುವ ಮಣ್ಣಿನ ಪಾತ್ರೆಗಳು ಗಿರಿಜಾ ಕಲ್ಯಾಣಕ್ಕಾಗಿ ಸೃಷ್ಟಿಯಾದವೆಂಬ ಹೆಗ್ಗಳಿಕೆಯನ್ನು ಪ್ರಸ್ತಾಪಿಸುತ್ತದೆ. ಇವರಿಗೆ ಶಿವನೇ ಸಾಲೆಸಾಸಿರ್ವರು ಎಂಬ ಬಿರುದನ್ನು ದಯಪಾಲಿಸಿದ್ದಾನಂತೆ. ಕುಂಬಾರರ ಕುಲವು ಗಿರಿರಾಜ ಕುಲವೆಂದು ಶಿವನು ಇವರಿಗೆ ಭಾವನಾಗಬೇಕೆಂದು ತಿಳಿಸುತ್ತದೆ. ಇದಲ್ಲದೆ ಹದಿನೆಂಟು ಕೇಣಿಗಳ ಪಟ್ಟಿಯನ್ನು ಈ ಶಾಸನ ನೀಡುತ್ತದೆ. ಈ ಕೇಣಿಗಳಲ್ಲಿ ಮೂವತ್ತಾರ್ಚ್ಛಾಸಿರದ ಕೇಣಿಯೇ ಮೇಲೆಂದು ತಿಳಿದುಬರುತ್ತದೆ. ಬಹುಶಃ ಈ ಶಾಸನ ರಚನೆಯಾದದ್ದು ನೊಳಂಬವಾಡಿ ೩೬೦೦೦ ಪ್ರದೇಶದಲ್ಲಿ. ಗಿಣಿಗೇರಾ ಶಾಸನವು ಮಹಾಮಂಡಳೇಶ್ವರ ಆನೆಗೊಂದಿಯ ಬಂಗಾರು ತಿಮ್ಮರಾಜನ್ನು ಹೆಸರಿಸುತ್ತದೆ. ಇದು ಪಾಂಚಾಳರ ಜಾತಿಗೆ ಸೇರಿದ ಶಾಸನವಾಗಿದೆ. ನಾಯಿಂದರಿಗೆ ಸಂಬಂಧಿಸಿದ ನಾಲ್ಕು ಶಾಸನಗಳು ಕೊಪ್ಪಳ ಪರಿಸರದಲ್ಲಿ ದೊರೆತಿವೆ. ಈಗಾಗಲೇ ಬೇರೆ ಶಾಸನಗಳಿಂದ ತಿಳಿದುಬರುವಂತೆ ಕ್ರಿ.ಶ. ೧೫೪೭ ರಿಂದ ಕ್ರಿ.ಶ. ೧೫೫೧ರ ವರೆಗಿನ ಅವಧಿಯಲ್ಲಿ ನಾಯಿಂದರಿಗೆ ಅಂನುಪಂನನ್ನು ಬಿಟ್ಟು ಬಿಟ್ಟಿ ಬಿರಾಡ ಮುಂತಾದವನ್ನು ಬಿಟ್ಟ ಉಲ್ಲೇಖ ಈ ಶಾಸನದಿಂದ ತಿಳಿದುಬರುತ್ತದೆ. ರಾಜಕೊಂಡ ಉಪ್ಪಾರ, ಬೋವರ ಉಲ್ಲೇಖದ ಶಾಸನವೊಂದು ದೊರೆತಿದೆ. ಇವರು ಜಂಗಮರ ಹಳ್ಳಿ ಕೆರೆಯನ್ನು ೧೭೫೭ರಲ್ಲಿ ಜೀರ್ಣೋದ್ಧಾರ ಮಾಡಿದ್ದಾರೆ ಎಂದು ತಿಳಿಸುತ್ತದೆ. ಮುಧೋಳದ ರಾಷ್ಟ್ರಕೂಟರ ಕಾಲದ ಶಾಸನವೊಂದರಲ್ಲಿ ಸಮಗಾರ ಚಂದ ಎಂಬುವನು ಹೋರಾಡಿ ಸತ್ತನೆಂದು ತಿಳಿದುಬರುತ್ತದೆ. ಈತ ಚರ್ಮದ ಕೆಲಸವನ್ನು ಮಾಡುತ್ತಿದ್ದನೆಂದು ತಿಳಿದುಬರುತ್ತದೆ.

ಕರ್ನಾಟಕದ ದಾನಶಾಸನಗಳಲ್ಲಿ ವ್ಯಾಪಾರಿಗಳ ಉಲ್ಲೇಖ ಪದೇ ಪದೇ ಬರುತ್ತದೆ. ದೇಶದ ಆರ್ಥಿಕ ವ್ಯವಸ್ಥೆಯ ಜೀವನಾಡಿಗಳಾಗಿ ವ್ಯಾಪಾರಿಗಳಿರುತ್ತಿದ್ದರು. ಇವರು ತಮ್ಮದೇ ಆದ ಸಂಘಗಳನ್ನು ಕಟ್ಟಿಕೊಂಡಿದ್ದರೆಂದು ಕೊಪ್ಪಳದ ಒಂದು ಶಾಸನದಲ್ಲಿ ತಿಳಿದುಬರುತ್ತದೆ. ಅನೇಕ ಶಾಸನಗಳಲ್ಲಿ ಸಭೆಯಲ್ಲಿ ಸೇರಿದ ವ್ಯಕ್ತಿಗಳ ಉಲ್ಲೇಖವೂ ಇದೆ. ಮುಧೋಳಿನ ಶಾಸನವೊಂದರಲ್ಲಿ ವ್ಯಾಪಾರಿಗಳ ವಿಶೇಷಣಗಳ ಉಲ್ಲೇಖ ಈ ಕೆಳಗಿನಂತಿದೆ :

''ಸ್ವಸ್ತಿ ಸಮಸ್ತ ಭುವನ ವಿಖ್ಯಾತ ಪಂಚಸತವೀರ ಸಾಸನಲಬ್ಧಾನೇಕ ಗುಣಗನಾಳಂಕೃತ ಸತ್ಯ ಸೌಚೌಚಾರ ಚಾರಿತ್ರ್ಯನಯವಿನಯ ವಿಜ್ಞಾನ ವೀರಬಳಂಜ ಧರ್ಮ್ಮಪ್ರತಿಪಾಳ ವಿಸುದ್ಧ ಗುಡ್ಡಧ್ವಜ ವಿರಾಜಿತಾನೂನ ಸಾಹಸ ಸತ್ಯಬಳ ವೀರಲಕ್ಷ್ಮೀಲಂಗಿತ ವಿಶಾಲ ವಕ್ಷಸ್ಥಳ ಭುವನ ಪರಾಕ್ರಮೋನ್ನತರುಂ॥ ವಾಸದೇವ ಖಣ್ಡಳೀ ಮುಳಭದ್ರ ವಂಶೋದ್ಭವರುಂ। ಭಗವತೀ ಲಬ್ದವರ ಪ್ರಸಾದರುಂ। ಧ್ವಾತ್ರಿಂಶವೇಳಾಪೂರಷ್ಟದಶ ಪಟ್ಟಣರುಂ। ಚಾಷಷ್ಟಿಯೋಗ ಪೀಠ ಸಯುಂತರುಂ। ಬಲ್ಲುಂಕಿ ದಂಡಹಸ್ತರುಂ। ಈಶ್ವರ ವರಪ್ರಸಾದರುಂ। ಅಯ್ಯಾವ್ವೊಳೆಯ ಪುರವರಾಧೀಶ್ವರರುಂ ಶ್ರೀಮುಚ್ಚಕ್ರವರ್ತ್ತಿ ಪ್ರಸನ್ನರುಂ। ಶರಣಾಗತವಜ್ರ ಪಂಜರುರುಮಪ್ಪ ಶ್ರೀಮಯ್ಯೂರ್ವ್ವರಂ ಪರಾಕ್ರಮಮೆನ್ತೆಂದಡೆ ಬಲದೊಳು ಬಾಲಿಯಂ ಚಲದೊಳು ದುರ್ಯೋಧನನಂ ಸತ್ಯದೊಳು ಧರ್ಮಪುತ್ರನಂ ಸಾಹಸದೊಳು ಭೀಮನಂ। ಪರಾಕ್ರಮದೊಳರ್ಜುನನಂ। ಅರಿತದೊಳು ಸಹದೇವನಂ। ಸೌಚದೊಳು ಗಾಂಗೇಯನಂ ತೇಜದೊಳಾದಿತ್ಯನಂ। ಭೋಗದೊಳಿಂದ್ರನಂ। ತ್ಯಾಗದೊಳು ಕರ್ಣನಂ ಕೋಪದಳಗ್ನಿಯಂ। ಬಲ್ಲಾಳ ತನದೊಳು ಜವನಂ। ಪೆಂಪಿಂದಾಕಾಶಮಂ। ಬಿಣ್ಪಿಂ ಧರಣಿಯಂ। ಗುಣ್ಪಿಂ ಮಹಾ ಸಮುದ್ರಮಂ ಪೋಲ್ಪಯ್ಯೂರ್ವ್ವರು'' ಎಂಟುನಾಡ ಪದಿನರುವರು, ಸಮಸ್ತ ಮುಮ್ಮುರಿದಂಡ, ನಾನಾದೇಶಿ ಸೇರಿ ಇವರ ಮಹಾನಾಡಾಗಿತ್ತು (ಯಲಬುರ್ಗಾದ ಶಾಸನ ೨೯)

ಪುರದ ಶಾಸನದಲ್ಲಿ ೪೮ ಮನ್ನೆಯಲ್ಲಿ ಅನೇಕರ ಹೆಸರುಗಳನ್ನು ಮತ್ತು ಊರುಗಳನ್ನು ಹೇಳಲಾಗಿದೆ. ವೀರ ಹಂಪರಸ ಕಂಪಿಲ ಹಂಪದೇವ, ಜೋಯಿಯುರಸ, ಕಣ್ಣರಸ, ಸಳಿಯಣ್ಣರಸ,

ಕೂಡೂರು ದೋಣಮರಸ, ಅಣ್ಣಲದೇವ, ಮಾನಮಡಿಯ ಬಾಚರಸ ಮುಂತಾದವರು ಕೆಳವಡಿನಾಡ ಶೆಟ್ಟರಾಗಿದ್ದರೆಂದು ತಿಳಿಯುತ್ತದೆ.

ಮುಸ್ಲಿಂ ಅರಸರ ಕಾಲದಲ್ಲಿ ಕೊಪ್ಪಳದ ಸಾಮಾಜಿಕ ಬದುಕು ಶಾಂತಿಯುತವಾಗಿತ್ತು. ಸಮಾಜದಲ್ಲಿ ಸಂಘರ್ಷಗಳನ್ನು ಆ ಕಾಲಘಟ್ಟದಲ್ಲಿ ಕಾಣೆವು. ಸಮಾಜದಲ್ಲಿ ನೆಲೆಸಿದ್ದ ಹಿಂದೂ ಮುಸ್ಲಿಮರು ತಮ್ಮ ತಮ್ಮ ಧಾರ್ಮಿಕ ಆಚರಣೆಗಳ ಜೊತೆಗೆ ಪರಸ್ಪರರಲ್ಲಿ ಹೊಂದಾಣಿಕೆಯನ್ನೇರ್ಪಡಿಸಿಕೊಂಡಿದ್ದರು. ಸ್ವಾತಂತ್ರ್ಯಸಂಗ್ರಾಮದವರೆಗೂ ಅಲ್ಲಿ ಯಾವುದೇ ರೀತಿಯ ಸಾಮಾಜಿಕ ವಿಸಂಗತಿಗಳು ತಲೆದೋರಲಿಲ್ಲ. ವಸಾಹತು ಕಾಲಘಟ್ಟದಲ್ಲಿ ಒಡೆದು ಆಳುವ ನೀತಿಯ ಪರಿಣಾಮವಾಗಿ ರಜಕಾರರ ಚಳುವಳಿ ಸಂದರ್ಭದಲ್ಲಿ ಸಾಮಾಜಿಕ ಸಂಘರ್ಷಗಳು ತಲೆದೋರಿದವು ಎಂದು ಚರಿತ್ರೆ ಸ್ಪಷ್ಟವಾಗಿ ಹೇಳುತ್ತದೆ.

## ೭. ೨. ಆರ್ಥಿಕ ಸ್ಥಿತಿಗತಿಗಳು

ಕೊಪ್ಪಳ ಪ್ರದೇಶವು ಪ್ರಾಗೈತಿಹಾಸಿ ಕಾಲಘಟ್ಟದಿಂದಲೂ ಇತ್ತೀಚಿನವರೆಗೂ ತನ್ನ ಆರ್ಥಿಕ ಚಟುವಟಿಕೆಗಳಲ್ಲಿ ಕೃಷಿಯನ್ನೇ ಪ್ರಧಾನವಾಗಿ ಅವಲಂಬಿಸಿದೆ. ಪ್ರಾಗೈತಿಹಾಸಿಕ ಕಾಲಘಟ್ಟದ ಜನರು ಪಶುಸಾಕಣಿಕೆ, ಬೇಟೆಗಾರಿಕೆ ಮತ್ತು ಕೃಷಿಯನ್ನು ಅವಲಂಬಿಸಿದ್ದರೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಗವಿಮಠದಲ್ಲಿ ದೊರೆತಿರುವ ರೇಖಾಚಿತ್ರಗಳು ಪಶುಪಾಲನಾ ವೃತ್ತಿ ಪ್ರಧಾನ ವಾಗಿತ್ತೆಂಬುದನ್ನು ತೋರಿಸುತ್ತವೆ. ಜಿಂಕೆ, ಆಕಳು, ಕಾಡುಕೋಣ, ಎತ್ತು, ಮೊಲ, ಟಗರು, ಕುದುರೆ ಮುಂತಾದ ವಿವಿಧ ಪ್ರಾಣಿಗಳ ಚಿತ್ರಗಳು ಅಂದಿನ ಮಾನವರು ಅವುಗಳೊಂದಿಗೆ ಹೊಂದಿದ್ದ ಸಂಬಂಧವನ್ನು ಹೇಳುತ್ತವೆ. ಗವಿಮಠದ ಗುಡ್ಡದ ದಕ್ಷಿಣ ತುದಿಯಲ್ಲಿರುವ ಅಶೋಕ ಚಕ್ರವರ್ತಿಯ ಶಾಸನದ ಸಮೀಪದಲ್ಲಿಯೇ ಈಶಾನ್ಯಕ್ಕೆ ಅತಿ ಎತ್ತರದ ಗುಡ್ಡದ ಸೀಳಿನಲ್ಲಿ ಕೆಮ್ಮಣ್ಣು ಬಣ್ಣದ ದೇಹದ ಮೇಲೆ ಸಮಾನಾಂತರವಾಗಿ ಎಳೆದ ಕಪ್ಪು ರೇಖೆಗಳು, ತುದಿಬೆರಳುಗಳಿಂದ ಹೊರಚಾಚಿದ ಪಂಜರಗಳು,

ನೀಳವಾದ ಬಾಲವನ್ನು ಹೊಂದಿದ ನೆಗೆದ ಹುಲಿಯ ಚಿತ್ರವೊಂದಿದೆ. ಅದರ ಹಿಂದೆ ಮನುಷ್ಯನೊಬ್ಬನು ಅದನ್ನು ಕೊಲ್ಲಲು ಹವಣಿಸುತ್ತಿರುವ ಚಿತ್ರವು ಕೆತ್ತಲ್ಪಟ್ಟಿದೆ. ಈ ಹಿನ್ನೆಲೆಯಲ್ಲಿ ಬೇಟೆಗಾರಿಕೆಯೂ ಇನ್ನೊಂದು ವೃತ್ತಿಯಾಗಿತ್ತೆಂದು ತಿಳಿಯಬಹುದಾಗಿದೆ. ಇನ್ನೊಂದು ರೇಖಾಚಿತ್ರದಲ್ಲಿ ಬೇಟೆಗಾರನು ಬಿಟ್ಟ ಬಾಣದಿಂದ ಗಾಯಗೊಂಡ ಜಿಂಕೆ ನೆಲಕಚ್ಚಿದಂತೆ ಕಂಡುಬರುತ್ತದೆ. ಉಳಿದ ಪ್ರಾಣಿಗಳು ಪ್ರಾಣಭಯದಿಂದ ಓಡುತ್ತಿರುವ ಚಿತ್ರವೂ ಅಲ್ಲಿದೆ. ಬಿಲ್ಲಿಯ ಹೆದೆಯನ್ನೇರಿಸಿ ನಿಂತ ಬೇಟೆಗಾರನು ಅಲ್ಲಿ ಚಿತ್ರಿತಗೊಂಡಿರುವನು.

ಮೌರ್ಯರ ಆಡಳಿತದಲ್ಲಿ ಕೊಪ್ಪಳವು ಅಂದು ದಕ್ಷಿಣ ಭಾರತದ ಅತಿದೊಡ್ಡ ವಾಣಿಜ್ಯ ಕೇಂದ್ರವಾಗಿರಬೇಕೆಂದು ಅಭಿಪ್ರಾಯಪಡುತ್ತಾರೆ. ದಕ್ಷಿಣ ಭಾರತದ ಜೊತೆಗೆ ವಾಣಿಜ್ಯ-ವ್ಯಾಪಾರ ಸಂಪರ್ಕವನ್ನಿಟ್ಟುಕೊಳ್ಳಲು ಉತ್ತರ ಭಾರತದ ರಾಜಮಹಾರಾಜರುಗಳಿಗೆ ಅನುಕೂಲವಾಗುವಂತೆ ಕೊಪ್ಪಳ ನಗರವನ್ನು ಬಳಸಿಕೊಳ್ಳುತ್ತಿದ್ದರು. ಆ ಕಾರಣದಿಂದ ಕೊಪ್ಪಳವು ನಗರವಾಗಿ ಪರಿಣಮಿಸಿತು. ದಕ್ಷಿಣ ಭಾರತಕ್ಕೆ ವ್ಯಾಪಾರ ವಹಿವಾಟಿಗಾಗಿ ಬರುತ್ತಿದ್ದ ಯಾತ್ರಿಕರು ಕೊಪ್ಪಳದಲ್ಲಿ ತಂಗುತ್ತಿದ್ದರು. ಇದಕ್ಕೆ ಅಲ್ಲಿ ಉತ್ತಮ ವಾತಾವರಣವಿತ್ತು. ಆ ಕಾರಣದಿಂದ ಅಶೋಕನು ತನ್ನ ಎರಡು ಶಾಸನಗಳನ್ನು ಅಲ್ಲಿ ನೆಲೆಗೊಳಿಸಲು ಯೋಚಿಸಿದನು ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಅಲ್ಲಿಯ ಶಾಸನಗಳು ಮೌರ್ಯಚಕ್ರವರ್ತಿಯ ಆಜ್ಞೆಗಳನ್ನು ದೇಶದಾದ್ಯಂತ ಹರಡಲು ವ್ಯಾಪಾರಿಗಳು ಮಾಧ್ಯಮವಾಗಿ ಕೆಲಸ ಮಾಡಲು ಕಾರಣವಾಗುತ್ತಿದ್ದವು.

ಶಾತವಾಹನರ ಕಾಲದಲ್ಲಿ ಕೊಪ್ಪಳವು ಪ್ರಮುಖ ವಾಣಿಜ್ಯ ಕೇಂದ್ರವಾಗಿ ಅಭಿವೃದ್ಧಿ ಹೊಂದಿತು. ಶಾತವಾಹನರ ಅನೇಕ ನಾಣ್ಯಗಳು ಕೊಪ್ಪಳದಲ್ಲಿ ಹೇರಳವಾಗಿ ದೊರೆತಿವೆ. ಒಂದು ನಾಣ್ಯದಲ್ಲಿ 'ಚಿಂತಸ' ಎಂದು ಬರೆಯಲ್ಪಟ್ಟಿದೆ. ಮತ್ತೊಂದರಲ್ಲಿ 'ಶಿವಚಿಂತಸ' ಎಂದು ಬರೆಯಲ್ಪಟ್ಟಿದೆ. ಮಧ್ಯಭಾರತದಿಂದ ದಕ್ಷಿಣ ಭಾರತಕ್ಕೆ ವ್ಯಾಪಾರ ವಹಿವಾಟುಗಳು ಹೆಚ್ಚಾಗಿರುವ ಸಾಧ್ಯತೆಯನ್ನು ಈ ನಾಣ್ಯಗಳು ಹೇಳುತ್ತವೆ. ಕೃಷಿ ಮತ್ತು ಕೃಷಿ ಉತ್ಪನ್ನಗಳು ಒಂಟೆ, ಆನೆ ಮತ್ತು ಎತ್ತಿನಗಾಡಿಗಳಲ್ಲಿ

ಹೇರಿಕೊಂಡು ದಕ್ಷಿಣ ಪ್ರದೇಶಕ್ಕೆ ಬಂದು ಮತ್ತು ದಕ್ಷಿಣದ ಉತ್ಪನ್ನಗಳನ್ನು ಉತ್ತರ ಮತ್ತು ಮಧ್ಯಭಾರತದ ಕಡೆಗೆ ಸಾಗಿಸುತ್ತಿದ್ದುದು ಶಾಸನಗಳಿಂದ ತಿಳಿದುಬರುತ್ತದೆ. ಇದರಿಂದಾಗಿ ದಕ್ಷಿಣ ಭಾರತದ ನಾಣ್ಯಗಳು ಉತ್ತರ ಮತ್ತು ಮಧ್ಯಭಾರತದಲ್ಲಿ ಮತ್ತು ಆ ಭಾಗದ ನಾಣ್ಯಗಳು ದಕ್ಷಿಣ ಭಾರತದ ಹಲವು ಭಾಗಗಳಲ್ಲಿನ ವಾಣಿಜ್ಯ ಕೇಂದ್ರಗಳಲ್ಲಿಯೂ ಕಾಣಸಿಗುತ್ತವೆ.

ಬೇರೆ ಬೇರೆ ಅಸರಸುಮನೆತನಗಳಲ್ಲಿ ಕೊಪ್ಪಳ ಪ್ರದೇಶವು ಹಲವು ಆರ್ಥಿಕ ಚಟುವಟಿಕೆಗಳಿಗೆ ಹೆಸರಾಗಿತ್ತೆಂಬುದು ತಿಳಿದುಬರುತ್ತದೆ. ಗದ್ಯಾಣ ಮುಂತಾದ ನಾಣ್ಯಗಳು ರೂಢಿಯಲ್ಲಿದ್ದವು. ವಿಜಯನಗರ ಕಾಲದಲ್ಲಿ ವರಾಹ ನಾಣ್ಯವು ರೂಢಿಗೆ ಬಂದಿತ್ತು. ವ್ಯಾಪಾರಿ ಸಂಘಗಳು ಚಾಲ್ತಿಯಲ್ಲಿರುವುದು ಹಲವು ಶಾಸನಗಳಿಂದ ತಿಳಿದುಬರುತ್ತದೆ. ಆಧುನಿಕ ಸಂಗತಿಗಳಂತಹ ಜಾಗತೀಕರಣ ಮತ್ತು ಗ್ಯಾಟ್ ಒಪ್ಪಂದಗಳ ಸಂಗತಿಯನ್ನು ಇದು ನೆನಪಿಗೆ ತರುತ್ತದೆ. ಹನುಮನಾಳು ಶಾಸನವು ಇಂತಹ ಒಂದು ಸಂಗತಿಯನ್ನು ಪ್ರಪ್ರಥಮವಾಗಿ ಬೆಳಕಿಗೆ ತರುತ್ತದೆ. ಈ ಶಾಸನವು ವ್ಯಾಪಾರಿಗಳ ಪಾರಂಪರಿಕ ಹೊಗಳಿಕೆಯನ್ನು ನೀಡಿದ್ದು ಅದರೊಂದಿಗೆ ಆ ವ್ಯಾಪಾರಿ ಗುಂಪಿನಲ್ಲಿದ್ದ ಎಂಟುನಾಡ ಪದಿನರುವರು, ಗವರಿಯುಂ, ಗಾತ್ರಿಗರು, ಬೀರರುಂ, ಬೀರವಣಿಗರು, ತಂಬುಲಿಗ ಸಾಸಿರ್ವರನ್ನು ಹೆಸರಿಸುತ್ತದೆ. ಇದಲ್ಲದೆ ಮತಿಯರ ಸಿಂಗಶೆಟ್ಟಿ, ಕೇತಿಸೆಟ್ಟಿ, ರೇವಯಗೇತಿಸೆಟ್ಟಿ, ಮಂಗಲದ ಕತಿಯೆ ಬಾಚಿಸೆಟ್ಟಿ, ಬಾದಾಮಿಯ ಬಾತಿರಿದೇವಸೆಟ್ಟಿ, ಹಾವರಿಯ ಹೆಚಿಸೆಟ್ಟಿ, ತಿಳವಳ್ಳಿಯ ಕಲಿಯಮ್ಮ ಸೆಟ್ಟಿ, ಕೆರೂವೂರ ಎಡವಚಟ್ಟಿ ಚಟ್ಟಿ, ಸಿಗ್ಗಾವೆಯ ಭರವೆಸೆಟ್ಟಿ, ನಿಟ್ಟಸಿಂಗಿಯ ಬಬ್ಬುಳ ಸಿರಿಸೆಟ್ಟಿ ಹೊರಿಸೆಟ್ಟಿ, ಹುದ್ದವನ ಸೋವಿಸೆಟ್ಟಿ, ಚಮುಣ್ಡಯ್ಯಸೆಟ್ಟಿ ಎಂದು ಮುಂತಾಗಿ ನೀಡುತ್ತದೆ.(ಕುಷ್ಟಗಿ ೨೨).

ಕೊಪ್ಪಳ ಜಿಲ್ಲೆಯ ಶಾಸನಗಳಲ್ಲಿ ನೀರಾವರಿಗಾಗಿ ಕೆರೆ ಕಟ್ಟಿಸಿದ ಬಾವಿ ತೋಡಿಸಿದ ಉದಾಹರಣೆಗಳಿವೆ. ತುಂಗಭದ್ರಾ ನದಿಗೆ ವಿಕ್ರಮಾದಿತ್ಯನ ಕಾಲದಲ್ಲಿ ಚೌವೇದಿಭಟ್ಟನು ಕಾಲುವೆಯೊಂದನ್ನು ಸೀಳಿಕೊಂಡು ಕಟ್ಟಿಸಿಕೊಂಡು ಹೋದನೆಂಬುದಕ್ಕೆ ಉಲ್ಲೇಖಗಳಿವೆ.

ಆಹಾರೋತ್ಪನ್ನಗಳಿಗೆ ಹಲವು ಕ್ರಮಗಳನ್ನು ಕೈಕೊಂಡಿರುವುದು ಕೊಪ್ಪಳದ ಚರಿತ್ರೆಯಿಂದ ತಿಳಿದುಬರುತ್ತದೆ. ರಾಜರು ಮಿಲಿಟರಿ ನಿರ್ವಹಣೆಗೆ ಧಾನ್ಯ ಸಂಗ್ರಹವನ್ನು ಮಾಡುತ್ತಿದ್ದರು. ಈ ಧಾನ್ಯಗಳನ್ನು ಕೃಷಿಕರು ಉತ್ಪನ್ನದ ಮೂರನೇ ಒಂದು ಭಾಗವನ್ನು ನೀಡಬೇಕಾಗುತ್ತಿತ್ತು. ಅದು ಆಯಾ ರಾಜರ ವಿದೇಶಾಂಗ ನೀತಿ ಮತ್ತು ಮಿಲಿಟರಿ ನೀತಿಯನ್ನು ಅನುಸರಿಸಿ ತೆರಿಗೆಗಳನ್ನು ವಿಧಿಸಲಾಗುತ್ತಿತ್ತು. ಬಹುತೇಕ ರಾಜರು ಕೃಷಿಕರಿಂದ ಹೆಚ್ಚಿನ ಆದಾಯವನ್ನು ನಿರೀಕ್ಷಿಸುತ್ತಿದ್ದರು. ರಾಷ್ಟ್ರಕ್ಕೆ ಹೆಚ್ಚಾದ ಉತ್ಪನ್ನಗಳನ್ನು ಬೇರೆ ರಾಜ್ಯಗಳಿಗೆ ರಫ್ತು ಮಾಡಿ ವಿದೇಶಿ ವ್ಯಾಪಾರಗಳೊಡನೆ ಬೊಕ್ಕಸವನ್ನು ತುಂಬಿಸಿಕೊಳ್ಳುತ್ತಿದ್ದುದಕ್ಕೆ ಉದಾಹರಣೆಗಳಿವೆ. ಕಮ್ಮ, ಮತ್ತರು, ಗದ್ಯಾಣ, ಪಣ ಮುಂತಾದ ನಾಣ್ಯಗಳು, ಅಳತೆಗೋಲುಗಳು ಇರುತ್ತಿದ್ದವು. ಪಾವು, ಸೇರು, ಅಚ್ಚೇರು ಮುಂತಾದ ಧಾನ್ಯಗಳನ್ನು ಅಳೆಯುವ ಸಾಧನಗಳು ಇದ್ದವು. ವ್ಯಾಪಾರವು ಇವುಗಳ ಅಳತೆಯ ಮೇಲೆ ನಡೆಯುತ್ತಿತ್ತು. ವಸ್ತುವಿನಿಮಯ ಪದ್ಧತಿ ಸಮಾಜದ ಒಂದು ವರ್ಗದ ಜನತೆಯ ನಡುವೆ ನಡೆಯುತ್ತಿತ್ತು. ಕಮ್ಮಾರ ಕುಂಬಾರ, ಸಣಗಾರ, ಹಡಪದ ಮುಂತಾದವರು ತಮ್ಮ ವೃತ್ತಿಗಳನ್ನು ಬೇರೆಯವರ ಮೇಲೆ ವಿನಿಯೋಗಿಸುವುದರ ಮೂಲಕ ಸೇವೆಯ ಕೊಡು-ಕೊಳ್ಳುವಿಕೆ ಪರಸ್ಪರರಲ್ಲಿ ನಡೆಯುತ್ತಿತ್ತು. ಶಾಸನಗಳಲ್ಲಿ ವ್ಯಾಪಾರಿಗಳು ವಸ್ತುಗಳನ್ನು ತೂಗುವ ಅಳೆಯುವ, ಎಣಿಸುವ ಲೆಕ್ಕದಲ್ಲಿ ಸರಕುಗಳನ್ನು ಮಾರುತ್ತಿದ್ದರು ಮತ್ತು ಕೊಂಡುಕೊಳ್ಳುತ್ತಿದ್ದರು. ಭೂಮಿಯನ್ನು ಮತ್ತರು ಲೆಕ್ಕದಲ್ಲಿ ಮತ್ತು ಅದಕ್ಕಿಂತ ಕಡಿಮೆಯಾದಲ್ಲಿ ಕಮ್ಮದ ಲೆಕ್ಕದಲ್ಲಿ ನೀಡುತ್ತಿದ್ದರು. ಹಣದ ಲೆಕ್ಕದಲ್ಲಿ ದೊಡ್ಡ ಪ್ರಮಾಣದ ಹಣ ಗದ್ಯಾಣದ ಲೆಕ್ಕದಲ್ಲಿಯೂ ಸಣ್ಣ ಪ್ರಮಾಣದ ಹಣ ಪಣದ ಲೆಕ್ಕದಲ್ಲಿಯೂ ಚಲಾವಣೆಯಲ್ಲಿದ್ದವು. ಹತ್ತು ಪಣಕ್ಕೆ ಒಂದು ಪಂಗುದಾಣ ಸಮಾನವೆಂದು ತಿಳಿದುಬರುತ್ತದೆ. ದೇವಾಲಯದ ಅನೇಕ ಖರ್ಚುಗಳು, ದೇವಾಲಯಕ್ಕೆ ನೀಡಿರುವ ದಾನ-ದತ್ತಿ, ಪುದುವಟ್ಟು ಮುಂತಾದ ಇಡುಗಂಟುಗಳ ಬಡ್ಡಿಯ ಮೇಲೆ ನಿರ್ವಹಣೆಗೊಳಪಡುತ್ತಿದ್ದವು. ಭೂಮಿಯನ್ನು ಅಳೆಯುವ ಅಳತೆಗೋಲೊಂದರ ಉಲ್ಲೇಖ ಕೊಪ್ಪಳದ ಒಂದು ಶಾಸನದಲ್ಲಿ ಸಿಕ್ಕಿದೆ. ಆ ಅಳತೆಗೋಲಿಗಿದ್ದ ಹೆಸರು '**ನಾಗದೇವ ಸವಣ್ಣಾದಗಡಿಂಬ**' ಎಂದಾಗಿತ್ತು. ಉಳಿದ ಕಡೆ ಇದ್ದಿರಬಹುದಾದ ಅಳತೆಗೋಲುಗಳ ಬಗ್ಗೆ ವಿವರಗಳು

ದೊರೆತಿಲ್ಲ. ಆದರೆ ಕುರುಗೋಡಿನ ಒಂದು ಶಾಸನವು ಗಡಿಂಬವು ಭೂಮಿಯನ್ನು ಅಳೆಯುವ ಸಾಧನವಾಗಿತ್ತೆಂಬುದನ್ನು ತಿಳಿಸುತ್ತದೆ.

## ೭. ೩. ಶೈಕ್ಷಣಿಕ ಸ್ಥಿತಿಗತಿಗಳು

ಕೊಪ್ಪಳವು ಅಗ್ರಹಾರಗಳ ರಾಜನೆಂದು ಕರೆಯಲ್ಪಟ್ಟಿದೆ. ಚರಿತ್ರೆಯಾದ್ಯಾಂತ ಅದು ಅನೇಕ ರಾಜವಂಶರುಗಳ ಕಾಲದಲ್ಲಿ ಮಹತ್ವದ ಶೈಕ್ಷಣಿಕ ಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ. ಜೈನ ಧರ್ಮೀಯರಿಗೆಂತೂ ಅದೊಂದು ವಿಶ್ವವಿದ್ಯಾಲಯವಾಗಿತ್ತು. ಸಹಸ್ರಾರು ಜೈನಪಂಡಿತರು ಅಲ್ಲಿ ಜೈನ ಮೀಮಾಂಸೆಯ ಬಗೆಗೆ ಹಲವು ಚರ್ಚೆಗಳನ್ನು ಮಾಡಿರುವರು. ಸುತ್ತಮುತ್ತಲ ಅಗ್ರಹಾರಗಳಾದ ಕುಕನೂರು, ಮಾದಿನೂರು, ಮುಧೋಳು, ಕವಲೂರು, ಅಳವಂಡಿ, ತಳಕಲ್ಲು, ಬಳಗೇರ, ಚಳಗೇರಾ, ಗಬ್ಬೂರು ಮುಂತಾದವುಗಳು ಕೊಪ್ಪಳ ಅಗ್ರಹಾರಕ್ಕೆ ಪೂರಕವಾಗಿ ಕೆಲಸ ಮಾಡುತ್ತಿದ್ದವು. ಜೈನ ಬಸದಿಗಳಲ್ಲಿ ಶೈಕ್ಷಣಿಕ ಚಟುವಟಿಕೆಗಳು ನಡೆಯುತ್ತಿದ್ದವು. ಇದಕ್ಕೂ ಮುನ್ನ ಬೌದ್ಧ ಧರ್ಮೀಯ ಗ್ರಂಥಗಳ ಅಧ್ಯಯನ ಅಲ್ಲಿ ನಡೆದಿರಬಹುದು. ಆದರೆ ಅವು ನಡೆದಿರುವ ಬಗೆಗೆ ಉಲ್ಲೇಖಗಳು ಸಿಗುತ್ತಿಲ್ಲ. ಏಕೆಂದರೆ ಒಮ್ಮಿಂದೊಮ್ಮಿಗೆ ಕೊಪ್ಪಳವು ಜೈನರಿಗೆ ಒಂದು ವಿದ್ವತ್ತಾಣವಾಗಿ ಅದು ಕಂಡುಬರಲಿಲ್ಲ. ಅದಕ್ಕೆ ಒಂದು ಶೈಕ್ಷಣಿಕ ಚರಿತ್ರೆ ಇರಲೇಬೇಕು. ಇದನ್ನು ಅಲ್ಲಿಯ ಶಾಸನಗಳು ಉಲ್ಲೇಕಿಸುತ್ತವೆ. ಬಸದಿಯ ನಿರ್ಮಾಣವು ಶೈಕ್ಷಣಿಕ ಕೇಂದ್ರಗಳ ಉದ್ದೇಶಕ್ಕಾಗಿಯೇ ನಡೆಯುತ್ತಿತ್ತು. ಕೊಪ್ಪಳವು ಬಸದಿಗಳ ನಾಡೆಂದೇ ಒಂದು ಕಾಲಕ್ಕೆ ಪ್ರಸಿದ್ಧಿಯಾಗಿತ್ತು. ಅದು ಹೆಚ್ಚು ಬಸದಿಗಳನ್ನು ಹೊಂದಿದ್ದುದರಿಂದಲೇ ಅಲ್ಲಿ ಶೈಕ್ಷಣಿಕ ಚಟುವಟಿಕೆಗಳು ದೊಡ್ಡ ಪ್ರಮಾಣದಲ್ಲಿ ನಡೆಯುತ್ತಿದ್ದಿರಬೇಕು. ಹೀಗಿರುವುದರಿಂದಲೇ ಕೊಪ್ಪಳ ಪ್ರದೇಶವು ಬಹಳ ಪವಿತ್ರವೆಂದು ಬಗೆಯಲಾಗಿತ್ತು.

ಬಿಳಿಯರಳೆಯಂತೆ ಗಂಗಾ
ಜಳದಂತೆಸೆವಜಿತಸೇನ ಮುನಿಪತಿಯ ಗುಣಾ
ವಳಿಯಂತೆ ನೆಗಳ್ದ ಕೊಪಣಾ
ಚಳದಂತೆ ಪವಿತ್ರಮತ್ತಿಮಬ್ಬೆಯ ಚರಿತಂ

ಪವಿತ್ರವಾದ ಕೊಪಣಾಚಳದಂತೆ ಅತ್ತಿಮಬ್ಬೆಯ ಜೀವನವು ಪವಿತ್ರವಾದದ್ದೆಂದು ಕವಿ ಹೃದಯ ತುಂಬಿ ಭಾವನೆಗಳಲ್ಲಿ ಹೊರಹೊಮ್ಮಿಸಿದ್ದಾನೆ. ಹೀಗೆ ಧ್ವನಿತವಾದ ಈ ಕಾವ್ಯದಲ್ಲಿ ಕೊಪ್ಪಳ ನಾಡವರ ಜೀವನವು ನಿರ್ಮಲವಾದದ್ದಾಗಿರಬೇಕು. ಇಲ್ಲಿಯ ಜಲವು ಗಂಗಾಜಲದಂತೆ ಪವಿತ್ರವಾದದ್ದಾಗಿರಬೇಕು. ಮುನಿಗಳು ಜಿನಸೇನಮುನಿಗಳಂತೆ ಗುಣಶ್ರೇಷ್ಠರು; ಅವರು ಸ್ಥಿರಚಿತ್ತರೆಂದು ಕವಿ ರನ್ನ ಪರೋಕ್ಷವಾಗಿ ಕಾವ್ಯದ ಮೂಲಕ ತನ್ನ ಆಶಯವನ್ನು ವ್ಯಕ್ತಪಡಿಸಿರುವನು.

ಕೊಪ್ಪಳವನ್ನು ಉಲ್ಲೇಖಿಸಿದ ಕವಿ ರನ್ನನಾಗಲಿ, ಚಾವುಂಡರಾಯನಾಗಲಿ, ಕೊಪ್ಪಳದ ಜೈನ ಸಂಸ್ಕೃತಿಯ ಹಿನ್ನೆಲೆಯಲ್ಲೇ ಬೆಳೆದವರಾಗಿದ್ದಾರೆ. ರತ್ನತ್ರಯರಲ್ಲಿ ಮತ್ತಿಬ್ಬರಾದ ಪಂಪ, ಪೊನ್ನರಿಗೂ ಅದು ತಿರುಳ್ಗನ್ನಡ ನಾಡೆಂದು ಪುಲಿಗೆರೆ ಕೊಪ್ಪಣವನ್ನು ಹೆಸರಿಸುತ್ತಾ ಆ ಪವಿತ್ರ ಕೊಪ್ಪಳವನ್ನು ನೆನೆದಿದ್ದಾರೆ. ಇವರು ಸಹ ಕೊಪ್ಪಳದ ಶೈಕ್ಷಣಿಕ ಚಟುವಟಿಕೆಗಳ ಪ್ರಭಾವಕ್ಕೆ ಒಳಗಾಗಿದ್ದಾರೆ. ಕೊಪ್ಪಳ ಮತ್ತು ಸುತ್ತ ಮುತ್ತಲ ಅಗ್ರಹಾರಗಳಲ್ಲಿ ಅವರು ಸುತ್ತಾಡಿರಲಿಕ್ಕೇಬೇಕು. ಅದೇನೇ ಇದ್ದರೂ ಕೊಪ್ಪಳವು ಜೈನಶಿಕ್ಷಣದ ತವರುಮನೆಯಾಗಿತ್ತು. ಅನೇಕ ಶಾಸನಗಳಲ್ಲಿ ಜೈನಮುನಿಗಳ ಹೆಸರುಗಳು ಬರುತ್ತವೆ. ಇವರೆಲ್ಲಾ ಬೇರೆ ಬೇರೆ ಗಣಗಚ್ಛ ಸಂಘ, ಅನ್ವಯಗಳಿಗೆ ಸೇರಿದವರಾದರೂ ಹೆಚ್ಚಾಗಿ ಕೊಂಡಕೊಂದಾನ್ವಯಕ್ಕೆ ಸೇರಿದವರೆಂದು ತಿಳಿದುಬರುತ್ತದೆ. ಕೊಂಡಕುಂದಾಚಾರ್ಯರ ಹೆಸರನ್ನು ಕನ್ನಡದಲ್ಲಿಯೇ ಅಲ್ಲದೆ ಇಡೀ ಭಾರತದಲ್ಲಿಯೇ ಹೆಸರಿಸಿರುವ ಮೊದಲ ಕವಿಯೆಂದರೆ ಆದಿಕವಿ ಪಂಪ. ಆದರೆ ಶಾಸನಗಳಲ್ಲಿ ಪಂಪನಿಗಿಂತ ೫೦ ವರ್ಷ ಹಿಂದಿನದಾದ ಕೊಪ್ಪಳದ ಒಂದು ಶಾಸನ (ಕ್ರಿ.ಶ. ೮೮೧)ದಲ್ಲಿ ಕೊಂಡಕುಂದಾಚಾರ್ಯರ ಹೆಸರಿದೆ. ಇದಕ್ಕಿಂತಲೂ ಪ್ರಾಚೀನವಾದ

ತಾಮ್ರಶಾಸನವೊಂದರಲ್ಲಿ ಕೊಂಡಕುಂದರ ಉಲ್ಲೇಖವಿದೆ. ಈ ಆಚಾರರ್ಯರನ್ನು ಕುರಿತು ಹೇರಳವಾದ ಬರವಣಿಗೆ ಬಂದಿದೆ. ಇವರ ಕಾಲ ಕ್ರಿ.ಶ. ೧ನೇ ಶತಮಾನವೆಂದು ಉಪಾಧ್ಯೆ ಮೊದಲಾದ ವಿದ್ವಾಂಸರ ಅಭಿಪ್ರಾಯವಾಗಿದೆ. ೫ನೇ ಶತಮಾನದ ಪ್ರಾರಂಭದ ಹೀರಾಲಾಲ್ ಜೈನರು ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಅಲ್ಲಿ ಕೊಪ್ಪಳದಲ್ಲಿ ನೆಲೆಸಿದ್ದ ಆಚಾರ್ಯರೆಲ್ಲರೂ ಒಂದೆ ವಿಧದವರಾಗಿರುವುದಿಲ್ಲ. ಠಾಣಾಂಗ (ಸ್ಥಾನಾಂಗ) ಮರಗಳಿಗೆ ಹೋಲಿಸಿ ವೃಕ್ಷಗಳಂತೆಯೇ ಆಚಾರ್ಯರು ಕೂಡಾ ನಾಲ್ಕು ಬಗೆಯಾಗಿರುವರೆಂದು ಅಭಿಪ್ರಾಯಪಟ್ಟಿದೆ.

೧. ಶಾಲವೃಕ್ಷದಂತೆ 'ಮಹಾನ್' ಎನಿಸಿಕೊಂಡವರು. ಗುರು ಮತ್ತು ಶಿಷ್ಯ ಮಹಾನ್ ರಿರುತ್ತಾರೆ.

೨. ಆಚಾರ್ಯರು ಮಾತ್ರ ಶಾಲ ವೃಕ್ಷದಂತೆ ಮಹಿಮಾ ಸಂಪನ್ನರಿದ್ದು ಅವರ ಶಿಷ್ಯರು ಮಾತ್ರ ಹರಳು ( ಔಡಲ ಗಿಡದಂತೆ ಟೊಳ್ಳಾಗಿರುವುದು).

೩. ಎರಡನೆಯದರ ತದ್ವಿರುದ್ಧವಾಗಿ ಶಿಷ್ಯರು ಶಾಲವೃಕ್ಷದ ಹಾಗೆ ಮಹಾನ್‌ರಿದ್ದು ಗುರುಗಳು ಹರಳು ಗಿಡದ ಹಾಗೆ ಕಳಾಹೀನರಾಗಿರುವರು.

೪. ಮೇಲಿನ ಮೂರೂ ತೆರನಾಗಿರದೆ ಆಚಾರ್ಯರು ಮತ್ತು ಶಿಷ್ಯರು ಔಡಲಗಿಡದ ಹಾಗೆ ತೇಜೋಹೀನರಾಗಿ, ನಿರ್ಗಂಧ ಕುಸುಮರಾಗಿ ಕಾಣುವರು. ಕೊಪ್ಪಳದ ಶಾಸನಗಳಲ್ಲಿ ಮೇಲಿನ ನಾಲ್ಕು ಮಾದರಿಗಳಲ್ಲಿ ಮೊದಲನೆಯ ವರ್ಗಕ್ಕೆ ಸೇರಿರುವ ಗುರುಶಿಷ್ಯರು ಕಂಡುಬರುತ್ತಾರೆ. ಉದಾಹರಣೆಗೆ ಗೊಲ್ಲಾಚಾರ್ಯ ಮತ್ತು ತ್ರೈಲೋಕ್ಯಾಚಾರ್ಯ ಜೋಡಿಯನ್ನು ಹೆಸರಿಸಬಹುದು.

ಡಾ. ಹಂಪಾ ನಾಗರಾಜಯ್ಯ ಅವರು ಸಂಶೋಧನೆಯಲ್ಲಿ ಹಲವು ವಿದ್ವಾಂಸರು ಅಲ್ಲಿ ಇದ್ದರೆಂಬುದನ್ನು ಗುರುತಿಸಿದ್ದಾರೆ. ಕೊಪ್ಪಳದ ಒಂದು ಬಂಡೆಯ ಶಾಸನದಲ್ಲಿ ಜಟಾಸಿಂಹನಂದಿಯ ಹೆಸರನ್ನು ಕೆತ್ತಲಾಗಿದೆ. ಜಟಾಸಿಂಹನಂದಿಯ ಹೆಸರು ಶ್ರವಣಬೆಳಗೊಳದಲ್ಲಿ ಬಿಟ್ಟರೆ ಕೊಪ್ಪಳದಲ್ಲಿ

ಮಾತ್ರ ಕೆತ್ತಲ್ಪಟ್ಟಿದೆ. ಜಠಾಸಿಂಹನಂದಿಯು ಜೈನ ಆಚಾರ್ಯ ಪರಂಪರೆಯಲ್ಲಿ ಪ್ರಸಿದ್ಧರಾಗಿರುವರು. ವಾರಾಂಗ ಚರಿತೆ ಎಂಬ ಸಂಸ್ಕೃತ ಕಾವ್ಯವನ್ನು ಅವರು ಬರೆದಿರುವರು. ಈ ಶಾಸನವು ೭ನೆಯ ಶತಮಾನದ ಅಂತ್ಯ ಅಥವಾ ೮ನೆಯ ಶತಮಾನದ ಆರಂಭದ ಶಾಸನವಾಗಿರಬೇಕು. ಜಠಾಸಿಂಹನಂದಿಯು ಕರ್ನಾಟಕದ ಒಬ್ಬ ಪ್ರಸಿದ್ಧ ಆಚಾರ್ಯರು. ಇವರು ಯಾಪನೀಯ ಸಂಘದ ಒಬ್ಬ ಆಚಾರ್ಯರೆಂದು ಗುರುತಿಸಲಾಗಿದೆ.

ಕೊಪ್ಪಳದ ೮ನೇ ಶಿರ ಒಂದು ಶಾಸನದಲ್ಲಿ ಭರತಮುನಿ ವಿರಚಿತ ನಾಟ್ಯಶಾಸ್ತ್ರದಲ್ಲೂ ಕಾವ್ಯ ಮತ್ತು ಶಬ್ದ ಶಾಸ್ತ್ರಗಳಲ್ಲೂ ಸೋಮದೇವಮುನಿಯಂತಹ ಯೋಗ್ಯರಾದವರು ಹಿಂದೆಯೂ ಇರಲಿಲ್ಲ; ಮುಂದೆಯೂ ಇರಲಾರರು. ನೇಮಿದೇವಮುನಿಯ ಶಿಷ್ಯರಾದ ಸೋಮದೇವಸೂರಿಯು ತಾರ್ಕಿಕ ಚಕ್ರವರ್ತಿ (ವಾದದಲ್ಲಿ ತುಂಬಾ ಗಟ್ಟಿಗರು) ಎನಿಸಿದ್ದರು. ಕವಿಗಳಿಗೆ ರಾಜರೆನಿಸಿದ್ದರೆಂದು ತಿಳಿದುಬರುತ್ತದೆ. ಅದರ ಶಾಸನ ಪಾಠವು ಹೀಗಿದೆ :

ಕಯಸ್ಯಾಸೀತಿ ವಿವಾದಿವಾದಿ ವಿಜಯಿ ಶ್ರೀ ನೇ
ಮಿದೇವೋ ಗುರು (ಶ್ರೀ) ತೋಯಸ್ಯ ಮಹೇಂದ್ರ
ದೇವ ವಿಬುಧೋ ವಾದೀನ್ದ್ರ ಕಾಳಾನಳಃ
ಯಸ್ಯಾಸೀತ್ಕವಿರಾಜಾ ಇತ್ಯಭಿನುತಃ ಶಿ
ಷ್ಯೋಬುಧಃ ಸ ಸ್ವಯಂ ಜೀಯಾತ್ತಾ
ರ್ಕ್ಕಿಕ ಚಕ್ರವರ್ತ್ತಿ ಚರಿತಃ ಶ್ರೀ ಸೋ
ಮದೇವೋ ಮುನಿಃ । ಭರತೇ ನಾಟಕೇ
ಕಾವ್ಯೇ ಶಬ್ದ ಶಾಸ್ತ್ರೇ ನೃಪಾಗಮೇ ಕವಿ
ರಾಜ ಸಮಾಯೋಗ್ಯೋ ನ ಭೋತೋ ನ ಭ
ವಿಷ್ಯತಿ॥

ಕೊಪ್ಪಳದ ಆಜ್ಞೇಯ ದಿಕ್ಕಿನ ಕೋಟೆಗೆ ಸೇರಿಸಿದ್ದ ಒಂದು ಶಾಸನದಲ್ಲಿ ಗಂಗರಾಜರು ವಿದ್ಯಾಭ್ಯಾಸಕ್ಕಾಗಿ ಕೊಪ್ಪಳಕ್ಕೆ ಬಂದುದ್ದರ ಬಗೆಗೆ ಉಲ್ಲೇಖಗಳಿವೆ. ಈ ಶಾಸನ ಸ್ವಲ್ಪ ತೃಟಿತವಾಗಿದ್ದು ಇದರ ಶಕಕಾಲವುರ್ಳಿಜನೆಯ ದುಂದುಭಿ ಮಾಘ ಬಹುಳ ಎಂದು ಹೇಳಲಾಗಿದೆ. ಅದರಲ್ಲಿ ಬರುವಂತೆ ಸೇನ ಗಣಕ್ಕೆ ಸೇರಿದ ಅಜಿತ ಸೇನಾಚಾರ್ಯನನ್ನು ಹೆಸರಿಸಿ ಇವನಿಂದ ಭೂಮಿಯ ಮೇಲೆ ಪೆರ್ಮಳೆಗಳು ಸುರಿದವಂತೆ , ಹಸಿವು ನೀರಡಿಕೆಗಳು ಇಲ್ಲವಾದವೆಂದು ತನಗೆ ಗೌರವ ನೀಡಿದವರನ್ನು, ನಿಂದಿಸಿದವರನ್ನು ಸಮಾನವಾಗಿ ಕಾಣುತ್ತಿದ್ದನೆಂದು ಶಾಸನ ವರ್ಣಿಸುತ್ತದೆ. ಇವನ ಶಿಷ್ಯ ಗಂಗಮಂಡಲದ ರಾಜಮಲ್ಲ (ರಾಚಮಲ್ಲ) ಇವನ ಪತ್ನಿ ಕಂಚಿಯಬ್ಬರಸಿ. ತನ್ನ ಪತಿ ಸತ್ತ ಮೇಲೆ ಈಕೆ ಅಜಿತಸೇನಾಚಾರ್ಯರ ಬಳಿ ದೀಕ್ಷೆ ಪಡೆದು ಕುಪಣ ತೀರ್ಥದಲ್ಲಿ ಸಮಾಧಿವಿಧಿಯಿಂದ ಮುಡಿಪಿದಳು ಎಂದು ತಿಳಿದುಬರುತ್ತದೆ. ಈ ಶಾಸನವನ್ನು ಬರೆದವನು ನರೇಂದ್ರಸೇನ ಪಂಡಿತನ ಶಿಷ್ಯ ಸಮಂತಭದ್ರ ಬಳಿರಾ. ಕೊಪ್ಪಳದ ಹೆಚ್ಚು ಶಾಸನಗಳು ಜೈನಮುನಿಗಳ ಮತ್ತು ಅವರ ಶಿಷ್ಯರ ವಿದ್ಯಾಭ್ಯಾಸ ಕ್ರಮವನ್ನೇ ಕುರಿತು ಹೇಳುತ್ತವೆ. ಸಮಾಧಿಯೋಗದಿಂದ ಸುರಲೋಕಕ್ಕೆ ಹೋಗಲು ಮಾರ್ಗಸೂಚಿಯನ್ನು ಅಲ್ಲಿ ನೀಡಲಾಗುತ್ತಿತ್ತೆಂದು ಹೇಳಲಾಗುತ್ತದೆ.

ಕನ್ನಡ ವಿಶ್ವವಿದ್ಯಾಲಯದವರು ಸಂಪಾದಿಸಿದ 'ಕೊಪ್ಪಳ ಜಿಲ್ಲೆಯ ಶಾಸನಗಳು' ಗ್ರಂಥದಲ್ಲಿ ಕೊಪ್ಪಲದಲ್ಲಿ ಆಗಿಹೋದ ಮುನಿಗಳು, ಮುನಿಗಣಗಳು ಅವರ ಶಿಷ್ಯ ಪರಂಪರೆ ಊರು ಮತ್ತು ಅವರ ಕಾಲ (ಕ್ರಿ.ಶ ದಲ್ಲಿ)ವನ್ನು ತೋರಿಸುವ ಪಟ್ಟಿಯನ್ನು ಇಲ್ಲಿ ಕೊಡಲಾಗಿದೆ. :

| **ಕಾಲ ಕ್ರಿ.ಶ.** | **ಮುನಿಯ ಹೆಸರು** | **ಅನ್ವಯ** | **ಶಿಷ್ಯ ಪರಂಪರೆ** | **ಊರು** |
|---|---|---|---|---|
| ೧. ೮೮೧ | ಏಕಚುಟ್ಟುಕದ ಭಟಾರ | ಕೊಂಡಕುಂದ | ಸರ್ವನಂದಿ | ಕೊಪ್ಪಳ |
| ೨. ೯೧೭ | - | ಕಾಣೂರುಗಣ | -- | -- |
| ೩. ೯೩೧ | ಪದ್ಮನಂದಿಸಿದ್ಧಾಂತ | ಕೊಂಡಕುಂದ | ...ಬದ್ರಪಂಡಿತ | ಕುಪಣ |
| ೪. ೯೬೪ | ನಂದಿಭಟಾರ | ಸಾರಸ್ವಗಣ | ವಿನಯನಂದಿಭಟಾರ | ಕುಪಣ |

| ೧ | ೨ | ೩ | ೪ | ೫ |
|---|---|---|---|---|
| | ವಿನಯನಂದಿ | -- | ನಾಗನಂದಿಪಂಡಿತ | |
| ೫. ೯೭೧ | ಮಹೇಂದ್ರದೇವ | -- | ವಾದೀಭಸಿಂಹ | ಕುಪಣ |
| ೬. ೭೭೪ | ಶ್ರೀಧರವಿಮುಕ್ತಭಟಾರ | ಕೊಂಡಕುಂದ ದೇಸಿಗಣ | ಮಲಧಾರಿಮುನೀಶ್ವರ | ಕುಪಣ/ ಅಣ್ಣಿಗೆರೆ |
| ೭. ೯೭೪ | ಬುದ್ಧಸೇನ ಪಂಡಿತ | ಸೇನಗಣ | ಸಾಧುಸೇನಪಂಡಿತ | ಮಳಖೇಡ |
| | ಸಾಧುಸೇನಪಂಡಿತ | -- | ಸಿದ್ಧಸೇನಪಂಡಿತ | |
| | | ದೇಸಿಗಣ | | |
| ೮. ೯೭೭ | ದಿವಾಕರಣಂದಿಪಂಡಿತ | ಕೊಂಡಕುಂದ | | ಕೊಪ್ಪಳ |
| ೯. ೯೭೭ | ಗಂಡವಿಮುಕ್ತದೇವ | ಬಳಗಾರಗಣ | ತ್ರಿಭುವನ ಚಂದ್ರ | ಕೊಪ್ಪಳ |
| ೧೦. ೯೮೩ | ಸೋಮಪಂಡಿತ (ಸೋಮದೇವಸೂರಿ) | --- | --- | ಕೊಪ್ಪಳ |
| ೧೧. ೯೮೭ | ಮಲಧಾರಿದೇವ | --- | --- | ಕೊಪ್ಪಳ |
| ೧೨. ೯೮೭ | ಶ್ರೀಚಂದ್ರಭಟ್ಟಾಕರ | --- | --- | ಕೊಪ್ಪಳ |
| ೧೩. ೯೯೧ | ನೇಮಿಚಂದ್ರಭಟ್ಟಾರಕ | ಕೊಂಡಕುಂದ ಬೆಳ್ಳಂಡುಗಣ | --- | ಕೊಪ್ಪಳ |
| ೧೪. ೯೯೭ | ಮಳಧಾರಿದೇವ | --- | ಶ್ರೀಧರಭಟ್ಟಾರಕ | ಕೊಪ್ಪಳ |
| ೧೫. | ಕೀರ್ತಿಸೂರಿ | ಕೊಂಡಕುಂದ ಪುಸ್ತಕ ಸಂತತಿ | ಬೀರಣಂದ್ಯಾಚಾರ್ಯ | ಕೊಪ್ಪಳ |
| | ಬೀರಣಂದ್ಯಾಚಾರ್ಯ | --- | ಗೊಲ್ಲಾಚಾರ್ಯ | ಕೊಪ್ಪಳ |
| ೯೯೭ | ಗೊಲ್ಲಾಚಾರ್ಯ | --- | ತ್ರಿಕಾಳಯಯೋಗಿ | ಕೊಪ್ಪಳ |
| ೧೬. ೧೦ನೇ ಶ. | ಜಠಾಸಿಂಗನಂದಿ | --- | --- | --- |
| ೧೭. ೧೦ನೇ ಶ. | ಪೂರ್ಣಚಂದ್ರಯೋಗಿ | --- | ಅಬಿನಂದಯ್ಯ | ಕೊಪ್ಪಳ |
| ೧೮. ೧೦ನೇ ಶ. | ಮೋನಿದೇವ | --- | --- | ಕೊಪ್ಪಳ |
| ೧೯. | ಜಯನಂದಿಸಿದ್ಧಾಂತ | ಬಳಗಾರಗಣ | ಮಾಣಿಕ್ಯನಂದಿ | --- |
| | ಮಾಣಿಕ್ಯನಂದಿ | --- | ಅಭಯನಂದಿ | - |
| ೧೦೦೪ | ಅಭಯನಂದಿ | --- | ಜಿನಚಂದ್ರಮುನಿ | ಕೊಪ್ಪಳ |
| ೨೧. | ಮಾಗನಂದಿ | --- | -- | --- |
| ೨೨. | ನಂದಿಮುನೀಂದ್ರ | --- | --- | --- |
| ೨೩. ೧೦೦೦ | ನೇಮಿದೇವ | --- | ಚಂದ್ರಪ್ರಭದೇವ? | ಕೊಪ್ಪಳ |
| ೨೪. | ರವಿಚಂದ್ರ | ಕೊಂಡಕುಂದೆ ಪುಸ್ತಕಗಚ್ಛ | ಪೂರ್ಣಚಂದ್ರ | --- |

| ೧ | ೨ | ೩ | ೪ | ೫ |
|---|---|---|---|---|
| | ಪೂರ್ಣಚಂದ್ರ | --- | ದಾಮನಂದಿ | |
| | ದಾಮನಂದಿ | --- | ಶ್ರೀಧರದೇವ | ಕೊಪ್ಪಳ |
| | ಶ್ರೀಧರದೇವ | --- | --- | ಕೊಪ್ಪಳ |
| ೨೫. ೧೦೨೩ | ನೇಮಿಚಂದ್ರ | --- | ಅಭಯನಂದಿಪಂಡಿತ | ಕೊಪ್ಪಳ |
| | ಅಭಯನಂದಿಪಂಡಿತ | --- | ನೇಮಿಚಂದ್ರಸಿದ್ಧಾಂತಿ | ಕೊಪ್ಪಳ |
| ೨೬. ೧೦೨೩ | ಅಜಿತಸೇನಾಚಾರ್ಯ | ಸೇನಗಣ | ನರೇಂದ್ರಸೇನಪಂಡಿತ | --- |
| | ನರೇಂದ್ರಸೇನಪಂಡಿತ | ಸೇನಗಣ | ಸಮನ್ತಭದ್ರ | --- |
| ೨೭. | ಗೊಲ್ಲಾಚಾರ್ಯ | ಕೊಂದಕುಂದೆ ದೇಸಿಗಣ | ಪದ್ಮನಂದಿಸಿದ್ಧಾಂತಿ | ಕೊಪ್ಪಳ |
| ೧೦೨೮ | ಪದ್ಮನಂದಿಸಿದ್ಧಾಂತಿ | --- | ಇಂದ್ರನಂದಿಸಿದ್ಧಾಂತಿ | ಕೊಪ್ಪಳ |
| ೨೮. ೧೦೩೦ | ಮೇಘಚಂದ್ರಮುನೀಂದ್ರ | --- | ತಿರಷನಂದಿ | ಕೊಪ್ಪಳ |
| ೨೯. ೧೦೩೦ | ಶ್ರೀಧರದೇವ | --- | --- | ಕೊಪ್ಪಳ |
| ೩೦. | ನಯಕೀರ್ತಿ | ಕೊಂಡಕುಂದ ದೇಸಿಗಣ | (೧)ಅಣ್ಣಿಗೆರೆಯ ಮಲಧಾರಿದೇವ (೨) ಅರಸಿಬೀಡಿನ ನೇಮಿಚಂದ್ರಸಿದ್ಧಾಂತಿ (೩) ಮೇಘಚಂದ್ರ ಸಿದ್ಧಾಂತಿ (೪) ಶ್ರುತಕೀರ್ತಿದೇವ | ಅಣ್ಣಿಗೆರೆ --- |
| ೩೧. ೧೦೩೩ | ಇಂದ್ರನಂದಿ | ಕೊಂಡಕುಂದ | --- | --- |
| ೩೨. ೧೦೩೭ | ಚಂದ್ರಕೀರ್ತಿ ಭಟಾರ | ಕೊಂಡಕುಂದ | --- | --- |
| | ಮಳಧಾರಿಮುನಿ | --- | ವರ್ಧಮಾನಸಿದ್ಧಾಂತಿ | --- |
| | ವರ್ಧಮಾನಸಿದ್ಧಾಂತಿ | --- | ಸಕಳಚಂದ್ರಸಿದ್ಧಾಂತಿ | --- |
| | ಸಕಳಚಂದ್ರ | --- | ? | |
| ೩೩. | ರವೀಂದ್ರಸೂರಿ | ಕೊಂಡಕುಂದಾನ್ವಯ ನಂದಿಗಣದ ದೇಸಿಗಣ | ತ್ರಿಭುವನಚಂದ್ರಮುನಿ | --- |
| | ತ್ರಿಭುವನಚಂದ್ರಮುನಿ | --- | ಮೋನಿದೇವ | ಕೊಪ್ಪಳ |
| ೧೦೫೯ | ಮೋನಿದೇವ | --- | --- | ಕೊಪ್ಪಳ |
| ೩೪. ೧೧ನೇ ಶ. | ದಾಮನಂದಿ | ಕೊಂಡಕುಂದ ದೇಶಿಕಗಣ ಪುಸ್ತಕಗಚ್ಛ | ತ್ರಿಕಾಳಯೋಗಿ | ಕೊಪ್ಪಳ |

| ೧ | ೨ | ೩ | ೪ | ೫ |
|---|---|---|---|---|
| | ತ್ರಿಕಾಳಯೋಗಿ | --- | ಶ್ರೀಧರದೇವ | ಕೊಪ್ಪಳ |
| | ಶ್ರೀಧರದೇವ | --- | ಚಂದ್ರಣಂದಿ | ಕೊಪ್ಪಳ |
| | ಚಂದ್ರಣಂದಿ ? | --- | ದೇವೇಂದ್ರಮುನಿ | ಕೊಪ್ಪಳ |
| ೩೫. ೧೧ನೇ ಶ. | ಚಂದ್ರನಂದಿ ಸಿದ್ಧಾಂತಿ | --- | ಸಕಳಚಂದ್ರಮುನಿ | ಕೊಪ್ಪಳ |
| | ಸಕಳಚಂದ್ರ | --- | ದಾಮನಂದಿ | |
| ೩೬. ೧೧ನೇ.ಶ. | ಮಳಧಾರಿದೇವ | --- | ಮಾಘನಂದಿಭಟಾರ | ಕೊಪ್ಪಳ |
| ೩೭. ೧೧ನೇ.ಶ. | ಮಲಧಾರಿದೇವ | ಕೊಂಡಕುಂದೆ ದೇಸಿಗಗಣ | ನಯನಂದಿದೇವ | ಕೊಪ್ಪಳ |
| ೩೮. ೧೧ನೇ.ಶ. | ಸಾಗರಣಂದಿ | ? | --- | --- |
| ೩೯. ೧೧ನೇ.ಶ. | ರವಿಚಂದ್ರದೇವ | ಕೊಂಡಕುಂದ | ಗಂಡವಿಮುಕ್ತದೇವ | --- |
| | ಗಂಡವಿಮುಕ್ತದೇವ | --- | ತ್ರಿಭುವನಚಂದ್ರ | ಕೊಪ್ಪಳ |
| ೪೦. ೧೧ನೇ.ಶ. | ಮಾಘನಂದಿ | --- | --- | ಕೊಪ್ಪಳ |
| ೪೧. ೧೧ನೇ.ಶ. | ಮೇಘನಂದಿಭಟಾರ | --- | --- | ಕೊಪ್ಪಳ |
| ೪೨. ೧೩ನೇ.ಶ. | ಮಾಘನಂದಿಸಿದ್ಧಾಂತದೇವ | ಮೂಲಸಂಘ ದೇಸಿಗಣ | --- | ಯಲಬುರ್ಗಾ |
| ೪೩. ೧೩ನೇ ಶ. | ಮಾಧವಚಂದ್ರಭಟ್ಟಾರಕ | ಮೂಲಸಂಘ ದೇಸಿಗಣ ಪುಸ್ತಕಗಚ್ಛ ಯಿಂಗಳೇಶ್ವರದ ಬಳಿ | --- | ಯಲಬುರ್ಗಾ |
| ೪೪. ೧೩ನೇ.ಶ. | ರಾಯಾಚಾರ್ಯ | ಮೂಲಸಂಘ ಕೊಂಡಕುಂದ ದೇಸಿಗಣ ಪುಸ್ತಕಗಚ್ಛ | --- | ಯಲಬುರ್ಗಾ |
| ೪೫. ೧೩ನೇ.ಶ. | ಶ್ರೀಪಾಳತ್ರೈವಿದ್ಯದೇವ | --- | --- | ಕೊಪ್ಪಳ |
| ೪೬. ೧೩ನೇ.ಶ. | ಚಂದ್ರಸೇನದೇವ | --- | --- | ಕೊಪ್ಪಳ |
| ೪೭. ೧೩ನೇ.ಶ. | ಪೂಜ್ಯಪಾದಸ್ವಾಮಿ | --- | --- | ಕೊಪ್ಪಳ |
| ೪೮. ೧೩೪೩ | ಸಿಂಹನಂದ್ಯಾಚಾರ್ಯ | ಕೊಂಡಕುಂದ ದೇಶಿಕಾಗಣಕಾಲ | --- | |
| ೧೩೪೩ | ಸಿಂಹನಂದ್ಯಾರ್ಯ್ಯ | ದೇಶಿಕಾಗಣ | ಧರ್ಮಭೂಷಣ | ಆನೆಗೊಂದಿ |
| | ಧರ್ಮಭೂಷಣ | --- | --- | ಆನೆಗೊಂದಿ |
| ೪೯. ೧೩೪೬ | ಅನಂತಕೀರ್ತಿ | ಮೂಲಸಂಘ ಬಲಾತ್ಕಾರಗಣ ಸರಸ್ವತಿಗಚ್ಛ | ಸಿಂಹನಂದ್ಯಾಚಾರ್ಯ | ಕೊಪ್ಪಳ |

| ೧ | ೨ | ೩ | ೪ | ೫ |
|---|---|---|---|---|
| ೫೦. ೧೩೫೨ | ಲಲಿತಕೀರ್ತಿ | --- | --- | ಆನೆಗೊಂದಿ |
| ೫೧. ೧೩೫೭ | ಬಾಲಚಂದ್ರಯೋಗಿ | --- | --- | ಆನೆಗೊಂದಿ |
| ೫೨. ೧೩೬೬ | ನರೇಂದ್ರದೇವ | ಮೂಲಸಂಘ ದೇಸಿಗಗಣಾಗ್ರ | --- | ಆನೆಗೊಂದಿ |
| ೫೩. ೧೩೭೧ | ಧರ್ಮಭೂಷಣ ಬಟ್ಟಾರಕ | --- | --- | ಆನೆಗೊಂದಿ |
| ೫೪. ೧೩೭೫ | ಮದನಕೀರ್ತಿ ರವುಳ | --- | --- | ಕೊಪ್ಪಳ |
| ೫೫. ೧೪ನೇ ಶ. | ..ದೇವಭಟ್ಟ ಮೂಲಸಂಘ | ಸೇನಗಣ | --- | ಕೊಪ್ಪಳ |
| ೫೬. ೧೪ನೇ.ಶ. | ದೇವೇಂದ್ರಕೀರ್ತಿ ಭಟ್ಟಾರಕ | --- | --- | ಕೊಪ್ಪಳ |
| ೫೭. | ಗುಣಭೂಷಣ | ಕೊಂ.ಕುಂ. ನಂದಿಸಂಘ | ಅಮರಕೀರ್ತಿ | ಆನೆಗೊಂದಿ |
| | ಅಮರಕೀರ್ತಿ | --- | ಸಿಂಹನಂದಿ | ಆನೆಗೊಂದಿ |

ಇಷ್ಟೆಲ್ಲಾ ಜೈನಪಂಡಿತರು, ಮುನಿಗಳು ಆಗಿಹೋಗಿರುವುದು ಸೋಜಿಗದ ಸಂಗತಿ. ಸೋಮದೇವಸೂರಿಯ ಯಶಸ್ತಿಲಕ ಚಂಪು , ರನ್ನ, ಪಂಪ, ಪೊನ್ನ, ಚಾವುಂಡರಾಯ ಮುಂತಾದ ಕವಿಗಳ ಕಾವ್ಯಗಳು ಈ ನೆಲದಿಂದ ಪ್ರಭಾವಿತವಾಗಿ ರಚಿತವಾಗಿವೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಹಾಗೆಯೇ ಹಲವಾರು ಶೈವ ವಿದ್ವಾಂಸರ ಉಲ್ಲೇಖವಿದೆ. ಸೋಮಯ್ಯದೇವ, ನಿಜಗುಣ ಪಂಡಿತ, ಪಂಡಿತಾರಾಧ್ಯ ಶಿವದೇವ ಮುಂತಾದವರ ಉಲ್ಲೇಖಗಳಿವೆ. ಸೋಮೇಶ್ವರಪಂಡಿತ, ದೇವರಾಸಿ ಪಂಡಿತ, ವಿರೂಪಾಕ್ಷ ಸ್ವಾಮಿ, ಮರುಳಾನಂದದೇವರು, ಮಲ್ಲಯ್ಯ-ಬೊಮ್ಮಯ್ಯ, ಸಂಕರಾಶಿಪಂಡಿತ, ರುದ್ರಶಕ್ತಿ ಪಂಡಿತ, ಯೋಗೇಶ್ವರ, ಮಹಲಿಂಗ ಒಡೆಯ ಚನ್ನಮಲ್ಲಿಕಾರ್ಜುನ ಒಡೆಯ ಮುಂತಾದ ಶೈವ-ವೀರಶೈವ ವಿದ್ವಾಂಸರು ಈ ನೆಲೆಯಲ್ಲಿ ಆಗಿಹೋಗಿದ್ದಾರೆ.

ಕೊಪ್ಪಳವು ಇಸ್ಲಾಂ ಧರ್ಮದ ಸಂದರ್ಭದ ಆಡಳಿತದಲ್ಲಿ ಉರ್ದು ಶಿಕ್ಷಣವನ್ನು ನೀಡುತ್ತಿತ್ತು. ಈ ಹಿಂದೆ ಪ್ರಾಕೃತ, ಸಂಸ್ಕೃತ, ಪಾಳಿ, ಬ್ರಾಹ್ಮಿ, ಅರ್ಧಮಾಗದಿ, ಕನ್ನಡ ಮುಂತಾದ ಭಾಷೆಗಳಲ್ಲಿ ಶಿಕ್ಷಣವನ್ನು ನೀಡುತ್ತಿದ್ದ ಈ ಕೇಂದ್ರವು ಇಸ್ಲಾಂ ಧರ್ಮೀಯರ ಆಡಳಿತದ ಸಂದರ್ಭದಲ್ಲಿ ಅದು ಸಂಪೂರ್ಣವಾಗಿ ಉರ್ದುವನ್ನು ಆಡಳಿತ ಭಾಷೆಯನ್ನಾಗಿ ಮತ್ತು ಶಿಕ್ಷಣದ ಭಾಷೆಯನ್ನಾಗಿ

ಆಳವಡಿಸಿತು. ಸ್ವಾತಂತ್ರ್ಯಾನಂತರದ ರಜಾಕಾರರ ಚಳುವಳಿಯವರೆಗೂ ಇಲ್ಲಿ ಉರ್ದು ಶಿಕ್ಷಣ ಮತ್ತು ಉರ್ದು ಆಡಳಿತ ಇರುವುದು ಶೋಚನೀಯ ಸಂಗತಿ. ಏಕೆಂದರೆ ಇಂದಿಗೂ ಆ ಪ್ರದೇಶದಲ್ಲಿ ಅಚ್ಚಗನ್ನಡದ ಪ್ರತಿಭೆಗಳು ಹೊರಬರುತ್ತಿಲ್ಲ. ಈಗಲೂ ಜನರು ಸಂಖ್ಯೆಗಳನ್ನು ಹೇಳುವಾಗ ಅರೇಬಿಯಾ ಇಲ್ಲವೇ ಉರ್ದುವಿನ ಭಾಷೆಗಳಲ್ಲಿನ ಸಂಖ್ಯೆಗಳನ್ನೇ ಬಳಸುತ್ತಾರೆ. ಹೈದರಾಬಾದ್ ಉಸ್ಮಾನಿಯಾ ವಿಶ್ವವಿದ್ಯಾಲಯ ಇಲ್ಲಿನ ಶಿಕ್ಷಣ ದ ಕಾರ್ಯವೈಖರಿಯನ್ನು ನಿರೂಪಿಸುತ್ತಿತ್ತು. ಅದರ ನಿರ್ದೇಶನದ ಅಡಿಯಲ್ಲಿ ಕೊಪ್ಪಳದ ಶೈಕ್ಷಣಿಕ ಚರಿತ್ರೆಯು ನಿರೂಪಿತವಾಗಿದೆ.

ಅದೇನೇ ಇದ್ದರೂ ಕೊಪ್ಪಳವು ಶಿಕ್ಷಣದ ಕೇಂದ್ರವಾಗಿ ಚರಿತ್ರೆಯುದ್ದಕ್ಕೂ ಮನ್ನಣೆಯನ್ನು ಗಳಿಸಿಕೊಂಡಿದೆ. ಇದೊಂದು ಪ್ರತ್ಯೇಕವಾದ ಅಧ್ಯಯನದ ಸಾಧ್ಯತೆಗಳನ್ನು ಹೇಳುತ್ತದೆ. ಅನೇಕ ವಿದ್ವಾಂಸರು, ಕವಿಗಳು ಕೊಪ್ಪಳದ ಶೈಕ್ಷಣಿಕ ಸಂಸ್ಕೃತಿಯ ಅಧ್ಯಯನದ ಅಡಿಯಲ್ಲಿ ಚರ್ಚಿಸಲು ವಿಸ್ತಾರವಾದ ಭೂಮಿಕೆಯನ್ನು ಈ ನಾಡು ಕಲ್ಪಿಸಿಕೊಡುತ್ತದೆ.

## ೭. ೪. ಆಡಳಿತ ವ್ಯವಸ್ಥೆ

ವಿವಿಧ ರಾಜರುಗಳ ಕಾಲಘಟ್ಟದಲ್ಲಿ ಕೊಪ್ಪಳವು ರಾಜಕೀಯವಾಗಿ ಮಹತ್ವವನ್ನು ಪಡೆದುಕೊಂಡ ನಗರವಾಗಿದೆ. ಮೌರ್ಯರ ಕಾಲದಲ್ಲಿ ಇದು ಇಸಿಲ ಪ್ರಾಂತಕ್ಕೆ ಸೇರಿಕೊಂಡ ನಗರವಾಗಿತ್ತು. ಪ್ರಾಚೀನ ಕಾಲದ ಆಡಳಿತ ವ್ಯವಸ್ಥೆಯು ಆಡಳಿತದ ಅನುಕೂಲಕ್ಕಾಗಿ ಪ್ರಾಂತಗಳನ್ನಾಗಿ ವಿಂಗಡಿಸುತ್ತಿದ್ದರು. ಪ್ರಾಂತಗಲ್ಲಿ ಇಂತಿಷ್ಟು ನಗರಗಳು, ಇಂತಿಷ್ಟು ಹಳ್ಳಿಗಳೆಂದು ನಿರ್ದಿಷ್ಟಪಡಿಸಲಾಗುತ್ತಿತ್ತು. ನಿರಂಕುಶಪ್ರಭುತ್ವವು ಜನರ ಮೇಲೆ ನೇರ ಕ್ರಮಗಳನ್ನು ತೆಗೆದುಕೊಳ್ಳುತ್ತಿತ್ತು. ಕೊಪ್ಪಳ ಜಿಲ್ಲೆಯ ಶಾಸನಗಳು ಇಂತಹ ಆಡಳಿತ ವ್ಯವಸ್ಥೆಗೆ ಹಲವು ಮಾಹಿತಿಗಳನ್ನು ನೀಡುತ್ತವೆ. ಅದರಲ್ಲೂ ಎಕ್ಕಲವಾಡ ೧೪, ಎರಡರನೂರು, ಪುಲಿಗೆರೆ ೩೦೦, ಬೆಳ್ವೊಲ ೩೦೦, ಕರಡಿಕಲ್ ೩೦೦, ಕಿಸುಕಾಡು ೭೦, ಕುಂತಳದೇಶ, ಕುಕನೂರು ೩೦, ಕೆಳವಾಡಿ ೩೦೦.

ಕೊಪಣವೇಂಟೆ, ಕೊಪಣಸೀಮೆ, ನರೆಯಂಗಲ್ ೧೨, ನೊಳಂಬವಾಡಿ ೩೬,೦೦೦, ಪಡುವಣನಾಡು, ಬನವಾಸಿ ೧೨,೦೦೦, ಬಲ್ಲಕುಂದ ೩೦೦, ಬೆಣ್ಣೆಕಲ್ಲು ಸೀಮೆ, ಬೆಳ್ವೊಟ್ಟೆ ೧೩, ಬೆಳ್ವೊಲ ೩೦೦, ಮಾಸವಾಡಿ ೧೪೦, ಮೂವಳ್‌ತೆರೆನಾಡು, ಎಡದೊಡೆ ೨೦೦೦ - ಹೀಗೆ ಪ್ರಾಂತದ ಹೆಸರುಗಳನ್ನಾಗಿ ಮಾಡಿಕೊಂಡಿರುವುದು ತಿಳಿದುಬರುತ್ತದೆ. ಕೊಪ್ಪಳವು ಈ ಎಲ್ಲ ಪ್ರಾಂತಗಳಲ್ಲೂ ಸಾವಯವವಾಗಿ ಆಡಳಿತಕ್ಕೆ ಒಳಪಟ್ಟಿತ್ತು. ಗದಗ ಜಿಲ್ಲೆಯ ಪುಲಿಗೆರೆಯು (ಲಕ್ಷ್ಮೇಶ್ವರ) ಕಲ್ಯಾಣಿ ಚಾಲುಕ್ಯರ ಸಂದರ್ಭದಲ್ಲಿ ಕೇಂದ್ರಸ್ಥಳವಾಗಿತ್ತು. ಈ ಪುಲಿಗೆರೆಯಲ್ಲಿ ಪುಲಿಗೆರೆ ೩೦೦ ರಲ್ಲಿ ಕೊಪ್ಪಳವು ಒಳಪಟ್ಟಿತ್ತು. ಕರಡಿಕಲ್ಲು ಕೇಂದ್ರವಾದ ಆಡಳಿತದಲ್ಲಿ ಚಾಳುಕ್ಯರ ಕಾಲದಲ್ಲಿಯೇ ಕೊಪ್ಪಳವು ಗುರುತಿಸಿಕೊಳ್ಳುತ್ತದೆ. ಕುಕನೂರು ೩೦, ಇದು ಕೊಪ್ಪಳ ಜಿಲ್ಲೆಯಲ್ಲಿದ್ದು ಕೊಪ್ಪಳದ ಪಕ್ಕದಲ್ಲಿಯೇ ಇತ್ತು. ಅನಂತರ ಕೊಪ್ಪಳ ನಗರವನ್ನು ಕುಕನೂರು ೩೦ರ ಆಡಳಿತಕ್ಕೆ ಒಳಪಡಿಸಲಾಯಿತು. ಬಾಗಲಕೋಟೆ ಜಿಲ್ಲೆಯ ಕೆಳವಾಡಿ, ಕೊಪ್ಪಳ ಜಿಲ್ಲೆಯ ನರೇಗಲ್ಲು, ಬಳ್ಳಾರಿ ಜಿಲ್ಲೆಯ ಕಂಪಲಿ, ಉತ್ತರ ಕನ್ನಡ, ಹಾವೇರಿ ಜಿಲ್ಲೆಯ ಬನವಾಸಿ, ಬಳ್ಳಾರಿ ಜಿಲ್ಲೆಯ ಬಲ್ಕುಂದೆ, ಧಾರವಾಡ ಜಿಲ್ಲೆಯ ಅಣ್ಣಿಗೆರೆ, ಗದಗ ಜಿಲ್ಲೆಯ ಮಾಸವಾಡಿ, ರಾಯಚೂರು ಮತ್ತು ಕೊಪ್ಪಳ ಜಿಲ್ಲೆಯ ಎಡದೊರೆ ನಾಡು - ಇವುಗಳಲ್ಲಿ ಕೊಪ್ಪಳವು ಬಹಳ ಮಹತ್ವದ ಆಡಳಿತ ಕೇಂದ್ರವಾಗಿ ಕಂಡುಬರುತ್ತದೆ.

ರಾಜ್ಯದ ಆಡಳಿತ ವ್ಯವಸ್ಥೆಯಲ್ಲಿ ರಾಜನೇ ಪ್ರಧಾನ ಅಧಿಕಾರಿ. ಅವನಿಗೆ ಸಹಾಯಕರಾಗಿ ಮಂತ್ರಿಗಳಿರುತ್ತಿದ್ದರು. ಮಂತ್ರಿಗಳಲ್ಲಿ ಮುಖ್ಯನಾದವನು ಮಹಾಪ್ರಧಾನಿಯೆಂದು ಕರೆಯಲಾಗುತ್ತಿತ್ತು. ರಾಜನ ಆಜ್ಞೆಗಳು ಜನಗಳ ಆಶಯಕ್ಕೂ ಮಧ್ಯವರ್ತಿಯಾಗಿ ಕೆಲಸ ಮಾಡಬೇಕಾಗಿದ್ದ ಪ್ರಧಾನ ಅಧಿಕಾರಿಯು ಮಹಾಪ್ರಧಾನಿಯಾಗಿರುತ್ತಿದ್ದನು. ಇವನಲ್ಲದೆ ಇತರ ಮಂತ್ರಿಗಳು, ದಂಡನಾಯಕರು, ಸರ್ವಾಧಿಕಾರಿಗಳು, ಭಂಡಾರಿಗಳು, ಸಂಧಿವಿಗ್ರಹಿಗಳು, ಸೇನಾಧಿಪತಿಗಳು, ಧರ್ಮಾಧಿಕರಣಗಳು, ಧರ್ಮಕಾರಣಿಕರು ಮುಂತಾದವರು ರಾಜ್ಯದಲ್ಲಿ ಇರುತ್ತಿದ್ದರೆಂದು ಚಾವುಂಡರಾಯನ ಕೃತಿಯಿಂದ ತಿಳಿದುಬರುತ್ತದೆ. ಇವು ಗಂಗರ ಹಾಗೂ ಚಾಲುಕ್ಯರ ಆಡಳಿತ ಕಾಲದಲ್ಲಿಯೇ ಕಂಡುಬರುತ್ತವೆ.

ದಂಡಾಧಿಕಾರಿ, ದಂಡಾಧೀಶ, ದಂಡನಾಯಕ ಎಂಬ ಹೆಸರುಕೆಲವು ವೇಳೆ ಮಹಾಮಂತ್ರಿಯ ಸ್ಥಾನಕ್ಕೂ ಇದ್ದಂತೆ ಕಂಡುಬರುತ್ತದೆ.

ರಾಷ್ಟ್ರಕೂಟರ ಆಡಳಿತದಲ್ಲಿ ಮಂತ್ರಿಮಂಡಲದ ಪಾತ್ರ ಪ್ರಧಾನವಾಗಿದ್ದಂತೆ ತೋರುತ್ತದೆ. ರಾಷ್ಟ್ರಕೂಟರ ಅನೇಕ ಶಾಸನಗಳಲ್ಲಿ ಮಂತ್ರಿಗಳ ಅಧಿಕಾರ ವ್ಯಾಪ್ತಿ ಪ್ರಧಾನವಾಗಿ ವ್ಯಕ್ತವಾಗಿದೆ. ಅರ್ಥಶಾಸ್ತ್ರ, ಕಾಮುಂದಕನೀತಿ ಸಾರ, ಶುಕ್ರನೀತಿ ಮೊದಲಾದ ಗ್ರಂಥಗಳು ಮಂತ್ರಿಗಳಿಗೆ ಇರಬೇಕಾದ ಗುಣಗಳನ್ನು ವಿವರವಾಗಿ ಹೇಳುತ್ತವೆ. ಕೊಪ್ಪಣಪುರಾಧೀಶರೆಂದು ಹೆಸರಾಗಿರುವ ಶಿಲಾಹಾರರ ದೊರೆ ಅನಂತದೇವನು ಪ್ರಧಾನಮಂತ್ರಿ ಖಜಾನೆ ಅಧಿಕಾರಿಯೂ ಆಗಿದ್ದನು. ಹಾಗೆಯೇ ದೇವಗಿರಿಯ ಯಾದವರ ದೊರೆ ಸೇವುಣಚಂದ್ರನ ಮಂತ್ರಿ ರಾಜ್ಯದ ಉತ್ಪತ್ತಿ ಶಾಖೆಯನ್ನು ವಹಿಸಿಕೊಂಡಿದ್ದನೆಂದು ಕೊಪ್ಪಳದ ಶಾಸನಗಳಿಂದ ತಿಳಿದುಬರುತ್ತದೆ. ಹೊಯ್ಸಳರ ಆಡಳಿತದಲ್ಲಿ ಪಂಚ ಪ್ರಧಾನರ ಪಾತ್ರ ಕಂಡುಬರುತ್ತದೆ. ಇವರಿಗೆ ಸಹಾಯಕರಾಗಿ ಇತರ ಮಂತ್ರಿಗಳು ದಂಡನಾಯಕರು ಮೊದಲಾದ ಅಧಿಕಾರಿಗಳಿರುತ್ತಿದ್ದರು. ಸೈನ್ಯದ ವ್ಯವಸ್ಥೆ, ಪ್ರಜೆಗಳ ಹಿತರಕ್ಷಣೆ, ರಾಜ್ಯದ ಸಮಸ್ಯೆಗಳನ್ನು ತೀರ್ಮಾನಿಸುವುದು, ದೇವಾಲಯ ಮೊದಲಾದವುಗಳ ಉಸ್ತುವಾರಿ, ಅವುಗಳಿಗೆ ದಾನ-ದತ್ತಿಗಳನ್ನು ಬಿಡುವುದು ಈ ಮೊದಲಾದ ಕರ್ತವ್ಯ ನಿರ್ವಹಣೆ ಅವರ ಪಾಲಿಗಿರುತ್ತಿತ್ತು. ಸಾಮಾನ್ಯವಾಗಿ ಇವರೆಲ್ಲರೂಯುದ್ಧಕಾಲದಲ್ಲಿ ಹೋರಾಡುತ್ತಿದ್ದ ಶೂರರು.

ಹಿಂದಿನ ಅತ್ಯುತ್ತಮವಾದ ಅಂಶಗಳನ್ನೆಲ್ಲಾ ಅಳವಡಿಸಿಕೊಂಡು ಒಳ್ಳೆಯ ಆಡಳಿತವನ್ನು ಒದಗಿಸಲು ವಿಜಯನಗರದ ಅರಸರು ಪ್ರಯತ್ನಿಸಿದರು. ಹಿಂದೂ ರಾಜ್ಯಶಾಸ್ತ್ರದ ಪ್ರಕಾರ ದೇಶಕ್ಕೆ ಮುಖ್ಯವಾದ ಅಂಗಗಳು ಏಳು. ರಾಜ, ಅಮಾತ್ಯ, ಜನಪದ, ದುರ್ಗ, ಕೋಶ, ದಂಡು(ಸೈನ್ಯ) ಮತ್ತು ಮಿತ್ರ - ಇವೆಲ್ಲವನ್ನು ಸಂಪೂರ್ಣ ಸ್ವರೂಪದಲ್ಲಿ ಪಡೆಯಲು ವಿಜಯನಗರದ ಅರಸರು ಪ್ರಯತ್ನಿಸಿದರು. ಹರಿಹರ, ಬುಕ್ಕ, ಎರಡನೇ ದೇವರಾಯ, ಸಾಳ್ವನರಸಿಂಹ ಕೃಷ್ಣದೇವರಾಯ ಈ ಮೊದಲಾದ ರಾಜರ ಕಾಲದಲ್ಲಿ ಸರ್ಕಾರ ಅತ್ಯುತ್ತಮ ಆಡಳಿತ ವ್ಯವಸ್ಥೆಯನ್ನು ಪಡೆಯಿತು. ನಾಡು,

ಮಹಾಜನ ಮತ್ತು ವ್ಯಾಪಾರಿ ಸಂಸ್ಥೆಗಳು, ಕೈಗಾರಿಕಾ ಸಂಸ್ಥೆಗಳು ಇರುವುದು ತಿಳಿದುಬರುತ್ತದೆ. ರಾಜಸಭೆ, ಮಂತ್ರಿಮಂಡಳದಿಂದ ಕೂಡಿದ ಸಭೆ, ಮಂತ್ರಿಗಳನ್ನೊಳಗೊಂಡ ಇತರ ಪ್ರಾಂತದ ಅಧಿಕಾರಿಗಳ ಸಭೆ ಮತ್ತು ಪ್ರಮುಖರನ್ನೊಳಗೊಂಡ ಒಂದು ದೊಡ್ಡ ಪರಿಷತ್ತು ಇರುತ್ತಿತ್ತು. ಧರ್ಮಗುರುಗಳು, ಮುಖ್ಯ ಪಂಡಿತರು, ಕವಿಗಳು, ಕಲಾವಿದರು ಈ ಪರಿಷತ್ತಿನಲ್ಲಿ ಸದಸ್ಯರಾಗಿರುತ್ತಿದ್ದರು. ಪ್ರಮುಖ ನೀತಿ ನಿರ್ಧಾರಗಳು ಚಿಕ್ಕ ಸಭೆಯಾದ ಮಂತ್ರಿ ಮಂಡಲದಲ್ಲಿ ನಡೆಯುತ್ತಿತ್ತು.

ವಿಜಯನಗರದ ಪ್ರಾಂತ ವಿಭಾಗ ಕ್ರಮವು ಸ್ವಲ್ಪಮಟ್ಟಿಗೆ ಬೇರೆಯಾಗಿದೆ. ಅವುಗಳಲ್ಲಿ ರಾಜ್ಯ, ಮಂಡಲ ಮುಂತಾದ ವರ್ಗೀಕರಣಗಳನ್ನು ಕಾಣುತ್ತೇವೆ. ಇವುಗಳನ್ನು ಮತ್ತೆ ಚಿಕ್ಕ ಚಿಕ್ಕ ವಿಭಾಗಗಳನ್ನಾಗಿ ಮಾಡಿ ಒಳನಾಡು, ಕೋಟ್ಟಂ, ಪಟ್ಟರ್, ವಿಷಯ, ನಿವೃತ್ತಿ, ನಾಡು, ಸೀಮೆ, ಮೇಲುಗ್ರಾಮ, ಚಾವಡಿ ಇತ್ಯಾದಿ ಹೆಸರುಗಳನ್ನು ಕೊಟ್ಟಿದ್ದಾರೆ. ಕೊಪ್ಪಳವು ಒಳನಾಡು ಪ್ರದೇಶದಲ್ಲಿ ಬರುತ್ತಿತ್ತು. ಕೊಪ್ಪಳವನ್ನು ವಿಜಯನಗರದರಸರು ಕಂಪಣ ಮತ್ತು ಚಾವಡಿಯೆಂದು ಹೆಸರಿಸಿದ್ದರು.

ರಾಜ್ಯಾದಾಯವು ಹಲವು ತೆರಿಗೆಗಳಿಂದ ಕ್ರೋಢೀಕೃತವಾಗುತ್ತಿತ್ತು. ಅವುಗಳಲ್ಲಿ

೧. ರೂಢವಾದ ತೆರಿಗೆಗಳು

೨. ಆಗಾಗ ಹಾಕುತ್ತಿದ್ದ ವಿಶೇಷ ತೆರಿಗೆಗಳು

೩. ತಪ್ಪಿತಸ್ಥರಿಗೆ ವಿಧಿಸುತ್ತಿದ್ದ ದಂಡಗಳು

೪. ಸರ್ಕಾರದ ಆಸ್ತಿಗಳಿಂದ ಬರುತ್ತಿದ್ದ ಉತ್ಪತ್ತಿ

೫. ಸಾಮಂತರ ಕಪ್ಪ-ಕಾಣಿಕೆಗಳು

ಇವು ಮುಖ್ಯವಾದವು. ತೆರಿಗೆಗಳನ್ನು ಸಾಮಾನ್ಯವಾಗಿ ಧಾನ್ಯದ ರೂಪದಲ್ಲಿ ವಸೂಲಿ ಮಾಡಲಾಗುತ್ತಿತ್ತು. ಗದ್ಯಾಣ ಮತ್ತು ಚಿನ್ನದ ನಾಣ್ಯಗಳಾದ ಕಳಂಜುಗಳನ್ನು ತೆಗೆದುಕೊಳ್ಳುತ್ತಿದ್ದುದೂ ಉಂಟು. ತೆರಿಗೆಯನ್ನು ಅನೇಕ ಸೌಲಭ್ಯಗಳಲ್ಲಿ ಕೊಡುವ ಸೌಲಭ್ಯವೂ ಪ್ರಜೆಗಳಿಗಿತ್ತು. ವಿಜಯನಗರ ಕಾಲದಲ್ಲಿ ತೆರಿಗೆಗಳ ಪದ್ಧತಿ ಇನ್ನೂ ಹೆಚ್ಚು ವ್ಯವಸ್ಥಿತವಾಯಿತು. ಈ ಕಾಲದ ಶಾಸನಗಳಲ್ಲಿ ತೆರಿಗೆಯ

ಮಾತು ಮತ್ತೆ ಮತ್ತೆ ಬರುತ್ತದೆ. ವರಿ, ಕಟ್ಟಾಯ ಮೊದಲಾದ ಮಾತುಗಳು ಅಲ್ಲಿ ಸಿಕ್ಕುತ್ತವೆ. ಅವುಗಳಲ್ಲಿ ಒಂಬತ್ತು ವಿಧವಾದ ತೆರಿಗೆಗಳನ್ನು ಹಾಕಿದ್ದರೆಂಬುದು ತಿಳಿದುಬರುತ್ತದೆ.

೧. ಜಮೀನಿನ ತೆರಿಗೆ

೨. ಆಸ್ತಿ ತೆರಿಗೆ

೩. ವ್ಯಾಪಾರ ತೆರಿಗೆ

೪. ಉದ್ಯೋಗ ತೆರಿಗೆ

೫. ಕೈಗಾರಿಕೆ ತೆರಿಗೆ

೬. ಸೈನ್ಯಕ್ಕಾಗಿ ಕೊಡುಗೆ

೭. ಸಾಮಾಜಿಕ ತೆರಿಗೆ

೮. ದಂಡಗಳು

೯. ಇತರ ತೆರಿಗೆಗಳು

ಹೀಗೆ ಆದಾಯಗಳನ್ನು ಹೆಚ್ಚಿಸಿಕೊಳ್ಳುವುದು ಆಡಳಿತದ ಒಂದು ಮುಖವಾದರೆ, ಅದನ್ನು ವಿತರಣೆಯಿಂದ ವಿನಿಯೋಗಿಸುವುದು ಇನ್ನೊಂದು ಮುಖ. ಜನರಿಂದ ಪಡೆದ ಹಣವನ್ನು ಸರ್ಕಾರವು ಜನರಿಗಾಗಿಯೇ ಖರ್ಚು ಮಾಡುತ್ತಿತ್ತು. ಮುಸ್ಲಿಂ ಅರಸರು ಜಿಜಿಯಾ ಎಂಬ ಧಾರ್ಮಿಕ ತೆರಿಗೆಯನ್ನು ಹಿಂದೂಗಳ ಮೇಲೆ ವಿಧಿಸುತ್ತಿದ್ದರು. ಆದರೆ ಕೊಪ್ಪಳ ಪ್ರದೇಶದ ಹಿಂದೂಗಳ ಮೇಲೆ ಈ ತೆರಿಗೆಯನ್ನು ವಿಧಿಸಿರುವ ಉಲ್ಲೇಖವಿಲ್ಲ. ವಸಾಹತು ಕಾಲಘಟ್ಟದಲ್ಲಿ ಕೊಪ್ಪಳವು ಇಸ್ಲಾಂ ಮತ್ತು ಕ್ರೈಸ್ತ ಧರ್ಮೀಯರ ಆಡಳಿತಕ್ಕೆ ಒಳಪಟ್ಟಿತ್ತು. ಈ ಹಿನ್ನೆಲೆಯಲ್ಲಿ ಕೊಪ್ಪಳ ಪ್ರದೇಶ ದ್ವಿಮುಖ ತೆರಿಗೆ ಪದ್ಧತಿಗೆ ಒಳಪಟ್ಟಿತ್ತು. ಬ್ರಿಟಿಷರಿಗೆ ಕೊಡಬೇಕಾದ ತೆರಿಗೆ ಒಂದು ಕಡೆಯಾದರೆ ನಿಜಾಮನಿಗೆ ಕೊಡಬೇಕಾದ ತೆರಿಗೆ ಒಂದುಕಡೆ. ಈ ಎರಡೂ ತೆರಿಗೆಗಳನ್ನು ವಸೂಲಿ ಮಾಡುತ್ತಿದ್ದ ಅಧಿಕಾರಿಯು ಒಬ್ಬನೇ ಆಗಿರುತ್ತಿದ್ದ. ಕೊಪ್ಪಳದ ಕೋಟೆಯ ಮುಂಭಾಗದಲ್ಲಿ ಅದಕ್ಕಾಗಿ ಒಂದು ಕಛೇರಿಯನ್ನೇ ತೆರೆಯಲಾಗಿತ್ತೆಂದು ತಿಳಿದುಬರುತ್ತದೆ.

ಅದೇನೇ ಇದ್ದರೂ ಕೊಪ್ಪಳದ ಪ್ರದೇಶವು ವಿವಿಧ ಅರಸರುಗಳಿಂದ ವಿವಿಧ ಧರ್ಮೀಯರಿಂದ ವಿವಿಧ ಭಾಷಿಕರಿಂದ ಆಳಿಸಿಕೊಂಡಿದೆ. ಇಲ್ಲಿ ಅನೇಕ ತಿರುವುಗಳನ್ನು ಕಾಣಬಹುದು. ಕರ್ನಾಟಕದಲ್ಲಿ ಇದೊಂದು ವಿಶಿಷ್ಟವಾದ ಪ್ರದೇಶ. ಏಕೆಂದರೆ ಇಷ್ಟು ಆಡಳಿತಾತ್ಮಕ ಪ್ರಯೋಗಗಳು ಎಲ್ಲೂ ದೊರೆಯಲಿಕ್ಕಿಲ್ಲ. ಒಂದುಕಾಲಘಟ್ಟದಲ್ಲಿ ಬೌದ್ಧರ ನೇರ ಆಳ್ವಿಕೆಗೆ ಒಳಪಟ್ಟಿದ್ದ ಕೊಪ್ಪಳವು ಆಗಲೇ ತನ್ನ ಪ್ರಸಿದ್ಧಿಯನ್ನು ಪಡೆದುಕೊಂಡಿತ್ತು. ಜೈನರು ಅದನ್ನೊಂದು ಶೈಕ್ಷಣಿಕ ಮತ್ತು ಧಾರ್ಮಿಕ ಕೇಂದ್ರವನ್ನಾಗಿ ಕಟ್ಟುವಲ್ಲಿ ಯಶಸ್ವಿಯಾದರು. ಇಸ್ಲಾಂ ಅರಸರು ಕೋಟೆಯನ್ನು ಕಟ್ಟಿ ಒಂದು ವಸಾಹತನ್ನಾಗಿ ನಿರ್ಮಾಣಮಾಡಿಕೊಂಡರು. ಕ್ರೈಸ್ತ ಧರ್ಮೀಯರು ಅಪ್ರತ್ಯಕ್ಷವಾಗಿ ಈ ಪ್ರದೇಶವನ್ನು ಆಳಿದರು. ಇಂತಹ ವಿವಿಧ ಸನ್ನಿವೇಶಗಳಲ್ಲಿ ಕೊಪ್ಪಳದ ಜನತೆ ಎಲ್ಲರಲ್ಲೂ ಸಮನ್ವಯವನ್ನು ಕಂಡುಕೊಂಡು ಬಂದ ಕಷ್ಟಗಳನ್ನು ಯಶಸ್ವಿಯಾಗಿ ಎದುರಿಸಿರುವುದು ಮಾತ್ರ ಸತ್ಯದ ಸಂಗತಿ.

ಅಧ್ಯಾಯ ೮

# ಕೊಪ್ಪಳ : ಶಿಲಾಶಾಸನಗಳು, ವೀರಗಲ್ಲುಗಳು, ಮತ್ತು ನಿಶಿಧಿಕಲ್ಲುಗಳ ಅವಲೋಕನ

ಕೊಪ್ಪಳ ಪರಿಸರದಲ್ಲಿ ಸುಮಾರು ೨೦೦ ಶಾಸನಗಳನ್ನು ಈವರೆಗೆ ವಿದ್ವಾಂಸರು ಪತ್ತೆ ಹಚ್ಚಿದ್ದಾರೆ. ಇನ್ನೂ ಶಾಸನಗಳು ದೊರೆಯಬಹುದೆಂದು ಆ ಮೂಲಕ ಶಾಸನಗಳ ಸಂಖ್ಯೆ ಹೆಚ್ಚಾಗಬಹುದೆಂದು ವಿದ್ವಾಂಸರು ಶಂಕಿಸುತ್ತಾರೆ. ಸ್ವಾತಂತ್ರ್ಯಪೂರ್ವದಲ್ಲಿ ಕೊಪ್ಪಳವು ಜಿಲ್ಲಾ ಕೇಂದ್ರವಾಗಿತ್ತು ನಂತರ ಕೊಪ್ಪಳವು ರಾಯಚೂರು ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರವಾಯಿತು. ೧೯೯೭ರ ಕರ್ನಾಟಕ ಜಿಲ್ಲಾ ಮರುವಿಂಗಡಣಾ ಸಂದರ್ಭದಲ್ಲಿ ಕೊಪ್ಪಳವು ಮತ್ತೆ ಜಿಲ್ಲಾ ಕೇಂದ್ರವಾಗಿ ಪರಿವರ್ತನೆಯಾಯಿತು. ಇಂದು ಈ ಜಿಲ್ಲೆಯಲ್ಲಿ ಕೊಪ್ಪಳ, ಗಂಗಾವತಿ, ಯಲಬುರ್ಗಾ ಮತ್ತು ಕುಷ್ಟಗಿ

ಈ ನಾಲ್ಕು ತಾಲ್ಲೂಕುಗಳಿವೆ. ತುಂಗಭದ್ರಾ ಆಣೆಕಟ್ಟು ಕಟ್ಟಿದಮೇಲೆ ಗಂಗಾವತಿ ತಾಲೂಕಿನ ಬಹುತೇಕ ಪ್ರದೇಶವು ನೀರಾವರಿ ಪ್ರದೇಶವಾಗಿದೆ. ಇದಕ್ಕೂ ಮೊದಲು ಹುಲಿಗಿ ಬಳಿಯ ತುಂಗಭದ್ರಾ ನದಿಯ ಸೀಳು ನಾಲೆ ಮತ್ತು ಸಾಣಾಪುರದ ಪ್ರಾಚೀನ ನಾಲೆಗಳು ಕೃಷಿಗೆ ನೆರವಾಗುತ್ತಿದ್ದವು. ಪುರದ ಬಳಿ ಹರಿಯುವ ತುಂಗಭದ್ರಾ ಹೊಳೆ ಹಾಗೂ ಕಿನ್ನಾಳದ ಕಡೆಯಿಂದ ಬರುವ ಹಿರೇಹಳ್ಳಗಳ ಇಕ್ಕೆಲಗಳು ನೀರಾವರಿ ಪ್ರದೇಶವಾಗಿದ್ದವು. ಇದರಿಂದಾಗಿ ಇವು ಜನವಸತಿ ಪ್ರದೇಶಗಳಾಗಿದ್ದವು. ಉಳಿದಂತಿರುವ ಬಯಲು ಭೂಮಿ ಒಣಪ್ರದೇಶವಾಗಿರುವುದರಿಂದ ಪ್ರಾಚೀನ ಕಾಲಘಟ್ಟದಿಂದಲೂ ಇಲ್ಲಿ ಜನವಸತಿ ಕಡಿಮೆ ಇತ್ತು. ಆ ಕಾರಣಕ್ಕಾಗಿ ಶಾಸನಗಳು, ಸ್ಮಾರಕಗಳು ಇನ್ನಿತರ ಚರಿತ್ರೆಯ ಅವಶೇಷಗಳು ಉಳಿದಿರುವುದು ತಿಳಿದುಬರುತ್ತದೆ. ನೀರಿನ ಆಸರೆ ಗ್ರಾಮಗಳಲ್ಲಿ ಚರಿತ್ರೆಯಲ್ಲಿ ಜನವಸತಿ ಇದ್ದ ಕಾರಣಕ್ಕಾಗಿ ಅಲ್ಲಿ ಮಾನವನಿಗೆ ಅಗತ್ಯವಿರುವ ಎಲ್ಲ ಚಟುವಟಿಕೆಗಳು ನೆಡೆದಿರಬಹುದು. ಆ ಹಿನ್ನೆಲೆಯಲ್ಲಿ ಸಮಾರು ೨೦೦ಕ್ಕೂ ಹೆಚ್ಚು ಶಾಸನಗಳು ಅಲ್ಲಿ ಸಿಗುತ್ತವೆ. ಜಿಲ್ಲಾ ಕೇಂದ್ರವಾದ ಇಂದಿನ ಕೊಪ್ಪಳವು ಪೂರ್ವ, ಪಶ್ಚಿಮ, ದಕ್ಷಿಣ ದಿಕ್ಕುಗಳಲ್ಲಿ ಬೆಟ್ಟಗಳಿಂದ ಆವೃತವಾಗಿದೆ. ಇಲ್ಲಿ ಕಟ್ಟಿದ ಕೋಟೆಗಳು ಮತ್ತು ಅಗ್ರಹಾರಗಳು ವಾಸಯೋಗ್ಯವಾಗಿ ಬೌದ್ಧಿಕ, ಧಾರ್ಮಿಕ, ಶೈಕ್ಷಣಿಕ ಮತ್ತು ಆಧ್ಯಾತ್ಮಿಕ ಕೇಂದ್ರಗಳಾಗಲು ನೆರವಾಗಿವೆ. ರಾಜರು ಹೊರಡಿಸಿದ ಆಜ್ಞೆಗಳು, ಅನುಶಾಸನಗಳು, ಈ ಪ್ರದೇಶದಲ್ಲಿ ಹೇರಳವಾಗಿ ದೊರಕುತ್ತವೆ.

### ೮.೧. ಶಿಲಾಶಾಸನಗಳು

ಕರ್ನಾಟಕದಲ್ಲಿ ಶಾಸನಗಳ ಅಧ್ಯಯನವು ವಸಾಹತು ಕಾಲಘಟ್ಟದಿಂದ ಆರಂಭವಾಯಿತು. ಕ್ರೈಸ್ತ ಮಿಶನರಿಗಳು ಈ ಕಾರ್ಯಕ್ಕೆ ಕೈಹಾಕಿದರು. ಅವರ ಯಶಸ್ಸಿನ ಫಲವೇ ಶಾಸನಶಾಸ್ತ್ರವು ಒಂದು ಅಧ್ಯಯನ ಶಿಸ್ತುವಾಗಿ ರೂಪಿತವಾಯಿತು. ಆವರೆಗೆ ಶಾಸನಗಳಿಗೆ ಕೊಡದಿದ್ದ ಮಹತ್ವವು ಆನಂತರ ಕ್ರಮೇಣ ಶಾಸ್ತ್ರ ಬೆಳೆದಂತೆಲ್ಲಾ ಶಾಸನಗಳಿಗೆ ಕೊಡುವ ಮತ್ತು ಸಹಜ ಕುತೂಹಲವನ್ನು ಕಂಡುಕೊಂಡು ಶಾಸನಗಳ ಶೋಧನೆ ಕರ್ನಾಟಕದಲ್ಲಿ ನಡೆಯತೊಡಗಿತು. ಕಳೆದ ೩ ಶತಮಾನಗಳಲ್ಲಿ ಕರ್ನಾಟಕದಲ್ಲಿ

ಶಾಸನಗಳ ಸಂಶೋಧನೆ ಭರದಿಂದ ಸಾಗುತ್ತಿದೆ. ಆದರೆ ಇನ್ನೂ ಕನ್ನಡ ನಾಡಿನ ಗತಚರಿತ್ರೆಯನ್ನು ಸಾರುವ ಕನ್ನಡಿಗರ ರಾಜಕೀಯ, ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ಆಧ್ಯಾತ್ಮಿಕ, ಬೌದ್ಧಿಕ ಸ್ಥಿತಿಗತಿಗಳನ್ನರಿಯಲು ಉಪಯುಕ್ತವಾಗುವ ಶಾಸನಗಳು ಸಂಪೂರ್ಣವಾಗಿ ದೊರೆತಿಲ್ಲ. ಇನ್ನು ಆ ಪ್ರಕ್ರಿಯೆ ನಡೆಯುತ್ತಿದೆ. ಈ ನಿಟ್ಟಿನಲ್ಲಿ ಕನ್ನಡ ವಿಶ್ವವಿದ್ಯಾನಿಲಯ ಮತ್ತೊಂದು ಮಹತ್ವದ ಹೆಜ್ಜೆಯನ್ನಿಟ್ಟಿದೆ. ಕನ್ನಡ ವಿಶ್ವವಿದ್ಯಾಲಯ ಕರ್ನಾಟಕದ ಎಲ್ಲಾ ಶಾಸನಗಳನ್ನು ಕ್ರೋಢೀಕರಿಸುವ ಯೋಜನೆಗಳನ್ನು ಹಮ್ಮಿಕೊಂಡಿದೆ. ಆ ಯೋಜನೆಯು ಜಿಲ್ಲಾವಾರು ಶಾಸನ ಸಂಗ್ರಹ ಯೋಜನೆಯಾಗಿದ್ದು ಈಗಾಗಲೇ ಎರಡು ಜಿಲ್ಲೆಗಳ ಸಮಗ್ರ ಶಾಸನಗಳನ್ನು ಸಂಪಾದಿಸಿದ್ದಾರೆ. ಇನ್ನೂ ೨೫ ಜಿಲ್ಲೆಗಳ ಶಾಸನಗಳ ಸಮಗ್ರ ಸಂಪಾದನೆ ಆಗಬೇಕಾಗಿದೆ. ಈ ನಿಟ್ಟಿನಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅಭಿನಂದನೆಗಳನ್ನು ಸಲ್ಲುತ್ತವೆ.

ಕ್ರೈಸ್ತ ಮಿಶನರಿಗಳಿಂದ ಆರಂಭವಾದ ಈ ಕೆಲಸ ಸ್ಥಳೀಯ ವಿದ್ವಾಂಸರೊಡಗೂಡಿ ಇಂದಿಗೂ ನಡೆಯುತ್ತಿದೆ. ಕನ್ನಡ ನಾಡಿನಲ್ಲಿ ಈ ಕಾರ್ಯ ಪ್ರಾರಂಭವಾದದ್ದು ಜೆ. ಎಫ್. ಫ್ಲೀಟ್, ಕೀಲ್ ಹಾರ್ನ್, ಎಂ.ಸಿ. ಬರ್ನಲ್, ಎಲ್. ಡಿ. ಬಾರ್ನೆಟ್, ಆರ್. ನರಸಿಂಹಾಚಾರ್, ಹೆಚ್. ಕೃಷ್ಣಶಾಸ್ತ್ರಿ, ಎಂ. ಹೆಚ್. ಕೃಷ್ಣ, ಆರ್. ಎಸ್. ಪಂಚಮುಖಿ ಮುಂತಾದವರ ಶ್ರಮದ ಫಲವಾಗಿ ಅಪಾರವಾದ ಶಾಸನಸಂಪತ್ತು ಇಂದು ಸಂಗ್ರಹಿತವಾಗಿದೆ. ತಮಿಳು ನಾಡನ್ನು ಬಿಟ್ಟರೆ ಕರ್ನಾಟಕದಲ್ಲಿ ದೊರೆತಿರುವಷ್ಟು ಶಾಸನಗಳು ಬಹುಶಃ ಭಾರತದ ಇನ್ನಾವ ಭಾಗದಲ್ಲಿಯೂ ದೊರೆತಿಲ್ಲ ಎನ್ನಬಹುದು. ಎಪಿಗ್ರಫಿಯಾ ಕರ್ನಾಟಕದ ಹಲವಾರು ಸಂಪುಟಗಳನ್ನು ಎಪಿಗ್ರಾಫಿಯಾ ಇಂಡಿಯಾ ಮತ್ತು ದಕ್ಷಿಣಭಾರತದ ಶಾಸನಗಳು ಮೊದಲಾದ ಹಲವಾರು ಗ್ರಂಥಗಳಲ್ಲಿ ಪ್ರಕಟವಾದ ಕನ್ನಡ ನಾಡಿನ ಶಾಸನಗಳನ್ನು ನೋಡಿದರೆ ಇದು ಮನದಟ್ಟಾಗುತ್ತದೆ. ಇಂದು ಕರ್ನಾಟಕದಲ್ಲಿ ಪ್ರಕಟವಾಗಿರುವ ಶಾಸನಗಳ ಸಂಖ್ಯೆ ಸುಮಾರು ೨೫ ಸಾವಿರಕ್ಕೂ ಹೆಚ್ಚು. ಇವುಗಳಲ್ಲದೆ ತಾಮ್ರಪಟಗಳ ಮೇಲೂ ಶಾಸನಗಳನ್ನು ಬರೆದಿರುವುದು ಸಂಶೋಧನೆಗೊಳಪಟ್ಟಿದೆ. ಅಚ್ಚುಕಟ್ಟಾದ ತಾಮ್ರದ ಫಲಕವನ್ನು ಮಾಡಿಸಿ ಅವುಗಳ ಮೇಲೆ ಲೇಖನಿಯಿಂದ ಅಕ್ಷರಗಳನ್ನು ಕೊರೆಯುತ್ತಿದ್ದರು. ಇಂಥ ಅನೇಕ ಫಲಕಗಳನ್ನು ತಾಮ್ರದ ಬಳೆಯಲ್ಲಿ

ಪೋಣಿಸಿ ಅದಕ್ಕೆ ರಾಜಮುದ್ರೆಯನ್ನು ಹಾಕಿ ದಾನ ಪಡೆದ ವ್ಯಕ್ತಿಗೆ ಅದನ್ನು ಕೊಡಲಾಗುತ್ತಿತ್ತು. ಇಂದು ದೊರೆತಿರುವ ಶಾಸನಗಳಲ್ಲಿ ವೀರಗಲ್ಲುಗಳು ಮಾಸ್ತಿಗಲ್ಲುಗಳು ನಿಷಧಿಕಲ್ಲುಗಳನ್ನು ಬಿಟ್ಟರೆ ಒಂದಲ್ಲ ಒಂದು ಬಗೆಯ ಶಾಸನಗಳನ್ನು ಕಲ್ಲಿನಲ್ಲಿಯೇ ಕೆತ್ತಲಾಗಿದೆ. ತಾಮ್ರ ಮತ್ತು ಶಿಲೆಗಳಲ್ಲಿ ಮಾತ್ರ ಶಾಸನಗಳನ್ನು ಕೆತ್ತಿರುವುದು ತಿಳಿದುಬರುತ್ತದೆ.

ಶಾಸನಗಳನ್ನು ವಿಭಾಗವಾರು ಹಂಚಿಕೆ ಮಾಡಲಿಕ್ಕೆ ಮತ್ತು ಅವುಗಳನ್ನು ಅಧ್ಯಯನದ ಅನುಕೂಲಕ್ಕಾಗಿ ವಿಂಗಡಿಸಿಕೊಳ್ಳಲು ಐದು ತೆರನಾದ ಶಾಸನಗಳನ್ನು ಕನ್ನಡನಾಡಿನಲ್ಲಿ ಕಾಣಬಹುದು. ಕೊಪ್ಪಳದಲ್ಲಿ ಈ ಐದೂ ಬಗೆಯ ಶಾಸನಗಳನ್ನು ಕಾಣಬಹದು. ಅವುಗಳೆಂದರೆ :

೧. ದೇವಸ್ಥಾನದ ದತ್ತಿ ಶಾಸನಗಳು

೨. ವಿದ್ಯಾದಾನದ ಶಾಸನಗಳು

೩. ವೀರಗಲ್ಲು ಮಾಸ್ತಿಗಲ್ಲು ಮತ್ತು ನಿಷಿದಿಗಲ್ಲು ಶಾಸನಗಳು

೪. ಧರ್ಮಗುರುಗಳು ಅಥವಾ ವಿಶಿಷ್ಟ ಜನರಿಗೆ ಕೊಟ್ಟ ದಾನ-ಧರ್ಮದ ಶಾಸನಗಳು

೫. ಮೂರ್ತಿಗಳ ಮೇಲಿನ ಶಾಸನಗಳು

ಈ ಐದೂ ಭಾಗಗಳನ್ನು ನಾವು ನೋಡಿದರೆ ಮುಖ್ಯವಾಗಿ ಎರಡು ಅಂಶಗಳನ್ನು ಗಮನಿಸಬಹುದು. ದೇವಸ್ಥಾನಕ್ಕಾಗಿಯೋ ವಿದ್ಯೆಗಾಗಿಯೋ ಅಥವಾ ವಿಶಿಷ್ಟ ವ್ಯಕ್ತಿಗಳಿಗಾಗಿ ಕೊಟ್ಟ ದಾನ ಶಾಸನಗಳು ಒಂದುಬಗೆಯವು. ಇವು ಧರ್ಮದ ದೃಷ್ಟಿಯಿಂದ ಪ್ರೇರಿತವಾದ ಶಾಸನಗಳು. ವೀರಪುರುಷ ಸ್ಮಾರಕ ಮೊದಲಾದ ಸ್ಮಾರಕಗಳು ಜನತೆಯ ವೀರ ಜೀವನವನ್ನು ಪ್ರತಿಬಿಂಬಿಸುವ ಸಂಕೇತಗಳು. ಹೀಗೆ ಪರಾಕ್ರಮ ಮತ್ತು ಧರ್ಮ ಇವೆರಡೂ ಶಾಸನಸಂಸ್ಕೃತಿಯ ಎರಡು ಕಣ್ಣುಗಳಂತೆ ಕಂಗೊಳಿಸಿವೆ.

ಕನ್ನಡದಲ್ಲಿ ಅತ್ಯಂತ ಪ್ರಾಚೀನವಾದ ಹಲ್ಮಿಡಿ ಶಾಸನವು ಪರಾಕ್ರಮವನ್ನು ಪುರಸ್ಕರಿಸು ಪುದಕ್ಕಾಗಿಯೇ ಹುಟ್ಟಿದೆ. ಇದು ಸತ್ತವರ ಸ್ಮಾರಕಕ್ಕಾಗಿ ನೆಟ್ಟ ವೀರಗಲ್ಲಲ್ಲ. ಆದರೆ ಹೋರಾಡಿ ಗೆದ್ದವರ

ಪುರಸ್ಕಾರಕ್ಕಾಗಿ ಕೊಟ್ಟ ದಾನಪತ್ರ. ಅದರ ಪಾಠ ಹೀಗಿದೆ :

ಜಯತಿ ಶ್ರೀ ಪರಿಷ್ವ ಂಗ (ಮ್ಯಾನತಿ) ರಚ್ಯುತಃ॥

ದಾನ ವಾಕ್ಪೋರ್ಣಿರ್ಯಗಾನ್ತಾಗ್ನಿಃ (ಶಿಷ್ಟಾನಾನ್ತು) ಸುದರ್ಶನಃ॥

ನಮಃ ಶ್ರೀಮತ್ಕದಂಬಪನ್ತ್ಯಾಗಸಂಪನ್ನನ್ಕಲಭೋರ (ನಾ) ಅರಿಕಕುಸ್ಥ ಭಟ್ಟೋರನಾಳೆ, ನರಿದಾವಿಳೆ ನಾಡುಳ್ ಮೃಗೇಶ ನಾಗೇನ್ದ್ರಾ ಭೀಳರ್ಭ್ಬ್ಯ್‌ಟ ಹರಪ್ಪೋರ್, ಶ್ರೀ ಮೃಗೇಶ ನಾಗಹ್ವಯರಿರ್ವ್ವರಾ ಬಟರಿ ಕುಲಾಮಲವ್ಯೋಮತಾರಾಧಿನಾಥನ್ನಳಪಗಣ ಪಶುಪತಿಮಾ ದಕ್ಷಿಣಾಪಥ ಬಹುಶತ ..................................... ಭಟ್ಟಗ್ಗಿರ್ಗಳ್ದೆ ಒಡ್ಡಲಿ ಆಪತ್ತೊನ್ದಿ ವಿಟ್ಟಾರಕರ.

ಕನ್ನಡ ಭಾಷೆಯಲ್ಲಿ ಇದುವರೆಗೆ ನಮಗೆ ಸಿಕ್ಕಿರುವ ಮೊದಲನೇ ಗದ್ಯಶಾಸನದ ಮಾದರಿ ಇದಾಗಿದೆ. ಅದಕ್ಕಿಂತ ಮುಖ್ಯವಾಗಿ ಅಲ್ಲಿ ಬರುವ ರಾಜವಂಶಗಳ ಸೂಚನೆಯು ರಾಜಕೀಯ ಇತಿಹಾಸಕ್ಕೆ ಮಹತ್ವದ್ದು. ಕದಂಬ ಕಕುತ್ಸನ ಆಳ್ವಿಕೆಯಲ್ಲಿ ನರಿದಾವಿಳೆ ನಾಡನ್ನು ಮೃಗೇಂದ್ರ ಮತ್ತು ನಾಗ ಎನ್ನುವವರುಮೊದಲು ಆಳುತ್ತಿದ್ದರು. ಆಗ ಯಲ್ಲ ಭಟಾರಿಯ ಮಗ ವಿಜಅರಸ ಎಂಬುವನು ಸೇಂದ್ರಕ ಮತ್ತು ಬಣ ಈ ಎರಡೂ ವಂಶದ ವೀರರ ಸಮ್ಮುಖದಲ್ಲಿ ಕೇಕಯ ಮತ್ತು ಪಲ್ಲವರೊಡನೆ ಯುದ್ಧ ಮಾಡಿ ಗೆದ್ದನು. ಅದಕ್ಕೆ ಮೆಚ್ಚಿ ಮೃಗೇಂದ್ರ ಮತ್ತು ನಾಗ ಎನ್ನುವವರು ಪಲ್ಮಿಡಿಯನ್ನೂ ಮತ್ತು ಮೂಳಿವಳ್ಳಿ ಎಂಬುದನ್ನು ದಾನವಾಗಿ ಕೊಟ್ಟರು ಎಂಬುದು ಈ ಶಾಸನದ ಸಾರಾಂಶ. ವೀರರಿಗೆ ರಾಜರು ನೀಡಿರುವ ಪುರಸ್ಕಾರದ ಪರಂಪರೆ ಬಹುಪ್ರಾಚೀನವಾದುದು ಎಂಬುದು ಇದರಿಂದ ತಿಳಿಯುತ್ತದೆ. ಕನ್ನಡನಾಡಿನಲ್ಲಿ ದಾನಶಾಸನಗಳ ಸಂಖ್ಯೆ ಹೆಚ್ಚಿವೆ. ಸುಮಾರು ನೂರಕ್ಕೆ ತೊಂಬತ್ತೈದರಷ್ಟು ಶಾಸನಗಳು ದಾನಶಾಸನಗಳಾಗಿವೆ. ಇವು ಕರ್ನಾಟಕ ಸಂಸ್ಕೃತಿಯ ಪ್ರಧಾನ ಅಂಶವೆಂಬುದನ್ನು ಎತ್ತಿ ತೋರಿಸುತ್ತವೆ. ಜೀವನದ ಮೌಲ್ಯಗಳಲ್ಲಿ ಧರ್ಮಕ್ಕೆ ಪ್ರಪ್ರಥಮ ಸ್ಥಾನವನ್ನಿತ್ತ ಧಾರ್ಮಿಕ ಸಂಸ್ಕೃತಿಯ ಸ್ವರೂಪ ಈ ಶಾಸನಗಳಲ್ಲಿ ಬಿಂಬಿತವಾಗಿದೆ. ಮೊದಮೊದಲು ರಚಿತವಾದ ಶಾಸನಗಳು ಪಾಠಗಳಲ್ಲಿ ಚಿಕ್ಕವಾಗಿರುತ್ತಿದ್ದವು. ನೇರವಾದ ನಿರೂಪಣೆಯನ್ನು ಒಳಗೊಂಡಿರುತ್ತಿದ್ದವು. ಆದರೆ ೧೦ನೇ

ಶತಮಾನದಿಂದೀಚೆಗೆ ಶಾಸನ ರಚನೆಯ ಪದ್ಧತಿ ಒಂದು ಅಚ್ಚುಕಟ್ಟಾದ ಪದ್ಧತಿಯಾಗಿ ರೂಪುಗೊಂಡಿತು. ವಿಷಯ ನಿರೂಪಣೆಯಲ್ಲಿ, ದಾನವನ್ನೀಯುವ ವಸ್ತುವಿನಲ್ಲಿ ಮತ್ತು ಉದ್ದೇಶಗಳಲ್ಲಿ ವೈವಿಧ್ಯವಿದ್ದರೂ ಶಾಸನದ ಪ್ರಾರಂಭ ಮತ್ತು ಮುಕ್ತಾಯದಲ್ಲಿ ಒಂದು ವ್ಯವಸ್ಥಿತ ಕ್ರಮ ಗೋಚರವಾಗುತ್ತದೆ. ಜನಜೀವನದ ಅನುಭವ, ಮನೋಧರ್ಮ ಮತ್ತು ಧಾರ್ಮಿಕ ಭಾವನೆಯವ ವಿಕಾಸದ ಚಿತ್ರವನ್ನು ಈ ಶಾಸನಗಳ ಬೆಳವಣಿಗೆಯಲ್ಲಿ ಕಂಡುಕೊಳ್ಳಬಹುದು.

ಅತ್ಯಂತ ಪ್ರಾಚೀನ ಶಾಸನಗಳ ಶಿಲಾಫಲಕಗಳ ಮೇಲೆ ನಿರ್ದಿಷ್ಟವಾದ ಯಾವ ಶಿಲ್ಪಾಕೃತಿಯೂ ಕಂಡುಬರುವುದಿಲ್ಲ. ಆದರೆ ನಂತರದ ಲಿಪಿಕಲ್ಲುಗಳ ಮೇಲೆ ಶಿವ, ನಂದಿ, ಗರುಡ, ಮಹಾವೀರ, ಬುದ್ಧ, ವಿಷ್ಣು ಮುಂತಾದವರ ಚಿತ್ರಗಳು ಕಾಣಿಸಿಕೊಳ್ಳುತ್ತವೆ. ಶೈವ-ವೈಷ್ಣವ ಧರ್ಮಗಳು ಪ್ರಬಲವಾದಾಗ ಅವುಗಳ ಪ್ರಭಾವ ಶಾಸನಗಳ ಮೇಲೂ ಮೂಡಿದಂತೆ ತೋರುತ್ತದೆ. ಲಿಪಿಕಲ್ಲಿನ ಮೇಲಿರುವ ಶಿಲ್ಪಗಳನ್ನು ನೋಡಿದೊಡನೆಯೇ ಇದು ಶೈವ ಶಾಸನವೋ ವೈಷ್ಣವ ಶಾಸನವೋ ಎಂಬುದನ್ನು ಹೇಳಬಹುದು. ಅನಂತರ ಪ್ರಾರಂಭದ ಶ್ಲೋಕವನ್ನು ಓದುತ್ತಿದ್ದಂತೆ ಆ ಅಂಶ ಇನ್ನಷ್ಟು ಸ್ಪಷ್ಟವಾಗುತ್ತದೆ. ಶಿವನನ್ನೋ ವಿಷ್ಣುವನ್ನೋ ಅಥವಾ ಜಿನನನ್ನೋ ಕುರಿತ ಸ್ತುತಿ ರೂಪವಾದ ಸಂಸ್ಕೃತ ಶ್ಲೋಕದಿಂದ ಶಾಸನ ಪ್ರಾರಂಭವಾಗುತ್ತದೆ. ಸಾಮಾನ್ಯವಾಗಿ ಶೈವಶಾಸನಗಳಲ್ಲೆಲ್ಲಾ ಮೊದಲು ಕಾಣುವ ಶ್ಲೋಕವಿದು :

ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ
ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ॥

ಚಾಮರದಂತಹ ಬಾಲಚಂದ್ರನಿಂದ ಚುಂಬಿತವಾದ ಉತ್ತುಂಗ ಜಟಾಜೂಟವನ್ನುಳ್ಳವನು ಮೂರು ಲೋಕಗಳ ರಚನೆಗೆ ಮೂಲಸ್ತಂಭರೂಪನೂ ಆದ ಶಂಭುವಿಗೆ ನಮಸ್ಕಾರ. ಒಂದು ವೇಳೆ

ವೈಷ್ಣವ ಶಾಸನವಾಗಿದ್ದರೆ ಅದರ ಶ್ಲೋಕವು ಹೀಗಿರುತ್ತದೆ :

ಜಯತಿ ಆವಿಷ್ಕೃತಂ ವಿಷ್ಣೋರ್ವರಾಹಂ ಶೋಭಿತಾರ್ಣವಂ
ದಕ್ಷಿಣೋನ್ನತದಂಷ್ಟ್ರಾಗ್ರ ವಿಶ್ರಾಂತಭುವನಂ ವಪುಃ॥

ಸಮುದ್ರವನ್ನು ಹೊಕ್ಕು ಶೋಭೆಗೊಳಿಸಿ ಅಲ್ಲಿಂದ ಪ್ರಶಾಂತವಾದ ಭೂಮಿಯನ್ನು ತನ್ನ ಬಲದಾಡೆಯ ಮೇಲೆ ಹೊತ್ತು ತಂದ ವರಾಹ ರೂಪದ ವಿಷ್ಣುವಿಗೆ ಜಯವಾಗಲಿ. ಒಂದು ವೇಳೆ ಜೈನ ಶಾಸನವಾಗಿದ್ದರೆ ಅದರ ಪ್ರಾರಂಭದ ಶ್ಲೋಕವು ಹೀಗಿರುತ್ತದೆ :

ಶ್ರೀಮತ್ ಪರಮ ಗಂಭೀರ ಸ್ಯಾದ್ವಾದಾಮೋಘ ಲಚ್ಚಣಮ್
ಜಿಯಾತ್ ತ್ರೈಲೋಕ್ಯ ನಾಥಸ್ಯ ಶಾಸನಂ ಜಿನಶಾಸನಂ।

ತ್ರೈಲೋಕ್ಯನಾಥನ ಅತ್ಯಂತ ಉದಾತ್ತವಾದ ಸ್ಯಾದ್ವಾದ್ದದ ಜಿನ ಶಾಸನವು ಅಮೋಘವಾದ ಜಯವನ್ನು ಪಡೆಯಲಿ. -ಹೀಗೆ ಈ ಮೂರುಮತಗಳ ಶಾಸನಗಳು ತಮ್ಮ ತಮ್ಮ ಇಷ್ಟದೇವತಾ ಸ್ತುತಿರೂಪದಲ್ಲಿ ಮಂಗಳ ಶ್ಲೋಕಗಳೊಡನೆ ಪ್ರಾರಂಭವಾಗುತ್ತವೆ.

ಮಂಗಳ ಶ್ಲೋಕವಾದ ಮೇಲೆ ರಾಜ್ಯವನ್ನಾಳುತ್ತಿರುವ ಚಕ್ರವರ್ತಿಯ ಸಕಲ ಬಿರುದಾವಳಿಗಳೊಡನೆ ಶಾಸನವು ಪ್ರಾರಂಭವಾಗುತ್ತದೆ. ಚಕ್ರವರ್ತಿಯ ವಂಶವೃಕ್ಷದ ದೀರ್ಘವಾದ ವರ್ಣನೆ ಇಲ್ಲಿ ಬರುತ್ತದೆ. ಕೆಲವು ವೇಳೆ ಮೂರು-ನಾಲ್ಕು ತಲೆಮಾರುಗಳಷ್ಟು ವಂಶಗಳನ್ನು ಹೇಳಿದರೆ, ಇನ್ನೂ ಕೆಲವು ಶಾಸನಗಳಲ್ಲಿ ವಂಶದ ಮೂಲ ಪುರುಷನನ್ನು ಪ್ರಾರಂಭಿಸಿ ಹೇಳಿರುವುದುಂಟು. ಬಿರುದಾವಳಿಗಳೆಲ್ಲಾ ಗದ್ಯದಲ್ಲಿದ್ದು ವಂಶವೃಕ್ಷದ ವರ್ಣನೆ ಸಾಮಾನ್ಯವಾಗಿ ಪದ್ಯದಲ್ಲಿರುತ್ತದೆ. ದಾನಶಾಸನವಾದರೆ ದಾನವನ್ನು ಕೊಡುವವನು ಚಕ್ರವರ್ತಿಯಲ್ಲದೆ ಬೇರೆಯವರಾಗಿದ್ದರೆ ಹಾಗೆ ದಾನವೀಯುವ ಸಾಮಂತ ರಾಜ ಅಥವಾ ದಂಡನಾಯಕ ಮತ್ತು ವ್ಯಕ್ತಿಯ ವರ್ಣನೆ ಬರುತ್ತದೆ. ಅನಂತರ ಶಾಸನದ ಕಾಲ ಉಕ್ತವಾಗುತ್ತದೆ. ಇದು ಶಕವರ್ಷಗಳಲ್ಲಿರುತ್ತದೆ. ಹೆಚ್ಚಾಗಿ ಶಾಲಿವಾಹನಶಕ ಕೆಲವುಕಡೆ

ವಿಕ್ರಮಶಕೆ ಬರುತ್ತದೆ. ವರುಷ-ತಿಂಗಳು-ದಿನಗಳನ್ನು ಹೇಳುವಂತೆ ನಿಖರವಾದ ರೀತಿಯಲ್ಲಿ ಕಾಲವನ್ನು ಶಾಸನಗಳು ಕೊಡುತ್ತವೆ.

ಕೊಡಬೇಕಾದ ದಾನವನ್ನು ನಿರ್ದೇಶಿಸುವ ಭಾಗವು ನಿರ್ದೇಶಿತವಾಗುತ್ತದೆ. ಕೊಡುವ ದಾನವು ಜಮೀನಾಗಿದ್ದರೆ ಅದರ ಗಡಿಗಳನ್ನು ಹೇಳುವುದು, ಗ್ರಾಮವಾದರೆ ಅದರ ಸೀಮೆಗಳನ್ನು ನಿರ್ಧರಿಸುವುದು, ಸುಂಕದ ಹಣವಾದರೆ ಅದರ ವಿವರಗಳನ್ನು ಕೊಡುವದು -ಹೀಗೆ ದಾನದ ಬಗೆಗೆ ವಿವರಗಳಿರುತ್ತವೆ. ಅನಂತರ ದಾನವನ್ನು ಕೊಡುತ್ತಿರುವುದು ಯಾರಿಗೆ? ದೇವಾಲಯಕ್ಕೋ? ಸಂಸ್ಥೆಗೋ? ಮಠಕ್ಕೋ? ವ್ಯಕ್ತಿಗೋ ಮತ್ತು ದಾನವನ್ನು ಕೊಡುತ್ತಿರುವ ಕಾರಣವೇನು? ಪೂಜಾದಿಕಾರ್ಯಗಳಿಗೋ? ಅನ್ನಸತ್ರಕ್ಕೋ? ವಿದ್ಯಾದಾನಕ್ಕೋ? ಈ ಅಂಶಗಳ ವಿವರಣೆ ಬರುತ್ತದೆ. ಶಾಸನದ ಕೊನೆ ಅಥವಾ ಮುಕ್ತಾಯದ ಭಾಗವು ಮುಂದಿನವರು ಕಾಪಾಡಬೇಕಾದ ಹೊಣೆಗಾರಿಕೆಯನ್ನು ಹೇಳುತ್ತದೆ.

ಸ್ವದತ್ತಂ ವಾ ಪರದತ್ತಂ ವಾ ಯೋ ಹರತೇ ವಸುಂಧರಾಂ
ಷಷ್ಟಿರ್ ವರ್ಷ ಸಹಸ್ರಾಣಿ ವಿಷ್ಠಾಮ್ ಜ್ಯಾಯತೇ ಕ್ರಿಮಿ॥

ಅಂದರೆ ತಾವು ಕೊಟ್ಟದ್ದನ್ನಾಗಲಿ ಅಥವಾ ಪರರು ಕೊಟ್ಟದ್ದನ್ನಾಗಲಿ ಕೊಟ್ಟದಾನವನ್ನು ಯಾರು ಅಪಹರಿಸುತ್ತಾರೋ ಅವರು ಅರವತ್ತು ಸಾವಿರ ವರ್ಷಗಳು ಕ್ರಿಮಿಗಳಾಗಿ ಹುಟ್ಟುತ್ತಾರೆ. ಇದರ ಜೊತೆಗೆ ಮತ್ತೆರಡು ಶ್ಲೋಕಗಳು ಪ್ರಚಲಿತವಾಗಿವೆ.

## ಕೊಪ್ಪಳದ ಶಿಲಾಶಾಸನಗಳ ಅಧ್ಯಯನಕಾರರು

ಕರ್ನಾಟಕದಲ್ಲಿ ಶಾಸನಗಳ ಅಧ್ಯಯನ ಭರದಿಂದ ಸಾಗುತ್ತಲೆ ಹಲವು ಕೊಪ್ಪಳದ ಶಾಸನಗಳನ್ನು ಸಂಗ್ರಹಿಸಲಾಯಿತು. ಕ್ರೈಸ್ತ ಮಿಶನರಿಗಳ ಕಾಲದಿಂದ ಕೊಪ್ಪಳದಲ್ಲಿ ಶಾಸನಗಳ ಅಧ್ಯಯನ ನಿರಂತರವಾಗಿ ನಡೆಯುವ ಪ್ರಕ್ರಿಯೆಯಾಗಿದೆ. ಕೊಪ್ಪಳದಲ್ಲಿ ಶಾಸನಸಂಗ್ರಹಣೆಗೆಂದು ತೊಡಗಿದ

ಆದ್ಯರೆಂದರೆ ಬೆಂಜಮಿನ್ ಲೂಯಿ ರೈಸ್. ಅವರು ಪ್ರಪ್ರಥಮವಾಗಿ ಕೊಪ್ಪಳದ ಶಾಸನಗಳ ಮೇಲೆ ಬೆಳಕು ಹಾಯಿಸಿದರು. (೧೮೮೬). ಕೊಪ್ಪಣವೆಂಬುದು ಈಗಿನ ಕೊಪ್ಪಳವೇ ಎಂದು ಮೊದಲು ಹೇಳಿದವರು ಅವರೆ. ಚೀನಾ ದೇಶದ ಪರವಾಸಿ ಹ್ಯು-ಯೆನ್‌ತ್ಸಾಂಗ್ (ಕ್ರಿ.ಶ. ೬೩೫-೬೪೩) ಕೊಂಕಿನಪುಲೋ ಈ ಕೊಪಣವೇ ಎಂದು ಅವರು ಸೂಚಿಸಿದರು. ಅನಂತರ ಈ ಪ್ರಸ್ತಾಪದ ಚರ್ಚೆ ಮುಂದಿವರೆಯಿತು. ಹೈದರಾಬಾದ್ ನಿಜಾಮ್ ಸರ್ಕಾರದ ವತಿಯಿಂದಶ್ರೀ ಕೃಷ್ಣಮಾಚಾರ್ಯರು ಕ್ಷೇತ್ರಕಾರ್ಯವನ್ನೆಸಗಿದರು. ಅವರು ಮತ್ತು ತತ್ಪೂರ್ವದಲ್ಲಿಯೇ ಪಿ. ಬಿ. ದೇಸಾಯಿಯವರು ಪ್ರಕಟಿಸಿದ ಬರಹಗಳು ಈ ನಿಟ್ಟಿನಲ್ಲಿ ಮಾಡಿದ ಅಧ್ಯಯನಗಳಾಗಿವೆ. (The Kannada Inscriptions of Koppal -by C. Krishnamacharlu ಕೊಪ್ಪಳದ ಶಾಸನಗಳು- ಪಿ. ಬಿ. ದೇಸಾಯಿ,) ಇದೇ ಅವಧಿಯಲ್ಲಿ ಸ್ಥಳೀಯ ವಿದ್ವಾಂಸರಾದ ನಾ. ಭ. ಶಾಸ್ತ್ರಿಯವರ ಸಂಶೋಧನಾ ಲೇಖನವು ಪ್ರಕಟವಾಯಿತು. 'ಕೊಪ್ಪಣ-ಕೊಪ್ಪಳ' ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ೨೨-೩-೧೯೩೮ರ ಲ್ಲಿ ಪ್ರಕಟವಾಗಿ ಪ್ರಸಿದ್ಧಿಯನ್ನು ಪಡೆಯಿತು. ತಮ್ಮ ಸಂಶೋಧನೆಯಿಂದ ಪತ್ತೆಯಾದ ಶಾಸನಗಳ ವಿವೇಚನೆಯನ್ನು ಪಿ. ಬಿ. ದೇಸಾಯಿಯವರು Jainism in South India & some Jaina Epigraphs (1987) ಎಂಬ ಪುಸ್ತಕದಲ್ಲಿ ಮಾಡಿದ್ದಾರೆ. ಅವರ ಈ ಕೊಡುಗೆ ಅತ್ಯಂತ ಮಹತ್ವವಾದದ್ದು ಮತ್ತು ಮೌಲಿಕವಾದದ್ದು. ಇಲ್ಲಿನ ದೇವಾಲಯಗಳ ವಾಸ್ತುಶಿಲ್ಪವನ್ನು ಕುರಿತು ಸಿ. ಎಸ್. ಪಾಟೀಲರು ವಿಶದವಾದ ಮಾಹಿತಿಯನ್ನು ಒದಗಿಸಿಕೊಡುತ್ತಾರೆ. ಕೊಪ್ಪಳ ಮತ್ತು ಜೈನಧರ್ಮ ಸಂಬಂಧವಾಗಿ ಜಿಜ್ಞಾಸೆ ನಡೆಸಿದ್ದಾರೆ. ಅನಂತರದಲ್ಲಿ ಕೊಪ್ಪಳದ ಆರು ಹೊಸ ಶಾಸನಗಳು ಪ್ರಕಟವಾದ ವರ್ಷವು ೧೯೩೭ . ಬಿ ಅಜ್ಜಾನಿಯವರು ಅದನ್ನು ಸಂಗ್ರಹಿಸಿದ್ದಾರೆ. ಅಲೆಕ್ಸಾಂಡರ್ ಪಿ. ವಿಪಿನೆಡೆಯವರು ಕೊಪ್ಪಳ ನಗರ ಮತ್ತು ಕೋಟೆ The Journal of Hyderabad and Andhrapredesh Archeological Society ಯಲ್ಲಿ ಲೇಖನವನ್ನು ಪ್ರಕಟಿಸಿರುವರು. ಬಿ. ಸಿ. ಪಾಟೀಲರು ಕೊಪ್ಪಳ ಸಾಂಸ್ಕೃತಿಕ ಪರಂಪರೆ ಎಂಬ ಹೊತ್ತಿಗೆಯನ್ನು ಪ್ರಕಟಿಸಿರುವರು. ಹಂಪಾ ನಾಗರಾಜಯ್ಯ ಅವರು ಕೊಪ್ಪಳ ಶಾಸನಗಳು ಎಂಬ ಪುಸ್ತಕವನ್ನು ಸಂಪಾದಿಸಿರುವರು. ಕನ್ನಡ ವಿಶ್ವವಿದ್ಯಾಲಯ ಶಾಸನಶಾಸ್ತ್ರ ವಿಭಾಗದವರು ಕೊಪ್ಪಳ ಜಿಲ್ಲೆಯ ಸಮಗ್ರ ಶಾಸನಗಳನ್ನು

ಸಂಗ್ರಹಿಸಿಟ್ಟಿರುವರು. ಕೊಪ್ಪಳ ಕರ್ನಾಟಕ ದೇವಾಲಯಗಳ ಕೋಶ : ಕೊಪ್ಪಳ ಜಿಲ್ಲೆ ಪುಸ್ತಕವನ್ನು ಪ್ರಕಟಿಸಿದರು. ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ತಿರುಳ್ಗನ್ನಡ ಪುಸ್ತಕದಲ್ಲಿ ಅಲ್ಲಿನ ಶಾಸನಗಳು ಮತ್ತು ದೇವಾಲಯಗಳ ಬಗೆಗೆ ವಿಪುಲ ಮಾಹಿತಿಯನ್ನು ಕಾಣಬಹುದಾಗಿದೆ. ಗವಿದೀಪ್ತಿ ಸ್ಮರಣಸಂಚಿಕೆಯಲ್ಲಿ ಕೊಪ್ಪಳ ಜಿಲ್ಲೆಯಲ್ಲಿ ಆಗಿಹೋದ ಅರಸರು ಮತ್ತು ಅದರ ಚರಿತ್ರೆಯನ್ನು ಡಾ. ಅ. ಸುಂದರ ಅವರು ತುಂಬ ಸುಂದರವಾಗಿ ನಿರೂಪಿಸಿದ್ದಾರೆ. ಇಷ್ಟಲ್ಲದೆ ವಿವಿಧ ವಿಶ್ವವಿದ್ಯಾನಿಲಯದ ಪ್ರಸಾರಾಂಗ ವಿಭಾಗದಿಂದ ಹೊರ ಬಂದಿರುವ ಅನೇಕ ಪುಸ್ತಕಗಳು ಕೊಪ್ಪಳದಲ್ಲಿ ನಡೆದ ಅಧ್ಯಯನವನ್ನು ತಿಳಿಸುತ್ತವೆ. ಇವುಗಳ ಅಧ್ಯಯನದಿಂದ ಹೊರಬಂದ ರಾಜಕೀಯ, ಸಾಮಾಜಿಕ, ಶೈಕ್ಷಣಿಕ, ಆರ್ಥಿಕ, ಆಡಳಿತಾತ್ಮಕ ವಿವರಗಳನ್ನು ಈ ಹಿಂದಿನ ಅಧ್ಯಾಯಗಳಲ್ಲಿ ಹೊರಗೆಡಹಲಾಗಿದೆ. ಪ್ರಕೃತ ಕೊಪ್ಪಳದಲ್ಲಿ ದೊರೆತಿರುವ ಶಾಸನಗಳು ಯಾವ ಯಾವ ರಾಜಕೀಯ ಮನೆತನಗಳಿಗೆ ಸೇರಿದವೆಂಬುದನ್ನು ಈ ಕೆಳಗಿನಂತೆ ಚರ್ಚಿಸಬಹುದು:

ಮೌರ್ಯರಿಗೆ ಸಂಬಂಧಿಸಿದಂತೆ ಎರಡು ಶಾಸನಗಳು ಕೊಪ್ಪಳದಲ್ಲಿ ದೊರಕಿವೆ. ಮೊದಲನೆಯದು ಪಾಲ್ಕಿಗುಂಡಿ ಶಾಸನ. ಪಾಲ್ಕಿಗುಂಡಿ ಶಾಸನವು ಸಂಪೂರ್ಣವಾಗಿ ತ್ರುಟಿತವಾಗಿದ್ದು ಅಲ್ಲೊಂದು ಇಲ್ಲೊಂದು ಅಕ್ಷರಗಳು ಮಾತ್ರ ಲಭ್ಯವಾಗುತ್ತವೆ. ಇದರಿಂದಾಗಿ ಆ ಶಾಸನಪಾಠದ ಪೂರ್ಣ ಆಶಯವನ್ನು ಗ್ರಹಿಸಲಿಕ್ಕೆ ಅಸಾಧ್ಯವಾಗಿದೆ. ಗವಿಮಠದ ಸಮೀಪದ ಬಂಡೆಗಲ್ಲಿನಲ್ಲಿ ಕೆತ್ತಲಾದ ಶಾಸನದಲ್ಲಿ ದೇವಾನಾಂ ಪ್ರಿಯನಾದ ಅಶೋಕನು ತನ್ನ ಸಾಮ್ರಾಜ್ಯದ ಜನರು ಆಚರಿಸಬೇಕಾದ ಧರ್ಮವನ್ನು ಕುರಿತು ಹೇಳಿದ್ದಾನೆ. ಇದು ಕ್ರಿ.ಪೂ. ೩ನೇ ಶತಮಾನದ ಕಾಲದ್ದೆಂದು ತಿಳಿದುಬರುತ್ತದೆ.

ಅಶೋಕನ ಕಾಲದ ನಂತರ ಬಾದಾಮಿ ಚಾಲುಕ್ಯರವರೆಗೆ ಈ ಜಿಲ್ಲೆಯಲ್ಲಿ ಯಾವುದೇ ಶಾಸನಗಳು ದೊರೆತಿಲ್ಲ. ಈ ಅವಧಿಯ ಕೊಪ್ಪಳ ಜಿಲ್ಲೆಯ ಇತಿಹಾಸವು ಮುಸುಕಾಗಿದೆ. ಬಾದಾಮಿ ಚಾಲುಕ್ಯರ ಶಾಸನಗಳು ಕೊಪ್ಪಳ ಜಿಲ್ಲೆಯ ಹಲಗೇರಿ, ಇಟಗಿ ಮತ್ತು ಕುಕನೂರುಗಳಲ್ಲಿ ದೊರಕಿವೆ. ಕ್ರಿ.ಶ. ೭ನೇ ಶತಮಾನದ ಹಲಗೇರಿ ಶಾಸನವು ವಿಜಯಾದಿತ್ಯನಿಗೆ ಸೇರಿದುದಾಗಿದೆ. ಇದು ಮೊದಲ

ಕೊಪಣ (ಕೊಪ್ಪಳ)ದ ಉಲ್ಲೇಖವನ್ನು ನೀಡುವ ಶಾಸನವಾಗಿದೆ. ಇಟಗಿಯ ಶಾಸನವು ಯುದ್ಧಮಲ್ಲ ಸತ್ಯಾಶ್ರಯನ ಕಾಲಕ್ಕೆ ಸೇರಿದ್ದು. ಈ ಶಾಸನದ ಆಧಾರದಿಂದ ಈ ಪ್ರದೇಶವು ಬಾದಾಮಿ ಚಾಲುಕ್ಯರ ಆಳ್ವಿಕೆಗೆ ಒಳಪಟ್ಟಿತ್ತೆಂದು ಹೇಳಬಹುದು.

ರಾಷ್ಟ್ರಕೂಟರ ಕಾಲದ ಹಲವು ಶಾಸನಗಳು ಕೊಪ್ಪಳದಲ್ಲಿ ದೊರೆತಿವೆ. ಅಲ್ಲದೆ ಕೊಪ್ಪಳದ ಸುತ್ತಮುತ್ತಲಿನ ಪ್ರದೇಶವಾದ ಇಟಗಿ, ಅರಿಕೇರಿ, ಸಂಕನೂರು, ಅಳವಂಡಿ, ಬೆಟಗೇರಿ ಗ್ರಾಮಗಳಲ್ಲಿ ದೊರೆತಿವೆ. ಇವು ಇಂದ್ರ, ನೃಪತುಂಗ, ಪ್ರಭೂತವರ್ಷ, ಗೋವಿಂದ, ಇಮ್ಮಡಿ ಕೃಷ್ಣ, ಮುಮ್ಮಡಿ ಕೃಷ್ಣ ಮತ್ತು ಖೊಟ್ಟಿಗನ ಆಳ್ವಿಕೆಗೆ ಸೇರಿದವುಗಳಾಗಿವೆ.

ಕ್ರಿ.ಶ. ೮೮೩ರಲ್ಲಿ ಇಂದ್ರನ ಆಳ್ವಿಕೆಯ ಕಾಲದಲ್ಲಿ ಕುಪಣದ ದಂಡನಾಯಕ ಮಾಮರಸನು ಭೇಟಿನೀಡಿ ಕದಂಬವಂಶದ ಮಹಾಸಾಂತ ದಡಿಯಮರಸನು ಕಟ್ಟಿಸಿದ ಬಸದಿಗೆ ದಾನ ನೀಡಿದುದರ ಉಲ್ಲೇಖವಿದೆ. ರಾಷ್ಟ್ರಕೂಟ ಖೊಟ್ಟಿಗನ ಕಾಲದಲ್ಲಿ ಗಂಗ ಮಾಂಡಲಿಕರ ವಿಶೇಷಣಗಳಾದ ಪೆರ್ಮಾನಡಿ, ನಂದಗಿರಿನಾಥ ಎಂಬ ಬಿರುದುಗಳಿವೆ.

ಗಂಗರು ಸಾರ್ವಭೌಮ ಅರಸರಲ್ಲದಿದ್ದರೂ ಪ್ರಭಾವಯುತವಾದ ಮಾಂಡಲಿಕರಾಗಿದ್ದರು. ಇವರ ಆಳ್ವಿಕೆಯ ಪ್ರದೇಶಕ್ಕೆ ಗಂಗವಾಡಿ೬೦೦೦ ಎಂಬ ಹೆಸರಿತ್ತು. ಕೊಪ್ಪಳ ಪ್ರದೇಶದಲ್ಲಿ ಗಂಗರ ಚರಿತ್ರೆಗೆ ಸಂಬಂಧಿಸಿದಂತೆ ಕುಕನೂರು, ಹೆಬ್ಬಾಳ, ಇಟಗಿ ಮತ್ತು ಕೊಪ್ಪಳಗಳಲ್ಲಿ ಶಾಸನಗಳು ದೊರೆಯುತ್ತವೆ. ಕ್ರಿ.ಶ. ೯೩೯ರ ಇಮ್ಮಡಿ ಬೂತುಗನ ಶಾಸನವು ಇಟಗಿಯಲ್ಲಿ ದೊರೆತಿದ್ದು ಇದರಲ್ಲಿ ಬೂತುಗನಿಗೆ ರಾಷ್ಟ್ರಕೂಟ ಮುಮ್ಮಡಿ ಕೃಷ್ಣನು ತುಂಗಭದ್ರೆಯ ಉತ್ತರ ಭಾಗಗಳಾದ ಎಡದೊರೆ ೨೦೦೦, ಬೆಳ್ವೊಲ ೩೦೦, ಮಾಸವಾಡಿ ೧೪೦, ಕುಕನೂರು ೩೦, ಕೆಳವಾಡಿ ೩೦೦ ಮುಂತಾದವನ್ನು ನೀಡಿದ್ದನೆಂದು ತಿಳಿಯುತ್ತದೆ. ಹೆಬ್ಬಾಳದ ಕ್ರಿ.ಶ. ೧೦ನೇ ಶತಮಾನದ ಶಾಸನದಲ್ಲಿ ಗಂಗರ ಪಾರಂಪರಿಕ ಬಿರುದುಗಳುಳ್ಳ ಗಂಗರಸನ ಉಲ್ಲೇಖವಿದ್ದು ಬಹುಶಃ ಇದು ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ

ಮಾರಸಿಂಹನದಾಗಿರಬಹುದು. ಆದರೆ ಕೊಪ್ಪಳದ ನಿಶಿಧಿ ಶಾಸನದಲ್ಲಿ ಅವರ ಬಗ್ಗೆ ಹೆಚ್ಚಿನ ವಿವರಗಳು ದೊರೆಯುತ್ತವೆ.

ಕಲ್ಯಾಣದ ಚಾಳುಕ್ಯರ ಆಳ್ವಿಕೆಯಲ್ಲಿ ಬಹುತೇಕ ಶಾಸನಗಳು ಕೊಪ್ಪಲದಲ್ಲಿ ಸಿಗುತ್ತವೆ. ಕ್ರಿ.ಶ. ೯೭೩ರಲ್ಲಿ ರಾಷ್ಟ್ರಕೂಟರ ಆಳ್ವಿಕೆಯನ್ನು ಕೊನೆಗಾಣಿಸಿ ಇಮ್ಮಡಿ ತೈಲಪನು ಕಲ್ಯಾಣದಲ್ಲಿ ಚಾಳುಕ್ಯ ರಾಜ್ಯಸ್ಥಾಪನೆ ಮಾಡುತ್ತಾನೆ. ಕೊಪ್ಪಳ ಪರಿಸರದಲ್ಲಿ ಇವರ ಆಳ್ವಿಕೆಯ ಕುರುಹಾಗಿ ಅನೇಕ ಶಾಸನಗಳು ದೊರೆಯುತ್ತವೆ. ಮಾದಿನೂರು ಕ್ರಿ.ಶ. ೯೭೩ರ ಶಾಸನ ಇವರ ಆಳ್ವಿಕೆಯ ಆರಂಭಕಾಲವಾಗಿದೆ. ಚಾಲುಕ್ಯ ತೈಲಪ ತನ್ನ ಆಳ್ವಿಕೆಯ ಮೊದಲ ವರ್ಷದಲ್ಲಿ 'ಬ್ರಹ್ಮಾಂಡಕ್ರತು' ಎಂಬ ಯಾಗವನ್ನು ಮಾಡಿದನೆಂದು ಹೇಳಿದೆ. ಕೊಪ್ಪಳದ ಕ್ರಿ.ಶ. ೯೮೭ರ ಶಾಸನದಲ್ಲಿ ಗಂಗವಂಶದ ವಾಸವನ ಮಗಳಾದ ರಂಬಲದೇವಿಯನ್ನು ಚಾಳುಕ್ಯ ರಾಜ ಬಿಕ್ಕಲದೇವನಿಗೆ ಮದುವೆ ಮಾಡಿದ್ದಂತೆ ಹೇಳಿದೆ. ಕ್ರಿ.ಶ. ೯೮೮ರಲ್ಲಿ ಆಹವಮಲ್ಲನು ತುಂಗಭದ್ರೆಯ ದಕ್ಷಿಣ ತಡಿಯ ಪಂಪಾ ಬೀಡಿನಲ್ಲಿದ್ದಂತೆ ತಿಳಿಯುತ್ತದೆ. ಬಳಗೇರಿ ಮತ್ತು ಕಲ್ಲೂರಿನಲ್ಲಿರುವ ಶಾಸನಗಳು ಕ್ರಿ.ಶ. ೧೦೨ಕ್ಕೆ ಸೇರಿದ್ದು ಸೋಬನರಸನು ಸತ್ಯಾಶ್ರಯ ಸಾಮಂತನಾಗಿ ಮುಂದುವರಿದಿದ್ದನ್ನು ತಿಳಿಸುತ್ತದೆ. ಕುಕನೂರಿನ ಕ್ರಿ.ಶ. ೧೦೦೫ರ ಶಾಸನದಲ್ಲಿ ಇರಿವಬೆಡಂಗನ ಉಲ್ಲೇಖವಿದೆ. ಕೊಪ್ಪಳದ ಕ್ರಿ.ಶ. ೧೦೦೮ರ ಶಾಸನದಲ್ಲಿ ವಿಕ್ರಮಾದಿತ್ಯನ ಮೊದಲ ಉಲ್ಲೇಖವಿದ್ದು ಇವನು ೫ನೇ ವಿಕ್ರಮಾದಿತ್ಯನಾಗಿರುತ್ತಾನೆ. ಸಾಮಿಕುಮಾರ ಎಂಬುವನು ಬಿಚ್ಚುಕುಂದೆ ಗ್ರಾಮದಲ್ಲಿ ನಾಗದೇವ ಬಸದಿಯನ್ನು ಕಟ್ಟಿಸಿದ. ಈ ನಾಗದೇವ ಬಹುಶಃ ಚಾಲುಕ್ಯರ ದಂಡನಾಯಕರಲ್ಲೊಬ್ಬನಾದ ಅತ್ತಿಮಬ್ಬೆಯ ಗಂಡ ನಾಗಿದೇವನಿದ್ದಿರಬಹುದೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಈ ಕಾಲಕ್ಕೆ ಆತ ಸತ್ತಿದ್ದು ಅವನ ನೆನಪಿನಲ್ಲಿ ನಾಗದೇವಬಸದಿ ಕಟ್ಟಿಸಿ ಅವನ ಹೆಸರಿನ 'ನಾಗದೇವನ ಸವಣ್ಣಾದಗಳಿಂಬ' ಎಂಬ ಅಳತೆಕೋಲನ್ನು ಹಾಕಿಸಿರುತ್ತಾರೆ. ಕ್ರಿ.ಶ. ೧೦೪೩ರಲ್ಲಿ ತ್ರೈಲೋಕ್ಯಮಲ್ಲನು ಮರಗನುರು ಬೀಡಿನಲ್ಲಿದ್ದಮತೆ ತಿಳಿಯುತ್ತದೆ. ಸೋಮೇಶ್ವರ ಬೆಟ್ಟದ ಶಾಸನದಲ್ಲಿ ಕ್ರಿ.ಶ. ೧೦೫೩ರಲ್ಲಿ ಇದೇ ಅರಸನು ಆಳುತ್ತಿದ್ದಾಗ ಕದಂಬ ಕುಲದ ಪಂಪರಸನ ಉಲ್ಲೇಖ ಬರುತ್ತದೆ. ಈ ಕದಂಬ ಅರಸ ಕರಡಿಕಲ್ಲಿನ ಕದಂಬ ವಂಶದವನಿರಬಹುದು. ಅಳವಂಡಿಯ ಕ್ರಿ.ಶ. ೧೦೬೦ರ ಶಾಸನದಲ್ಲಿ ಕುರುವ

ಗುಲ್ಲಿಮಯ್ಯ ಎಂಬುವನು ಅಳವಂಡಿಯಲ್ಲಿ ತೋಟ, ಬಾವಿ, ಕಲ್ಲದೇಗುಲ, ಸತ್ರ, ಊರಬಾಗಿಲನ್ನು ಮಾಡಿಸಿದನೆಂದು ಮತ್ತು ಕೊಪ್ಪಳದ ಹಾಗೆಯೇ ಮುಧೋಳ ಶಾಸನದಲ್ಲಿಯೂ ಈ ತ್ರೈಲೋಕ್ಯಮಲ್ಲನ ಉಲ್ಲೇಖಗಳು ಬರುತ್ತವೆ. ಹುಲಿಗಿಯ ೧೦೮೮ರ ಶಾಸನವು ತ್ರಿಭುವನ ಮಲ್ಲ ೬ನೇ ವಿಕ್ರಮಾದಿತ್ಯನು ಕಲ್ಯಾಣದಿಂದ ಕೊಪ್ಪಳವನ್ನು ಆಳುತ್ತಿದ್ದುದನ್ನು ಉಲ್ಲೇಖಿಸಿದೆ. ೧೦೯೯ರಲ್ಲಿ ತ್ರಿಭುವನಮಲ್ಲನ ಕಾಲದ ಶಾಸನ ಅನೇಕ ವ್ಯಾಪಾರಿಗಳನ್ನು ಹೆಸರಿಸಿದೆ. ಕುಕನೂರಿನ ಕ್ರಿ.ಶ. ೧೧೨೯ರ ಶಾಸನ ಭೂಲೋಕ ಮಲ್ಲನ ಆಳ್ವಿಕೆಯನ್ನು ಹೇಳಿ ಅವನ ವೈಭವವನ್ನು ಪರಿಚಯಿಸುತ್ತದೆ. ಅಳವಂಡಿ ಮತ್ತು ಕುಕನೂರಿನ ೧೧೫೭ರ ಶಾಸನವು ಚಾಲುಕ್ಯ ತ್ರೈಲೋಕ್ಯಮಲ್ಲನ ಆಳ್ವಿಕೆಯನ್ನು ಉಲ್ಲೇಖಿಸುತ್ತದೆ. ಇಲ್ಲಿಂದ ಮುಂದೆ ಕ್ರಿ.ಶ. ೧೧೮೫ರ ವರೆಗೆ ಚಾಲುಕ್ಯ ಶಾಸನಗಳು ಕೊಪ್ಪಳ ಪ್ರದೇಶದಲ್ಲಿ ದೊರೆಯುವುದಿಲ್ಲ. ಕಲ್ಲೂರಿನ ಕ್ರಿ.ಶ. ೧೧೮೫ರ ಶಾಸನ ಚಾಲುಕ್ಯ ತ್ರಿಭುವನೈಕ ಮಲ್ಲನನ್ನು ಹೆಸರಿಸುತ್ತದೆ. ಇವನು ಸಾಮಂತನಾಗಿ ಸಿಂಧವಂಶದ ವೀರಬಿಜ್ಜಳ ಮತ್ತು ವಿಕ್ರಮದೇವನಾಗಿದ್ದಂತೆ ಉಲ್ಲೇಖ ಬರುತ್ತದೆ.

## ಕೊಪ್ಪಳ ಪರಿಸರದ ಶಾಸನಗಳಲ್ಲಿ ಆಡಳಿತಾತ್ಮಕ ಅಂಶಗಳು

ಕೊಪ್ಪಳದ ಶಾಸನಗಳಲ್ಲಿ ನೊಳಂಬರು ಪಾರಂಪರಿಕವಾಗಿ ಬಂದ ನೊಳಂಬವಾಡಿ ೨೦೦೦ದ ಅರಸರು ಹೇಮಾವತಿಯನ್ನು (ಹೆಂಜೇರು) ರಾಜಧಾನಿಯನ್ನಾಗಿ ಹೊಂದಿದ್ದರು. ಅನಂತರ ಕಂಪಲಿಯನ್ನು ರಾಜಧಾನಿಯನ್ನಾಗಿ ಆರಿಸಿಕೊಂಡರು. ಈ ವಂಶದ ಕೆಲವು ಸ್ತ್ರೀಯರುಕೊಪ್ಪಳದಲ್ಲಿ ಧಾರ್ಮಿಕ ವಿಧಿಯಿಂದ ಮುಡಿಪಿದರು ಎಂದು ತಿಳಿಯುತ್ತದೆ. ಇಲ್ಲಿನ ನಿಶಿಧಿ ಶಾಸನಗಳಲ್ಲಿ ಪಲ್ಲವರಾಮನ ಉಲ್ಲೇಖ ಬಂದಿದ್ದು ಇವನು ನೊಳಂಬ ರಾಜನಾಗಿರಬಹುದು ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಕ್ರಿ.ಶ. ೯೬೯ರ ಶಾಸನ ಪರಿಯಬ್ಬರಸಿಯು ಪಲ್ಲವರಾಜನ ಪತ್ನಿಯೆಂದು ತಿಳಿಸುತ್ತದೆ. ಕೊಪ್ಪಳದ ಕ್ರಿ.ಶ. ೧೦೩೧ರ ಶಾಸನ ಚೆಣ್ಣಕಬ್ಬೆಯ ಪತಿ ದಿಲೀಪನ ಎಂದು ಈಕೆಯ ಮಗ ಗುಣದ ಬೆಡಂಗನೆಂದು ತಿಳಿಸಿದೆ. ಈ ದಿಲೀಪನು ಕ್ರಿ.ಶ. ೯೫೦ರಲ್ಲಿ ಆಳಿದ ದಿಲೀಪನೇ ಇರಬೇಕು. ೬ನೆಯ

ವಿಕ್ರಮಾದಿತ್ಯನ ಕಾಲದ ವಿಪ್ರರ ಶಾಸನದಲ್ಲಿ ನೊಳಂಬರ ಪಾರಂಪರಿಕ ಬಿರುದುಗಳನ್ನು ಧರಿಸಿದ ತ್ರಿಭುವನ ಮಲ್ಲ ಪಾಂಡ್ಯನ ಉಲ್ಲೇಖವಿದೆ.

ಕಳಚೂರಿಗಳ ಶಾಸನಗಳು ಕೊಪ್ಪಳ ಜಿಲ್ಲೆಯ ಕುಕನೂರು, ಹಲಗೇರಿ, ಕವಲೂರು, ಪುರ, ಇಟಗೆ, ಆಳವಂಡಿ ಮುಂತಾದ ಕೊಪ್ಪಳ ಮತ್ತು ಸುತ್ತಮುತ್ತಲಿನ ಗ್ರಾಮಗಳಲ್ಲಿ ದೊರೆತಿವೆ. ಕುಕನೂರಿನ ಕ್ರಿ.ಶ. ೧೦೬೩ರ ಶಾಸನವು ಇಮ್ಮಡಿ ಬಿಜ್ಜಳನ ಆಳ್ವಿಕೆಗೆ ಸೇರಿದ್ದು. ಹಂಪೆಯ ವಿರೂಪಾಕ್ಷನ ಸನ್ನಿಧಿಯಲ್ಲಿ ಮಾಡಿದ ದಾನದ ಬಗ್ಗೆ ಇದು ತಿಳಿಸುತ್ತ.ದೆ. ಇದೇ ಗ್ರಾಮದ ಇನ್ನೊಂದು ಶಾಸನವು ಕಳಚೂರ ಕನ್ನಮ್ಮನಿಂದ ಸೋವಿದೇವನವರೆಗೆ ವಂಶಾವಳಿಯನ್ನು ನೀಡಿದ್ದು ಸೋವಿದೇವನು ಮಾದಿನೂರಿನಲ್ಲಿದ್ದನೆಂದು ತಿಳಿದುಬರುತ್ತದೆ. ೧೧೭೧ರಲ್ಲಿನ ಚಳಗೇರಾ ಶಾಸನ ಇವನ ದಂಡಾಧೀಶ ಬೂಚಿರಾಜನನ್ನು ಕುರಿತು ಹೇಳಿದೆ. ೧೧೭೭ರ ಕಾಲಕ್ಕೆ ಸೇರಿದ ಸಂಕಮದೇವನ ಶಾಸನದಲ್ಲಿ ಏಚಿಮಯ್ಯ ನಾಯಕನೆಂಬುವನು ಕವಲೂರಿನಲ್ಲಿ ಹರಿಹರ ದೇವಾಲಯವನ್ನು, ಕೊಪ್ಪಳದಲ್ಲಿ ಬಸದಿಯೊಂದನ್ನು ಕಟ್ಟಿಸಿದನೆಂದು ತಿಳಿದುಬರುತ್ತದೆ. ಕವಲೂರು ಕ್ರಿ.ಶ. ೧೦೭೯ರ ಶಾಸನದಲ್ಲಿ ಸಂಕಮದೇವನು ಕವಲೂರಿನ ಹರಿಹರೇಶ್ವರ ದೇವಾಲಯಕ್ಕೆ ಗ್ರಾಮಗಳನ್ನು ನೀಡಿದುದರ ಬಗೆಗೆ ತಿಳಿದುಬರುತ್ತದೆ.

ಹೊಸಮಲೆದುರ್ಗದ ಅರಸರಿಗೆ ಸಂಬಂಧಿಸಿದ ಎರಡು ಶಾಸನಗಳು ಕೊಪ್ಪಳ ಪರಿಸರದಲ್ಲಿ ಸಿಗುತ್ತವೆ. ಕುವ್ಮುಟ ದುರ್ಗದಲ್ಲಿ ದೊರೆತ ಇವು ವೀರಗಲ್ಲುಗಳಾಗಿದ್ದು ಒಂದು ಶಾಸನವು ಕಾಲಯುಕ್ತವಾಗಿದೆ. ಕ್ರಿ.ಶ. ೧೩೧೫ರಲ್ಲಿ ಸುರತಾಣ ದಳವು ಕುಮ್ಮಟದುರ್ಗಕ್ಕೆ ಮುತ್ತಿಗೆ ಹಾಕಿದಂತೆ ತಿಳಿಸುತ್ತದೆ. ಈ ಯುದ್ಧದಲ್ಲಿ ಗಡಸಿಂಗನಾಯಕ ಮತ್ತು ಅವನ ತಮ್ಮ ಕಾಮಿನಾಯಕನು ಸತ್ತಂತೆ ಕೊಪ್ಪಳದ ಶಾಸನದಿಂದ ತಿಳಿಯುತ್ತದೆ. ಮುಮ್ಮಡಿಸಿಂಗನ ಮಗ ಕಂಪಿಲರಾಯ ಇವನು ರಾಜಧಾನಿಯನ್ನು ಹೊಸಮಲೆಯಿಂದ ಕಮ್ಮಟ ದುರ್ಗಕ್ಕೆ ಸ್ಥಳಾಂತರಿಸುತ್ತಾನೆ. ಕಂಪಿಲನ ಮಗ ರಾಮನಾಥ ಇವನನ್ನು ಹೆಸರಿಸುವ ಶಾಸನಗಳು ಕೊಪ್ಪಳದಲ್ಲಿ ದೊರೆಯುತ್ತಿಲ್ಲ. ಆದರೆ ಆನೆಗೊಂದಿ ಮತ್ತು ಸೊಂಡೂರಿನಲ್ಲಿ ದೊರೆಯುತ್ತವೆ. ಈ ಶಾಸನಗಳಲ್ಲಿ ದಾನಕ್ಕೆ ತಪ್ಪಿದವರು ರಾಮನಾಥನ ಬೆಂಕದು

ಎಂಬ ಉಲ್ಲೇಖ ಬರುತ್ತದೆ. ಕೃಷ್ಣದೇವರಾಯನ ಕಾಲದಲ್ಲಿ ಈ ಕುಮಾರರಾಮನ ಆರಾಧನೆಗೆ ಸಂಬಂಧಿಸಿದಂತೆ ಕೊನೇರಿ ನಾಯಕನ ಮಗಳು ಹೊಸಮಲೆಯಲ್ಲಿ ರಾಮನಾಥ ದೇವಾಲಯವನ್ನು ಕಟ್ಟಿಸಿದುದಲ್ಲದೆ ಅಲ್ಲಿನ ಪೂಜೋಪಕರಣಗಳಿಗೆ ದಾನ ನೀಡುತ್ತಾಳೆ. ಆಕೆ ಕುಮ್ಮಟ ದುರ್ಗದಲ್ಲಿಯೂ ರಾಮನಾಥನ ದೇವಾಲಯವನ್ನು ನಿರ್ಮಿಸಿರಬೇಕು.

ದಕ್ಷಿಣ ಭಾರತದಲ್ಲಿ ಕ್ರಿ.ಶ. ೧೨೯೬ರಿಂದ ೧೩೩೬ರ ವರೆಗೆ ಮುಸಲ್ಮಾನರ ದಾಳಿಯು ಅವ್ಯಾಹತವಾಗಿ ನಡೆದಿದೆ. ಈ ಹಿನ್ನೆಲೆಯಲ್ಲಿ ವಿಜಯನಗರ ಸಾಮ್ರಾಜ್ಯಹುಟ್ಟಿಕೊಂಡಿತು. ಆನೆಗೊಂದಿಯಲ್ಲಿ ದೊರೆತಿರುವ ಶಾಸನದಲ್ಲಿ (ಕ್ರಿ.ಶ. ೧೩೪೨)ಸಂಗಮವಂಶದ ದೊರೆಗಳ ಬಗೆಗೆ ಪ್ರಥಮ ವಿವರಗಳು ದೊರೆಯುತ್ತವೆ. ಮುಂದೆ ಕೊಪ್ಪಳದ ಕ್ರಿ.ಶ. ೧೩೪೬ರ ಶಾಸನದಲ್ಲಿ ಹರಿಹರನ ಉಲ್ಲೇಕವಿದೆ. ಆನೆಗೊಂದಿಯು ಕ್ರಿ.ಶ. ೧೩೪೯ರ ಶಾಸನ ಹರಿಹರನ ಮಗ ಸಾವಣ ಒಡೆಯನನ್ನು ಹೆಸರಿಸಿದೆ. ಇಲ್ಲಿಂದ ಪ್ರೌಢದೇವರಾಯನ ಆಳ್ವಿಕೆಯವರೆಗೆ ಯಾವ ಶಾಸನಗಳೂ ದೊರೆಯುವುದಿಲ್ಲ. ಕನಕಗಿರಿಯ ಕ್ರಿ.ಶ. ೧೪೩೬ರ ಶಾಸನವು ಪ್ರೌಢದೇವರಾಯನು ಕನಕಗಿರಿ ನಾಥ ದೇವರಗೆ ದಾನ ನೀಡಿದ್ದನ್ನು ತಿಳಿಸುತ್ತದೆ. ಪುರದ ಶಾಸಸ ಉಲ್ಲೇಖಿಸುವ ವೀರಪ್ರತಾಪ ದೇವನು ಪ್ರೌಢದೇವರಾಯನೇ ಆಗಿದ್ದಾನೆ. ಕಾಲದ ಉಲ್ಲೇಖವಿಲ್ಲದ ಶಾಸನವೊಂದು ವಿರೂಪಾಕ್ಷ ರಾಯನನ್ನು ಉಲ್ಲೇಖಿಸಿದ್ದು ಸಂಗಮವಂಶದವರ ಅಂತ್ಯದ ಶಾಸನ ಇದಾಗಿದೆ. ಕನಕಗಿರಿಯ ೧೦೪೮೮ರ ಶಾಸನವು ಸಾಳ್ವ ನರಸಿಂಹನ ರಾಜ್ಯಭಾರದ ಬಗೆಗೆ ವಿವರಗಳನ್ನು ತಿಳಿಸುತ್ತದೆ. ಸಾಳ್ವರ ಬಗ್ಗೆ ಈ ಜಿಲ್ಲೆಯಲ್ಲಿ ದೊರೆಯುವ ಏಕೈಕ ಉಲ್ಲೇಖ ಇದಾಗಿದೆ. ಕಾಲದ ಉಲ್ಲೇಖವಿಲ್ಲದ ಗಂಗಾವತಿ ತಾಲ್ಲೂಕಿನ ಎರಡು ಶಾಸನಗಳಲ್ಲಿ ನರಸಣ್ಣನಾಯಕನು ತುಳುವ ವಂಶದ ನರಸನಾಯಕನು ಎಂಬುದನ್ನು ಸೂಚಿಸುತ್ತವೆ. ಕೊಪ್ಪಳದ ಗಿಣಿಗೇರಿ ಶಾಸನದಲ್ಲಿ ಇವನ ಆಳ್ವಿಕೆಯಲ್ಲಿ ಬಂಗಾರು ತಿಮ್ಮರಾಜು ದಳವಾಯಿ ಆನೆಗೊಂದಿ ಯಲ್ಲಿದ್ದನೆಂಬ ಅಂಶವನ್ನು ತಿಳಿಸುತ್ತದೆ. ಕೊಪ್ಪಳದ ಶಾಸನವೊಂದರಲ್ಲಿ ಭಂಡಾರದ ಅಪ್ಪರಸಯ್ಯನ ಮಗಭಂಡಾರದ ತಿಮ್ಮಪ್ಪಯ್ಯನ ಉಲ್ಲೇಖವಿದೆ. ಕ್ರಿ.ಶ. ೧೫೪೪ರ ಸದಾಶಿವರಾಯನ ಕಾಲದ ಶಾಸನಗಳು ಈ ಪ್ರದೇಶದಲ್ಲಿ ಸಿಗುತ್ತವೆ. ಹಿರೇಜಂತಕಲ್ ಶಾಸನದಲ್ಲಿ ಸದಾಶಿವರಾಯನಿಗೆ ಮತ್ತು ರಾಮರಾಜನ

ತಮ್ಮ ತಿರುವೆಂಕಟಾದ್ರಿ ರಾಜನಿಗೆ ಪುಣ್ಯವಾಗಬೇಕೆಂದು ಚಂದ್ರಗಿರಿಯ ಹೇಮರಸಯ್ಯ ದಾನ ನೀಡಿದ ಉಲ್ಲೇಖವಿದೆ. ಮುಂದೆ ಕ್ರಿ.ಶ. ೧೫೪೫ರಿಂದ ಆಚೆಗೆ ಸದಾಶಿವರಾಯನ ಜೊತೆಯಲ್ಲಿ ಅವನ ಕಾರ್ಯಕರ್ತರಾದ ರಾಮರಾಜಯ್ಯ ಮತ್ತು ತಿರುಮಲರಾಜಯ್ಯನನ್ನು ಹೇಳಲಾಗಿದೆ. ಇಲ್ಲಿ ಅನೇಕ ದೇವಾಲಯ ಮತ್ತು ಮಠಮಾನ್ಯಗಳಿಗೆ ದಾನ ನೀಡಿದ ಉಲ್ಲೇಖಗಳಿವೆ.

ಮರಾಠರ ಶಿವಾಜಿಯ ಕಾಲದ ಶಾಸನವು ಆನೆಗೊಂದಿಯಲ್ಲಿ ದೊರೆತಿದೆ. ಅದರಲ್ಲಿ ಆನೆಗೊಂದಿ ರಾಜ್ಯ ಅನ್ಯಾಕ್ರಾಂತವಾಗಿ ಶ್ರೀರಂಗರಾಜನು ಮರಣ ಹೊಂದಿದ್ದನ್ನು ತಿಳಿಸುತ್ತದೆ. ಇವನ ಪತ್ನಿ ತಿಮ್ಮಾಜಿ, ಮಕ್ಕಳಾದ ತಿರುಮಲರಾಜ ಮತ್ತು ರಾಮರಾಯರನ್ನು ವಕೀಲರ ಸಂಗಡ ಶಿವಾಜಿಯ ಬಳಿಗೆ ಕಳುಹಿಸುತ್ತಾಳೆ. ಆಗ ಶಿವಾಜಿಯು ಅವರ ಸಂರಕ್ಷಣಾರ್ಥವಾಗಿ ಆನೆಗೊಂದಿ ಮೊದಲಾದ ಒಂಬತ್ತು ಸಮತಗಳನ್ನು (ಕೊಪ್ಪಳವನ್ನೂ ಸೇರಿಕೊಂಡಂತೆ) ಕ್ರಿ.ಶ. ೧೭೫೬ರಲ್ಲಿ ನೀಡಿರುತ್ತಾನೆ.

ಇವಲ್ಲದೆ ಬಿಜಾಪುರದ ಬಹಮನಿ ಅರಸರ ಶಾಸನಗಳು ಲಭ್ಯವಾಗಿದ್ದು ಕೋಟೆಯನ್ನು ಕಟ್ಟಿಸಿರುವ ಬಗೆಗೆ ಉಲ್ಲೇಖಗಳು ಬರುತ್ತವೆ. ಕೋಟೆಯ ಹೊರಗೆ ಮತ್ತು ಒಳಗೆ ಕುಡಿಯುವ ನೀರಿನ ವ್ಯವಸ್ಥೆಯನ್ನು ಮಾಡಿದ್ದರೆಂಬ ಉಲ್ಲೇಖಗಳು ಬರುತ್ತವೆ. ವಸಾಹತು ಕಾಲಘಟ್ಟದಲ್ಲಿ ಶಾಸನಗಳ ಪಾತ್ರ ಹಿರಿದಾಗಿದ್ದು ಆಗಲೇ ಕಾಗದದಲ್ಲಿ ದಸ್ತಾವೇಜುಗಳು ಪ್ರಚಲಿತದಲ್ಲಿದ್ದವು. ಹೀಗಾಗಿ ನಮಗೆ ದೊರೆಯುವ ಶಿಲಾಶಾಸನಗಳಲ್ಲಿ ಮೌರ್ಯರ ಕಾಲದಿಂದ ಬಹಮನಿ ಸುಲ್ತಾನರ ಆಳ್ವಿಕೆಯವರೆಗಿನ ಶಾಸನಗಳು ಕೊಪ್ಪಳ ಪ್ರದೇಶದಲ್ಲಿ ಹೆಚ್ಚು ಲಭ್ಯವಾಗಿವೆ. ವಿಸ್ತಾರವಾದ ರಾಜ್ಯದ ಆಡಳಿತ ಸೌಲಭ್ಯ ಮತ್ತು ಸೌಕರ್ಯಗಳು ಜನತೆಯನ್ನು ಮುಟ್ಟಬೇಕಾದರೆ ರಾಜ್ಯವನ್ನು ಹಲವು ಪ್ರಾಂತಗಳನ್ನಾಗಿ ವಿಂಗಡಿಸಬೇಕಾಗುತ್ತದೆ. ಸ್ಥಳೀಯ ಸರ್ಕಾರಗಳು ಅಲ್ಲಿ ಸ್ಥಳೀಯರಲ್ಲಿ ಅಸ್ತಿತ್ವದಲ್ಲಿರುತ್ತಿದ್ದವು. ರಾಜ್ಯವನ್ನು ನಾಡು, ವಿಷಯ, ರಾಷ್ಟ್ರ, ಕಂಪಣ, ಗ್ರಾಮ ಮೊದಲಾದ ವಿಭಾಗಗಳನ್ನಾಗಿ ವಿಂಗಡಿಸಲಾಗುತ್ತಿತ್ತು. ಇಂತಹ ವಿಂಗಡಣೆಯಲ್ಲಿ ಹಲವು ನಾಡು, ಮಂಡಲಗಳ ವಿಷಯಗಳು ಕೊಪ್ಪಳದ ಶಾಸನಗಳಲ್ಲಿ ದೊರೆಯುತ್ತವೆ. ಆಡಳಿತದ ಅನುಕೂಲಕ್ಕಾಗಿ ವಿಂಗಡಣೆಯಾದ ವಿಭಾಗ-

ಉಪವಿಭಾಗಗಳು ಕೊಪ್ಪಳದ ಶಾಸನಗಳಲ್ಲಿ ಉಲ್ಲೇಖಗೊಂಡಿವೆ. ಕನ್ನಡ ವಿಶ್ವವಿದ್ಯಾಲಯದವರು ಸಂಪಾದಿಸಿದ ಕೊಪ್ಪಳ ಜಿಲ್ಲೆಯ ಶಾಸನಗಳು ಎಂಬ ಪುಸ್ತಕದಲ್ಲಿ ಅವುಗಳ ವಿವರ ಇಂತಿದೆ :

| ನಾಡಿನ ಹೆಸರು | ಕೇಂದ್ರಸ್ಥಳ | ಈಗಿನ ಜಿಲ್ಲೆ |
|---|---|---|
| ಎಕ್ಕಲವಾಡ -೧೪ | -- | ಕೊಪ್ಪಳ ಜಿಲ್ಲೆ |
| ಎರಡರುನೂರು | ಪುಲಿಗೆರೆ (ಲಕ್ಷ್ಮೇಶ್ವರ) | ಗದಗ ಜಿಲ್ಲೆ |
| (೧) ಪುಲಿಗೆರೆ -೩೦೦ | | ಕೊಪ್ಪಳ ಜಿಲ್ಲೆ |
| (೨) ಬೆಳ್ವೊಲ ೩೦೦ | | ಗದಗ-ಧಾರವಾಡ ಜಿಲ್ಲೆ |
| ಕರಡಿಕಲ್ ೩೦೦ | ಕರಡಿಕಲ್ಲು | ರಾಯಚೂರು ಜಿಲ್ಲೆ |
| ಕಿಸುಕಾಡು ೭೦ | ಪಟ್ಟದಕಲ್ಲು(ಕಿಸವೊಳಲು) | ಬಾಗಲಕೋಟೆ ಜಿಲ್ಲೆ |
| ಕುಂತಳದೇಶ | ---- | ಉತ್ತರ ಕರ್ನಾಟಕ |
| ಕುಕ್ಕನೂರು ೩೦ | ಕುಕ್ಕನೂರು | ಕೊಪ್ಪಳ ಜಿಲ್ಲೆ |
| ಕೆಳವಾಡಿ ೩೦೦ | ಕೆಳವಾಡಿ | ಬಾಗಲಕೋಟೆ ಜಿಲ್ಲೆ |
| ಕೊಪಣವೇಂಟೆ/ ಕೊಪಣಸೀಮೆ | ಕೊಪ್ಪಳ | ಕೊಪ್ಪಳ ಜಿಲ್ಲೆ |
| ನರೆಯಂಗಲ್ಲು ೧೨ | ನರೇಗಲ್ | ಕೊಪ್ಪಳ ಜಿಲ್ಲೆ |
| ನೊಳಂಬವಾಡಿ ೩೨೦೦೦ | ಕಂಪಲಿ | ಬಳ್ಳಾರಿ ಜಿಲ್ಲೆ |
| ಪಡುವಣನಾಡು | --- | ಕೊಪ್ಪಳ ಜಿಲ್ಲೆ |
| ಬನವಾಸಿ ೧೨೦೦೦ | ಬನವಾಸಿ | ಉತ್ತರಕನ್ನಡ, ಶಿವಮೊಗ್ಗ, ಹಾವೇರಿ ಜಿಲ್ಲೆ |
| ಬಲ್ಲಕುಂದೆ ೩೦೦ | ಬಲ್ಕುಂದೆ | ಬಳ್ಳಾರಿ ಜಿಲ್ಲೆ |
| ಬೆಣ್ಣೆಕಲ್ಲುಸೀಮೆ | --- | --- |
| ಬೆಳ್ಗಟ್ಟೆ ೧೨ | --- | ಗದಗ ಜಿಲ್ಲೆ |
| ಬೆಳ್ವೊಲ ೩೦೦ | | |
| ಅಣ್ಣಿಗೆರೆ | | ಧಾರವಾಡ ಜಿಲ್ಲೆ |
| ಮಾಸವಾಡಿ ೧೪೦ | --- | ಗದಗ ಜಿಲ್ಲೆ |

| ೧ | ೨ | ೩ |
| --- | --- | --- |
| ಮೂವಳ್ತೆನಾಡು | --- | --- |
| ಯಡದೊರೆ ೨೦೦೦ | --- | ರಾಯಚೂರು-ಕೊಪ್ಪಳ ಜಿಲ್ಲೆ |

## ಕೊಪ್ಪಳದ ಶಾಸನಗಳಲ್ಲಿ ಧರ್ಮ

ಕೊಪ್ಪಳದಲ್ಲಿ ಐದು ಧರ್ಮಗಳ ಶಾಸನಗಳು ದೊರೆಯುತ್ತವೆ. ಬೌದ್ಧ, ಜೈನ, ವೀರಶೈವ, ವೈಷ್ಣವ ಮತ್ತು ಇಸ್ಲಾಂ ಧರ್ಮದ ಶಾಸನಗಳನ್ನು ಅಲ್ಲಿ ಕಾಣಬಹುದು. ಅವುಗಳನ್ನು ಸ್ಥೂಲವಾಗಿ ಸಮೀಕ್ಷಿಸಿ ಈ ಕೆಳಗಿನಂತೆ ಚರ್ಚಿಸಬಹುದು. ಕೊಪ್ಪಳದಲ್ಲಿ ಅಶೋಕನ ಶಾಸನಗಳು ದೊರೆತಿರುವುದರಿಂದ ಇದು ಬೌದ್ಧ ಧರ್ಮದ ನೆಲೆಯಾಗಿತ್ತೆಂಬುದರಲ್ಲಿ ಸಂಶಯವಿಲ್ಲ. ದೇವಾನಾಂ ಪ್ರಿಯನು ತಾನು ಸಂಘಕ್ಕೆ ಸೇರಿದ ಮೇಲೆ ತನ್ನ ರಾಜ್ಯದ ಪ್ರಜೆಗಳು ಸಂಘದ ತತ್ವಗಳನ್ನು ಅನುಸರಿಸಿ ಧರ್ಮಶ್ರವಣ ಮಾಡಲೆಂದು ಶಾಸನಗಳನ್ನು ಅಶೋಕನು ಹಾಕಿಸಿರುತ್ತಾನೆ. ಇವುಗಳಲ್ಲಿ ಗವಿಮಠ ಶಾಸನದ ಬಳಿ ಬೌದ್ಧಧರ್ಮಕ್ಕೆ ಸಂಬಂಧಿಸಿದ ಶಾಸನವಿರುವ ಗುಂಡಿನ ಕೆಳಭಾಗದಲ್ಲಿ ಒಂದು ವಿಶಾಲ ಗವಿಯಿದೆ. ಇದು ಬೌದ್ಧ ಚೈತ್ಯಾಲಯವೆಂದು ಹೇಳಲಾಗುತ್ತದೆ. ಪಾಲ್ಕಿಗುಂಡಿನ ಅಶೋಕನ ಶಾಸನದ ಬಳಿ ಕಾಣಬರುವ ಪಾದುಕೆಗಳು ಜೈನಜಠಾಸಿಂಗನ ಹೆಸರಿನಲ್ಲಿ ಕೆತ್ತಿದವುಗಳಾಗಿವೆ. ಆದರೂ ಕೆಲವು ಆಂತರಿಕ ಆಧಾರಗಳಿಂದ ಕ್ರಿ.ಶ. ೮-೯ನೇ ಶತಮಾನದವರೆಗೆ ಅಲ್ಲಿ ಬೌದ್ಧ ಧರ್ಮ ನೆಲೆಗೊಂಡಿತ್ತು ಎಂದು ಊಹಿಸುವುದರಲ್ಲಿ ತಪ್ಪೇನಿಲ್ಲ.

### ಜೈನಧರ್ಮ

ಕೊಪ್ಪಳ ಪ್ರದೇಶವು ತಿರುಳ್ಗನ್ನಡ ಪ್ರದೇಶವಾಗಿ ಮತ್ತು ಜೈನಧರ್ಮದ ನೆಲೆಯಾಗಿ ಪ್ರಪ್ರಥಮವಾಗಿ ಕಾಣಿಸಿಕೊಳ್ಳುತ್ತದೆ. ಕೊಪ್ಪಳದ ಮೊದಲ ಉಲ್ಲೇಖ ಕವಿರಾಜಮಾರ್ಗದಲ್ಲಿ ಬಂದರೆ ಎರಡನೆಯದು ಅಜಿತಪುರಾಣವು ಅತ್ತಿಮಬ್ಬೆಯ ಧವಳಕೀರ್ತಿ ಕೊಪ್ಪಳದ ಬೆಟ್ಟದಂತೆ ಬೆಳ್ಗೆ ಎಂದು

ಹೋಲಿಸುವುದು ಕಂಡುಬರುತ್ತದೆ. ಕೊಪ್ಪಳದ ಶಾಸನಗಳನ್ನು ಅಧ್ಯಯನಿಸಿದಾಗ ತಿಳಿಯುವ ಇನ್ನೊಂದು ಸಂಗತಿಯೆಂದರೆ ಕ್ರಿ.ಶ. ೧೫ನೇ ಶತಮಾನದವರೆಗೆ ಶುದ್ಧ ಜೈನ ತೀರ್ಥ ಕೇಂದ್ರವಾಗಿ ಮಾತ್ರ ಹೆಚ್ಚು ಪ್ರಸಿದ್ಧಿ ಪಡೆದಿದೆ. ಕೊಪ್ಪಳದ ಜೈನಧರ್ಮದ ಬಗ್ಗೆ ಹೇಳುವುದಾದರೆ, ಇದು ಜೈನಧರ್ಮದ ಕೇಂದ್ರಸ್ಥಾನವೆಂಬಂತೆ ಶಾಸನಗಳಲ್ಲಿ ಕಾವ್ಯಗಳಲ್ಲಿ ಚಿತ್ರಿತವಾಗಿದೆ. ಕ್ರಿ.ಶ. ೯ನೇ ಶತಮಾನದ ಕೊನೆಯ ಭಾಗದಿಂದ ಜೈನಧರ್ಮದ ಶಾಸನಗಳು ದೊರೆಯುತ್ತವೆ. ಕ್ರಿ.ಶ. ೧೦ನೇ ಶತಮಾನದ ಉತ್ತರಾರ್ಧದಿಂದ ೧೧ನೇ ಶತಮಾನದ ಪೂರ್ವಾರ್ಧದವರೆಗೆ ಇಲ್ಲಿ ಮುಡುಪಿ ಪ್ರಾಣವನ್ನು ತೊರೆದವರು ರಾಜಮನೆತನದ ಸ್ತ್ರೀಯರು, ಅವರೊಂದಿಗೆ ಮುನಿಗಳು. ರಾಜಪುರುಷರು ದೀಕ್ಷೆ ಪಡೆದ ಉಲ್ಲೇಖಗಳು ಇಲ್ಲಿ ಇಲ್ಲವೆಂದರೂ ಸರಿ. ಕೊಪ್ಪಳಕ್ಕೆ ಜೈನಧರ್ಮೀಯರು ಬಂದು ಹೋಗುವ ಸಂಖ್ಯೆಯು ಹೆಚ್ಚಿತ್ತೆಂದು ಇಲ್ಲಿಯ ಶಾಸನಗಳು ಉಲ್ಲೇಖಿಸುತ್ತವೆ. ಅಲ್ಲಿದ್ದ ಮುನಿಗಳನ್ನು ಸಿದ್ಧರೆಂದೇ ಜನ ಭಾವಿಸಬೇಕು. ಕೊಪ್ಪಳದಲ್ಲಿ ದೊರಕಿರುವ ಶಾಸನಗಳಲ್ಲಿ ಜೈನಧರ್ಮದ ಪ್ರಾಚೀನ ಶಾಸನವೆಂದರೆ ಕೊಪ್ಪಳದ ಚಂದ್ರಬಂಡೆಯಮೇಲೆ ದೊರೆತ ಶಾಸನವೇ ಆಗಿದೆ. ಕ್ರಿ.ಶ.೮೮೧ರಲ್ಲಿ ಕೊಂಡಕುಂದಾನ್ವಯಕ್ಕೆ ಸೇರಿದ ಏಕಚುಟ್ಟುಗದ ಭಟ್ಟಾರದ ಶಿಷ್ಯ ಸರ್ವನಂದಿಭಟಾರನ ಉಲ್ಲೇಖವಿದ್ದು ಇವನು ಊರಿಗೆ ಮತ್ತು ತೀರ್ಥಕ್ಕೆ ಉಪಯೋಗವಾಗಿ ಶಾಸ್ತ್ರದಾನಮಾಡುತ್ತಾ ಸನ್ನಡತೆಯುಳ್ಳವನಾಗಿ, ಈ ಭೂಮಿಯ ಪಾಪವನ್ನು ಕಳೆದು ತಪಸ್ಸನ್ನು ಮಾಡಿ ಮುಡಿಪಿದುದನ್ನು ತಿಳಿಸುತ್ತದೆ. ಕ್ರಿ.ಶ. ೯೧೭ರ ಶಾಸನವೊಂದರಲ್ಲಿ ಕಾನೂರು ಗಣದ ಉಲ್ಲೇಖ ಬರುತ್ತದೆ. ಕ್ರಿ.ಶ. ೯೩೧ರಲ್ಲಿ ಕುಂದಕುಂದಾನ್ವಯದ ಪದ್ಮನಂದಿಸಿದ್ಧಾಂತನ ಶಿಷ್ಯ .............................. ಭದ್ರಪಂಡಿತ ಭಟಾರನು ನಿಶಿಧಿಗೆಯ ಉಲ್ಲೇಖವಿದೆ. ಕ್ರಿ.ಶ. ೯೭೧ರ ಕೊಪ್ಪಳದ ಶಾಸನ ಮಹೇಂದ್ರದೇವನ ಶಿಷ್ಯ ವಾದೀಭಸಿಂಹನು ಚೈತ್ಯಾಲಯವನ್ನು ನಿರ್ಮಿಸಿದುದು ತಿಳಿಯುತ್ತದೆ. ಕ್ರಿ.ಶ.೯೭೩ರ ಶಾಸನವು ಚಂದಿಬ್ಬರಸಿಯ ಉಲ್ಲೇಖವಿದ್ದು ಈಕೆಗೆ ಇದ್ದಕ್ಕಿದ್ದಂತೆ ನಿರ್ವೇಗ ಹುಟ್ಟಿತೆಂದು ಕುಪಣಕ್ಕೆ ಬಂದು ಸನ್ಯಾಸವನ್ನು ಸ್ವೀಕರಿಸಿ ಮುಡಿಪಿದಳೆಂದು ತಿಳಿದುಬರುತ್ತದೆ. ಕ್ರಿ.ಶ. ೯೭೩.ರ ನಂತರ ಗಂಗವಂಶದ ರಾಣಿವಾಸದ ಬಹಳಷ್ಟು ಜನ ಇಲ್ಲಿ ಬಂದು ನಿರ್ವಾಣ ಹೊಂದಿದರು. ಹೀಗಾಗಿ ರಾಜಮಾನ್ಯ ಜನವಸತಿ ಹೊಂದಿದ ಸ್ಥಳವೆನಿಸಿ ಇದು ಹೆಚ್ಚು ಪ್ರಸಿದ್ಧಿಗೆ ಬರುತ್ತದೆ. ಬೇರೆ ಬೇರೆ

ಗಚ್ಛದ ಮುನಿಗಳು ಅಲ್ಲಿ ದೀಕ್ಷೆ ಪಡೆದ ಕಾರಣ ಅದು ಆದಿತೀರ್ಥವೆಂದು ಹೆಸರು ಪಡೆಯಿತು. ಅತ್ತಿಮಬ್ಬೆಯ ಗುಣಗಳ ಹೆಚ್ಚುಗಾರಿಕೆಯನ್ನು ಬಿಳಿಯರಳೆಯಂತೆ ಗಂಗಾಜಳದಂತೆ ನೆಗಳ್ದ ಕೊಪಣಾಚಳದಂತೆ....... ಎಂದು.ಹೊಗಳಿರುವುದು ಈ ಕ್ಷೇತ್ರದ ಪಾವಿತ್ರ್ಯಕ್ಕೆ ಸಾಕ್ಷಿಯಾದ ಮಾತಾಗಿದೆ. ಕ್ರಿ.ಶ. ೯೭೫ರಲ್ಲಿ ಬಾಬಯ್ಯ ಎಂಬುವವಳು ಮುಕ್ತಿಯನ್ನು ಸಾಧಿಸಿದಳೆಂದು ತಿಳಿದುಬರುತ್ತದೆ. ೯೯೫ರಲ್ಲ ದಿವಾಕರಣಂದಿ ಪಂಡಿತ ಭಟಾರನ ಶ್ರಾವಕಿಯಾದ ಅಣುಗುಬ್ಬೆ ಸನ್ಯಾಸವನ್ನು ಸ್ವೀಕರಿಸಿ ನಿರ್ವಾಣ ಹೊಂದಿದಳು ಎನ್ನುವುದನ್ನು ಹೇಳುತ್ತದೆ. ಯಶಸ್ತಿಲಕ ಚಂಪೂ ಕೃತಿಕಾರನಾದ ಸೋಮದೇವಪಂಡಿತನು ಕ್ರಿ.ಶ. ೯೮೪ರಲ್ಲಿ ಇಲ್ಲಿಯೇ ಮೃತನಾದನೆಂದು ತಿಳಿಯುತ್ತದೆ. ಈ ಸೋಮದೇವನು ಕವಿರಾಜ ತಾರ್ಕಿಕ ಚಕ್ರವರ್ತಿ, ವಾದೀಭ ಸಿಂಹ ಪಂಚಾನನ ಎಂಬ ಬಿರುದುಗಳನ್ನು ಹೊಂದಿದ್ದನ್ನು ಕ್ರಿ.ಶ. ೧೦೧೦ರ ಕೊಪ್ಪಳದ ಶಾಸನ ಉಲ್ಲೇಖಿಸುತ್ತದೆ. ಕ್ರಿ.ಶ. ೯೮೯ರ ಶಾಸನವು ಪಲ್ಲವ ರಾಮನ ಇನ್ನೊಬ್ಬ ಪತ್ನಿ ಪರಿಯಬ್ಬೆ ಕಂತಿಯು ಸನ್ಯಾಸ ಸ್ವೀಕರಿಸಿ ಸತ್ತ ವಿಷಯವನ್ನು ಹೇಳುತ್ತದೆ. ಇವಳು ಜಿನಗೃಹ, ಜಿನಪೂಜೋತ್ಸವ ಜಿನಬಿಂಬ ಜಿನಾಭಿಷೇಕವೆಂಬಿವನಳವಿಲ್ಲನೆ ಪಲವುಂ ಮಾಡಿಸಿದಳು ಎಂದು ತಿಳಿದುಬರುತ್ತದೆ. ಕ್ರಿ.ಶ. ೧೧-೧೨ನೇ ಶತಮಾನದಲ್ಲಿ ಕುಣಿಕೆಯ ನಾಯಕನ ಉಲ್ಲೇಖವಿದ್ದು ಕೆಲವು ಕಾಲ ತೀರ್ಥೋಪಕಾರಿಯಾಗಿ ಜೀವಿಸಿ ಚಂದ್ರನಾಥಾಲಯವನ್ನು ಕುಪಣ ತೀರ್ಥದಲ್ಲಿ ಮಾಡಿಸಿದನೆಂದು ತಿಳಿಯುತ್ತದೆ. ಇನ್ನೊಂದು ಶಾಸನದಲ್ಲಿ ಮಳಾಧಾರಿ ದೇವನ ಶಿಷ್ಯ ಮಾಘನಂದಿಭಟಾರನು ಸ್ವರ್ಗಕ್ಕೆ ಹೋದ ವಿಷಯವಿದೆ. ಇನ್ನೊಂದು ತೇದಿಯಿಲ್ಲದ ಶಾಸನ ಸಾಗರನಂದಿ ಸಿದ್ಧಾಂತದೇವನನ್ನು ಹೆಸರಿಸುತ್ತದೆ. ಮತ್ತೊಂದು ಶಾಸನದಲ್ಲಿ ಗಂಡವಿಮುಕ್ತದೇವನ ಶಿಷ್ಯ ತ್ರಿಭುವನಚಂದ್ರ ಮುಕ್ತಿಪಡೆದನೆಂದು ಗಂಡವಿಮುಕ್ತನು ಕುಂದಕುಂದಾನ್ವಯದ ರವಿಚಂದ್ರದೇವನ ಶಿಷ್ಯನೆಂದು ಹೇಳಲಾಗಿದೆ. ಇವರಲ್ಲದೆ ಮೇಘನಂದಿಭಟಾರ, ಮಾಘಣಂದಿ ಮುನಿ ಮುಂತಾದವರು ನಿರ್ವಾಣ ಹೊಂದಿದ ಉಲ್ಲೇಖಗಳು ಸಿಗುತ್ತವೆ. ಇಲ್ಲಿಂದ ಮುಂದೆ ಕೊಪ್ಪಳದಲ್ಲಿ ಜೈನಧರ್ಮದ ಶಾಸನಗಳು ಕಡಿಮೆಯಾಗುತ್ತಾ ಬರುತ್ತವೆ. ಅದು ಜಿಲ್ಲೆಯ ಇತರೆಡೆಗಳಲ್ಲಿ ನಿಧಾನವಾಗಿ ಸ್ಥಳಾಂತರವಾದಂತೆ ಶಾಸನಗಳಿಂದ ತಿಳಿಯುತ್ತದೆ. ನಿಶಿಧಿ ಶಾಸನಗಳು ತೀರ ಕಡಿಮೆಯಿರುತ್ತವೆ. ಕ್ರಿ.ಸ. ೧೩ನೇ ಶತಮಾನದಕ್ಕೆ

ಸೇರಬಹುದಾದ ಯಲಬುರ್ಗಾದ ಒಂದು ಶಾಸನವು ಈ ಪ್ರದೇಶದಲ್ಲಿ ಜೈನಧರ್ಮ ಎದುರಿಸಿದ ಕಷ್ಟಕೋಟಲೆಗಳ ಮೇಲೆ ಬೆಳಕು ಚೆಲ್ಲುವಂಥಹದ್ದಾಗಿದೆ. ಮುಮ್ಮಡಿಸಿಂಘನ ಬಾಧೆಯಿಂದ ಯರಂಬರಿಗೆಯಲ್ಲಿ ಧರ್ಮ ಕೆಟ್ಟಿತೆಂಬ ಸಂಗತಿಯನ್ನು ತಿಳಿಸುತ್ತದೆ. ಮುಮ್ಮಡಿ ಸಿಂಘನು ಆರಂಭದಲ್ಲಿ ಸೇವುಣರ ಸಾಮಂತನಾಗಿದ್ದ ಹೊಸಮಲೆಯ ಅರಸ. ಬಹುಶಃ ಯಲಗುಬುರ್ಗಿಯು ಸಿಂಧರ ನಂತರ ಆ ಪ್ರದೇಶದಲ್ಲಿ ತನ್ನ ಅಸ್ತಿತ್ವವನ್ನು ಕಳೆದುಕೊಂಡ ಕ್ರಿ.ಶ. ಸುಮಾರು ೧೨೭೦ರಿಂದ ಇವನ ರಾಜ್ಯ ಹೊಸಮಲೆಯಲ್ಲಿ ಆರಂಭವಾಗಿರಬೇಕು. ಆಗ ಹೊಸಣದೇಶ ಮತ್ತು ಕುಂತಳದೇಶಕ್ಕೆ ಆಚಾರ್ಯನಾಗಿದ್ದ ರಾಮುರಾಯಾಚಾರ್ಯನು ಜೈನಧರ್ಮವನ್ನು ಉದ್ದೇಶಿಸಿದಂತೆ ಶಾಸನವು ಹೇಳಿದೆ. ಈ ಬಸದಿಯ ಪಾರ್ಶ್ವನಾಥನ ಬಿಂಬವನ್ನು ಮಿಂಡಗುದಲಿಯ ಕೇತಿಶೆಟ್ಟಿ ಮಾಡಿಸಿದ. ಬಹುಶಃ ಈ ಜೈನವಿರೋಧಿ ನೀತಿ ಇವರ ರಾಜ್ಯಾಡಳಿತ ಇರುವವರೆಗೆ ಮುಂದುವರೆದಂತೆ ತಿಳಿಯುತ್ತದೆ. ಕೈಫಿಯತ್ತೊಂದರಲ್ಲಿ ಕುಮಾರರಾಮನು ಬೇಟೆಯಾಡುತ್ತಿರುವಾಗ ತುಂಗಭದ್ರಾ ನದಿಯ ಉತ್ತರದಲ್ಲಿದ್ದ ಕುಮ್ಮಟ ಎಂಬ ಗ್ರಾಮಕ್ಕೆ ಬಂದನು. ಅಲ್ಲಿ ಕೆಲವು ಜೈನರು ವಾಸಿಸುತ್ತಿದ್ದರು. ಅವರು ಕುಮಾರರಾಮನ್ನು ಸತ್ಕರಿಸಿ ಊಟವಿಕ್ಕಿದರು. ಕುಮಾರರಾಮನು ಎದ್ದುಹೋದಬಳಿಕ ಅವನು ಊಟ ಮಾಡಿದ್ದ ಎಡೆಗೆ ಪ್ರಾಯಶ್ಚಿತ್ತ ಮಾಡಿದರು. ಇದನ್ನು ಕೇಳಿ ಕುಮಾರರಾಮನಿಗೆ ಸಿಟ್ಟುಬಂತು. ತಾನು ಅದೇ ಸ್ಥಳದಲ್ಲಿ ಮರುದಿನ ಕುರಿ-ಕೋಣಗಳನ್ನು ಕಡಿದನು. ಅಲ್ಲಿದ್ದ ಜೈನರು ತಮ್ಮ ಹಿಂಸಾವ್ರತಕ್ಕೆ ಭಂಗವುಂಟಾಯಿತೆಂದು ಬಗೆದು ಆ ಸ್ಥಳವನ್ನು ಬಿಟ್ಟು ದೂರ ಹೊರಟುಹೋದರು ಎಂದು ಉಲ್ಲೇಖವಿದೆ. ಇದೇನೇ ಇದ್ದರೂ ಕುಮಾರರಾಮನು ತನ್ನ ತಾತ ಮುಮ್ಮಡಿ ಸಿಂಗನಂತೆ ಜೈನವಿರೋಧಿ ನಿಲುವನ್ನು ತಾಳಿದ್ದನೆಂದು ತಿಳಿದುಬರುತ್ತದೆ. ಕ್ರಿ.ಶ. ೧೩೪೨ರಲ್ಲಿ ಬುಕ್ಕರಾಯನ ಮಗ ಹರಿಹರನ ದಂಡನಾಯಕನಾದ ಬೈಚದಂಡನಾಯಕನ ಮಗ ಕಿರುಗಪನು ಆನೆಗೊಂದಿಯಲ್ಲಿ ಕಲ್ಲಿನಲ್ಲಿ ಬಸದಿಯನ್ನು ನಿರ್ಮಿಸುತ್ತಾನೆ. ಬೈಚದಂಡನಾಯಕನು ಇದಕ್ಕೆ ದಾನ ನೀಡುತ್ತಾನೆ. ಕ್ರಿ.ಶ. ೧೩೪೬ರಲ್ಲಿ ಕೊಪ್ಪಳದಲ್ಲಿ ಮೂಲಸಂಘದ ಬಳಾತ್ಕಾರ ಗಣ ಸರಸ್ವತಿ ಗಚ್ಛದ ರಾಜಗುರು ಮಂಡಳಾಚಾರ್ಯನಾದ ಅನಂತಕೀರ್ತಿಯ ಶಿಷ್ಯ ಸಿಂಹನಂದಾಚಾರ್ಯನ ನಿಸಿಧಿಯ ಉಲ್ಲೇಖವಿದೆ. ಶಾಸನದಲ್ಲಿ ವೈದಿಕ ಪರಂಪರೆಯ ಮುನಿಗಳು

ಬಳಸುತ್ತಿದ್ದ ವಿಶೇಷಣಗಳಾದ ''ಸ್ವಸ್ತಿ, ಯಮನಿಯಮ ಸ್ವಾಧ್ಯಾಯಧ್ಯಾನ ಮೌನಾನುಷ್ಠಾನ ಜಪತಪಶೀಲ'' ಎಂಬ ಒಕ್ಕಣೆಯಿದೆ. ಈ ಕಾಲಕ್ಕೆ ವಿಜಯನಗರದ ಸಂಗಮವಂಶದ ಹರಿಹರ ರಾಜ್ಯಭಾರ ಮಾಡುತ್ತಿದ್ದ. ಜೈನಧರ್ಮದ ನಿಶಿಧಿಕಲ್ಲುಗಳು ವಿಜಯನಗರದ ಸ್ಥಾಪನೆಯಾದ ಅವರ ಆರಂಭದ ರಾಜಧಾನಿಯಾದ ಆನೆಗೊಂದಿಯ ಪರಿಸರದಲ್ಲಿ ಕಾಣಸಿಗುತ್ತವೆ. ಕ್ರಿ.ಶ. ೧೪ನೇ ಶತಮಾನದಲ್ಲಿ ಕೊಪ್ಪಳದಲ್ಲಿ ಮೂಲಸಂಘ ಸೇನಗಣದ ಚೊಕ್ಕ ಒಡೆಯ ನಾಕಿ ಸೆಟ್ಟಿಯ ಮಗ ಪಾಯಣ್ಣ ನಿರ್ವಾಣ ಹೊಂದಿದುದರ ಬಗೆಗೆ ಉಲ್ಲೇಖವಿದೆ. ಅದೇ ಶತಮಾನದಲ್ಲಿ ಕೊಪ್ಪಳದ ಸಮೀಪದ ಪಾಲ್ಕಿಗುಂಡಿನಲ್ಲಿ ದೇವೇಂದ್ರಕೀತಿರ್ಯ ಪಾದಗಳನ್ನು ಅವನ ಶಿಷ್ಯನಾದ ವರ್ಧಮಾನದೇವನು ತಿದ್ದಿಸಿದನೆಂದು ತಿಳಿದುಬರುತ್ತದೆ. ಇಲ್ಲಿಂದ ಮುಂದೆ ಜೈನಶಾಸನಗಳು ಈ ಪ್ರಾಂತದಲ್ಲಿ ಹೆಚ್ಚು ಕಂಡುಬರುವುದಿಲ್ಲ. ಕ್ರಮೇಣ ಆ ಧರ್ಮ ಹಿಂದೆ ಸರಿದುದು ತಿಳಿದುಬರುತ್ತದೆ.

## ವೀರಶೈವ ಧರ್ಮ

ಆಗಮಮೂಲದ ಅನೇಕ ಶೈವಧರ್ಮಗಳಲ್ಲಿ ಕಾಳಾಮುಖ ಶೈವವು ಕರ್ನಾಟಕದಲ್ಲಿ ತುಂಬ ಪ್ರಸಿದ್ಧಿಯನ್ನು ಪಡೆದಿತ್ತು. ಮುಂದೆ ವೀರಶೈವ ದರ್ಮ ಪ್ರವರ್ಧಮಾನವಾದಂತೆ ಅದರಲ್ಲಿ ಇದು ಕರಗಿಹೋಯಿತು. ಈ ಧರ್ಮದ ಯತಿಗಳು ದೇವಾಲಯದ ಸ್ಥಾನಿಕರಾಗಿರುವುದಲ್ಲದೆ ಆ ದೇವಾಲಯಕ್ಕೆ ಹೊಂದಿಕೊಂಡಂತೆ ಮಠವೊಂದನ್ನು ಕಟ್ಟಿಕೊಳ್ಳುತ್ತಿದ್ದರು. ದೇವಾಲಯ ಮತ್ತು ಮಠಗಳ ಕಾರ್ಯಚಟುವಟಿಕೆಗಳ ನಿರ್ವಹಣೆ ಹಾಗೂ ವಿದ್ಯಾದಾನ ಈ ಯತಿಗಳ ಕೆಲಸವಾಗಿತ್ತು. ಕುಕನೂರಿನ ಶಾಸನದಲ್ಲಿ ಸೋಮೇಶ್ವರ ಪಂಡಿತನ ವರ್ಣನೆ ಹೀಗಿದೆ. 'ಸ್ವಸ್ತಿ ಯಮನಿಯಮ ಸ್ವಾದ್ಯಾಯ ಧ್ಯಾನಧಾರಣ ಸಮಾಧಿ ಜಪ ಷಡಂಗೋಪಹಾರಾದಿ ಸಂಪನ್ನರ್ ಅಖಿಳ ಪ್ರಾಣಿ ಪ್ರಸನ್ನರ್ ಅನೇಕ ತರ್ಕ್ಕವ್ಯಾಕರಣ ನಾಟಕಭರತ ವಾತ್ಸಾಯನಾದಿ ವಿದ್ಯಾಸಾರಸಾರ ವಿಚಾರ ಚತುರಾನನರ್। ದುಷ್ಟದರ್ಪಿಷ್ಟ ಪಟಿಷ್ಠ ಸಪ್ಪುರಾನೇಕಾನ್ತವಾದಿ ಮತ್ತ ಮಾತಂಗ ಮಸ್ತಕ ವಿದಳನ ಪಂಚಾನನರ್ ಸಕಳ ಜಗತ್ಕರ್ತೃ ತ್ರಿಸಮುನ ವಿಧಾತೃತ್ವಾಶಿದಿಸಿರಾತಿಕೀರ್ಮ ಮೀಮಾಂಸಕ ಕುಳಕುಧರ ವಿದಳನೋತ್ತುಂಗವಜ್ರಾಸನರ್

ಅಸಂಖ್ಯ ಸಾಂಖ್ಯಾ ಖ್ಯಾತಾಭಿಖ್ಯಾ ತಮಃ ಪಟಳವಿಕಳೀಕರಣ ಪ್ರಚಂಡ ಮಾರ್ತಾಂಡರ್ ಅವನತ ಜನದುರಿತ ಗಿರಿವಜ್ರದಂಡರ್ ಅಖರ್ವಗರ್ವಸ್ಪರ್ವತಾರೂಢ ದುರ್ವಿನೀತ ಸರ್ವ್ವ ಚಾರ್ವಾಕೋರ್ವ್ವಿರುಹ ನಿಪಾಟನ ಪಟು ಹರಸ್ಕುಠಾರರ್ ವಿಷಮ ವಿಷಯಾತಿದುರರ್ ಸುಜನಜನ ಜನಿತ ಸಂತೋಷರ್। ಅಶೇಷಗುಣವಿಶೇಷರ್। ಸ್ವಪರ ಪಾಪಾಪ್ರಕ್ಷಾನಳ ಮಂತ್ರಾಧೀಶ್ವರರ್। ನಿಜಹೃದಯ ಕಮಳ ಮಧ್ಯಾಧ್ಯಾಸಿತ ಪರಮೇಶ್ವರರ್। ಕಲಿಕಲುಷಾಪಹರಣ ಪರಿಣತಾನ್ತಃ ಕರಣ ಸಂಶುದ್ಧರ್। ಸಾಧುಕುಳ ಪ್ರಸಿದ್ಧರೆನಿಪ ಸೂಂಡಿಯ ನಗರೇಶ್ವರದ.............ಸೋಮೇಶ್ವರಮುನಿ.........' ಇವನು ಗಿರೀಶ ಸಾಂಖ್ಯಮತಮಂ ನಿರ್ಮೂಳನ ಮಾಡಿದನಂತೆ ಇದಲ್ಲದೆ ಶಿವಸಿದ್ಧಾಂಚಾರ್ಯ, ರಾಜಗುರು ಮಂತ್ರಜ್ಞ, ತ್ರೈಕಾಲದರ್ಶಿ, ಶೈವಾಗಮರ್, ಶಬ್ದಜ್ಞ, ಶಾಸ್ತ್ರಜ್ಞ, ತರ್ಕಜ್ಞ, ಕಾವ್ಯಜ್ಞ, ದೈವಜ್ಞ, ಸರ್ಬಜ್ಞ.............. ನೆನೆದುದೇ ದೈವಂ, ಎಂದುದೇ ಮಂತ್ರಂ - ಹೀಗೆ ಇವರನ್ನು ಹೊಗಳಲಾಗಿದೆ. ಉಳಿದ ಶಾಸನಗಳಲ್ಲಿ ಅಲ್ಪಸ್ವಲ್ಪ ಬದಲಾವಣೆಗಳೊಂದಿಗೆ ಇಂಥ ಒಕ್ಕಣೆಗಳನ್ನೇ ಬಳಸಿದ್ದಾರೆ.

ವೀರಶೈವ ಧರ್ಮವೆಂದು ಸ್ಪಷ್ಟವಾಗಿ ಸೂಚಿತವಾಗಿಲ್ಲದಿದ್ದರೂ ಶಾಸನಗಳಲ್ಲಿ ಬಂದಿರುವ ವಿಷಯ ಹಾಗೂ ಬದಲಾದ ಹೆಸರುಗಳ ಆಧಾರದಿಂದ ವೀರಶೈವವೆಂದು ಹೇಳಬಹುದಾದ ಕೆಲವು ಶಾಸನಗಳು ದೊರೆಯುತ್ತವೆ. ೧೧೮೫ರ ಶಾಸನದಲ್ಲಿ ಮೊಲ್ಲೆಯ ಬೊಮ್ಮಯ್ಯನಿಗೆ ಚಾವುಂಡರಾಜನ ಮಗ ವೀರಬಿಜ್ಜಳದೇವನು ಪ್ರಮಥ ವೃತ್ತಿಯಾಗಿ ಅಲ್ಲಿನ ಗಣಮಠಕ್ಕೆ ೨೦೦ ಮತ್ತರು ಭೂಮಿಯನ್ನು ದಾನವಾಗಿ ನೀಡಿದ ಉಲ್ಲೇಖವಿದೆ. ಈತನು ಕಲಚೂರಿ ಬಿಜ್ಜಳನನ್ನು ಕೊಂದ ಮೊಲ್ಲೆಬೊಮ್ಮಣ್ಣನಾಗಿರಬಹುದೆಂಬುದು ವಿದ್ವಾಂಸರ ಮತವಾಗಿದೆ. ಕ್ರಿ.ಶ. ೧೨೩೧ರ ಕುಕನೂರಿನ ಶಾಸನದಲ್ಲಿ ವಿರೂಪಾಕ್ಷ ಸ್ವಾಮಿಯ ಉಲ್ಲೇಖವಿದೆ. ಇವನು ಕಲ್ಲೇಶ್ವರದ ಆಚಾರ್ಯನಾಗಿರುವಂತೆ ತಿಳಿದುಬರುತ್ತದೆ. ಕ್ರಿ.ಶ. ೧೬ನೇ ಶತಮಾನದ ನಂತರ ಸ್ಪಷ್ಟವಾಗಿ ವೀರಶೈವ ಧರ್ಮದ ಉಲ್ಲೇಖಗಳು ಕಂಡುಬರುತ್ತವೆ. ಕ್ರಿ.ಶ. ೧೫೩೮ರ ಹಳೆಯ ಅಯೋಧ್ಯಾ ಶಾಸನದಲ್ಲಿ ನಿರಾಸೆ ಮಠದ ಉಲ್ಲೇಖ ಬಂದಿದೆ. ಅಲ್ಲಿದ್ದ ಚನ್ನಮಲ್ಲಿಕಾರ್ಜುನ ಒಡೆಯನನ್ನು ಹೆಸರಿಸಿದೆ. ಪುರದ ಶಾಸನವು ೧೬ನೇ ಶತಮಾನದ್ದಾಗಿದ್ದು ಅಲ್ಲಿದ್ದ ಸೋಮೇಶ್ವರ ದೇವರ ಉಲ್ಲೇಖದ ಜೊತೆಗೆ ಓಹಿಲಯ್ಯನು ಅಲ್ಲಿ

ನೆಲೆಸಿದ್ದನೆಂಬ ಸಂಗತಿ ತಿಳಿದುಬರುತ್ತದೆ. ಅವನಿಗೆ ಸೋಮನಾಥನು ಕನಸಿನಲ್ಲಿ ಬಂದು ಕೆರೆಯನ್ನು ಕಟ್ಟಿಸು, ದೇಗುಲವನ್ನು ಮಾಡಿಸು ಎಂದು ಹೇಳಿದಂತೆ ತಿಳಿಸಿದನು. ಶಾಸನದಲ್ಲಿ ಒಂದು ವಚನದ ಉಲ್ಲೇಖವೂ ಇದೆ. ಹಲಿಯ ಹೊಕ್ಕು ದೇಗುಲವ ಮಾಡುವದು ಸರಿಗೆಯ ಹೆಕ್ಕು ಕರೆಯನಗಳುವುದು ''ಬಾಗಿಲಲ್ಲಿದ್ದ ಕೋಟೆ ಸಂಸಾರಕೆ ತೆರಹುಗಡೆವೇಡ ಓಹಿಲ ಮಾಡಿಸಿದ ಕೋಟಲಿಂಗಕ್ಕೆ ತ್ರಿಕಾಲ ಮಜ್ಜನಕ್ಕೆ ಎರದಾತನೇ ಮೂರು ಕಾಲಮಂಚದ ಮೇಲೆ ಒರಗಲರುವ ಪೇಳಿದಮನೊರಗಿದಡೆ ಪ್ರತ್ಯಾಯ ಯೀಳೆ, ಬಾಳೆ, ತೆಂಗು, ಹಲಸು ಮಾವನಿಕ್ಕಿದಂತೆ ಪಾಪ ಸಂಪಗೆ ಸೇವನ್ತಿ ಯಿರುವನ್ತಿ ಮಲ್ಲಿಗೆ ಜಾಜಿ ಯಿವನಿಕ್ಕಿಂಡಂ ಪಾಪ, ಕಣಗಿಲೆ ಕೊಂಚಿವಾಳ ಬೆಲ್ಲವೆತ್ತ ಹಾದರಿಯ ಯಿವನಿಕ್ಕಿದಂಗೆ ಪುಣ್ಯ''

ಮತ್ತೊಂದು ಶಾಸನದಲ್ಲಿ ಬನದಾಯವೇ ಎಂಬುವವಳು ವೀರಪ್ರತಾಪದೇವರಾಯನ ಕಾಲದಲ್ಲಿ ಕೆರೆಯನ್ನು ಕಟ್ಟಿಸಿ ಸಜ್ಜನ ಶುದ್ಧ ಶಿವಾಚಾರ್ಯ ಸಂಪನ್ನರು ಸೋಮಯ್ಯದೇವ ಅಯ್ಯಗಳಿಗೆ ದೇವರ ನೈವೇದ್ಯಕ್ಕಾಗಿ ಬೇಕಾದ ನೆಲ್ಲು ಬೆಳೆಯಲು ಕೆರೆಯನ್ನು ಕಟ್ಟಿಸುತ್ತಾಳೆ. ಇವಲ್ಲದೆ ಕ್ರಿ.ಶ. ೧೬೭೩ರ ಶಾಸನವೊಂದರಲ್ಲಿ ನಿಜಗುಣ ಪಂಡಿತಾರಾಧ್ಯರ ಉಲ್ಲೇಖ, ೧೭ನೇ ಶತಮಾನವೊಂದರಲ್ಲಿ ಪಂಡಿತಾರಾಧ್ಯ ಶಿವಪದೇವನ ಉಲ್ಲೇಖವಿದೆ.

## ವೈದಿಕ ಧರ್ಮ

ವೈದಿಕ ಧರ್ಮವು ಬಹುತೇಕ ಕನ್ನಡದ ಶಾಸನಗಳಲ್ಲಿ ದಾಖಲಾಗುತ್ತಾ ಬಂದಿದೆ. 'ಮಹಾಜನ' ಸಂಸ್ಥೆಯನ್ನು ಇದು ರೂಪಿಸಿಕೊಂಡು ಬಂದಿದೆ. ಕೊಪ್ಪಳ ಪ್ರದೇಶದಲ್ಲಿ ವೈದಿಕ ಧರ್ಮಕ್ಕೆ ಸಂಬಂಧಿಸಿದ ಶಾಸನಗಳು ಕಡಿಮೆಯಿವೆ. ಕವರೂರು ಮುದುವೊಳಲು ಬಣಂಗೆರೆ, ಕುಕನೂರು ಇಟ್ಟಿಗೆ ಅಳವಂಡಿ, ತಳಕಲ್ಲು ಮುಂತಾದ ಗ್ರಾಮಗಳು ಅಗ್ರಹಾರಗಳಾಗಿದ್ದು ಅಲ್ಲಲ್ಲಿ ಮಹಾಜನರ ಬಗ್ಗೆ ಶಾಸನಗಳು ದೊರೆಯುತ್ತವೆ. ಮುಧೋಳಿನಲ್ಲಿ ದೊರೆತ ಶಾಸನವು ಮಹಾಜನರ ಬಗೆಗೆ ಪ್ರಥಮ ಉಲ್ಲೇಖಗಳನ್ನು ಕೊಡುತ್ತದೆ. ಬಳಗೆರೆಯ ಮಹಾಜನರು ಇನ್ನೂರ್ವರು ''ಯಮನಿಯಮ

ಸಮಾಧಿಸಂಪನ್ನರುಂ ಷಟ್ಕರ್ಮನಿರತರುಂ ಸಪ್ತಸೋಮಸಂಸ್ಥಾವಗಾಹನ ಪವಿತ್ರೀಕೃತ ಶರೀರ ಸಕಳಶಾಸ್ತ್ರ.................. ಪಾರಾಯಣರುಂ ಯಜ್ಞದೀಕ್ಷಿತರುಮಾಗಿ'' ಸಧರ್ಮದಲ್ಲಿ ನಡೆಯುತ್ತಿದ್ದರೆಂದು ತಿಳಿಸಿದೆ. ಕುಕನೂರಿನ ಶಾಸನದಲ್ಲಿ ಮೇಲೆ ಹೇಳಿದ ಉಲ್ಲೇಖಗಳಿಗಿಂತ ಭಿನ್ನವಾಗಿ ವರ್ಣಿಸಲಾಗಿದೆ. ಇಟಗಿಯ ಶಾಸನ ಯಾಗಗಳನ್ನು ಮಾಡಿದ ಉಲ್ಲೇಖಗಳನ್ನು ಹೊಂದಿದೆ. ಆಹವಮಲ್ಲನು ತಾನು ಪಟ್ಟಕ್ಕೆ ಬಂದ ವರ್ಷ ಅಂದರೆ ರಾಷ್ಟ್ರಕೂಟರನ್ನು ಮೂಲೆಗೆ ತಳ್ಳಿ ಸಿಂಹಾಸನವನ್ನೇರಿದಂದು ಬ್ರಹ್ಮಾಂಡಕ್ರತು ಯಾಗವನ್ನು ಮಾಡಿ ಬ್ರಾಹ್ಮಣರಿಗೆ ಅನೇಕ ದಾನಗಳನ್ನುಮಾಡಿಸಿದನೆಂದು ಕೊಪ್ಪಳದ ಶಾಸನವು ತಿಳಿಸುತ್ತದೆ. ಹಾಗೆಯೇ ಸೋಮಯಾಜಿ ಎಂಬುವನು ಉಪೇಂದ್ರದೇವ ಸರ್ವಕೃತವನ್ನು ಮಾಡಿಸಿದ. ಸಾಮಿದೇವ ಎಂಬುವನು ಬರವೀವ ಚಂಡಿಕಾ ಹೋಮವನ್ನು ಮಾಡಿಸಿದ ಉಲ್ಲೇಖವಿದೆ. ಕ್ರಿ.ಶ. ೧೦೯೭ರ ಕವಲೂರು ಶಾಸನದಲ್ಲಿ ಚೌಡಭಟ್ಟನು ವಾಜಪೇಯಿ ಯಾಗವನ್ನು ಮಾಡಿದ ಬಗೆಗೆ ಉಲ್ಲೇಖಗಳಿವೆ.

ಇಸ್ಲಾಂ ಶಾಸನಗಳು

ಬಿಜಾಪುರದ ಎರಡನೆಯ ಅದಿಲ್‌ಷಾಹಿಯ ಶಾಸನಗಳು ಹೈದರಾಲಿ ಮತ್ತು ಟಿಪ್ಪು ಸುಲ್ತಾನನ ಶಾಸನಗಳು ಕೊಪ್ಪಳದಲ್ಲಿ ದೊರೆಯುತ್ತವೆ. ಈ ಶಾಸನಗಳು ನಾಸ್ಕಾಲಿಕ್ ಮತ್ತು ಕಲಿಗ್ರಾಫಿಕ್ ಬರಹಗಳಲ್ಲಿ ಬರೆಯಲ್ಪಟ್ಟಿವೆ. ಕೆಲವು ಶಾಸನಗಳು ಗದ್ಯಪದ್ಯಗಳೆರಡರಲ್ಲಿಯೂ ಇವೆ. ಒಂದು ಶಾಸನ ಮಾತ್ರ ಜೋಡು ಪದ್ಯರೂಪದಲ್ಲಿದೆ. ಈ ಶಾಸನಗಳು ೧೬೦೯, ೧೭೭೯, ೧೭೮೪, ೧೭೯೮ರಲ್ಲಿ ಕೆತ್ತಲ್ಪಟ್ಟಿವೆ. ೧೬೦೯ರ ಬಿಜಾಪುರದ ಎರಡನೆಯ ಇಬ್ರಾಹಿಂ ಅದಿಲ್‌ಷಾಹಿಯು ಕೆತ್ತಿಸಿದ ಶಾಸನದಲ್ಲಿ ಯಾಕುತ್‌ಖಾನ್ ಮತ್ತು ಷಾಜಿ ಖಾನ್ ಇವರು ಕೊಪ್ಪಳದ ಕೋಟೆಯ ಆವರಣದೊಳಗೆ ಮಸೀದಯನ್ನು ಕಟ್ಟಿಸಿದುದರ ಬಗ್ಗೆ ಉಲ್ಲೇಖವಿದೆ. ೧೬೦೯ರ ಮತ್ತೊಂದು ಶಾಸನದಲ್ಲಿ ಆದಿಲ್‌ಷಾಹ್‌ನ ಕಾಲದಲ್ಲಿ ಕೋಟೆಯ ಕೆಲ ಭಾಗವನ್ನು ಎತ್ತರಿಸಿದುದರ ಬಗೆಗೆ ಮತ್ತು ಆಲಿದ್ವಾರವನ್ನು ಕಟ್ಟಿದುದರ ಬಗೆಗೆ ಉಲ್ಲೇಖವಿದೆ. ೧೭೭೯ರ ಎರಡು ಶಾಸನಗಳು ಇಲ್ಲಿ ಲಭ್ಯವಿವೆ. ಒಂದು ಶಾಸನವು ದೂದ್‌ಪೀರ್

ಮಸೀದಿಯ ಹತ್ತಿರವಿದ್ದು ಊರಿನ ಆಚೆಯ ಚಿಕ್ಕ ಕೆರೆಯಿಂದ ಕಾಲುವೆಯ ಮುಖಾಮಂತರ ನಗರದ ಬಾವಿಗೆ ನೀರನ್ನು ಹಾಯಿಸಿದುದರ ಬಗೆಗೆ ಮತ್ತು ಈ ಬಾವಿಗೆ ಹಾಲುಕೋಟೆ ಚಿಕ್ಕವೋರೆಯನ್ನು ಬಾವಿಯ ದಡದಲ್ಲಿ ನಿರ್ಮಾಣ ಮಾಡಿದುದರ ಬಗೆಗೆ ಉಲ್ಲೇಖವಿದೆ. ಮತ್ತೊಂದು ಶಾಸನವು ಶೈಲಾಣ್ ಪಾಶ್ ದರ್ಗಾದ ಹತ್ತಿರವಿದೆ. ಗಚ್ಚಿನ ಕೋಟೆಯ ಮಹಾದ್ವಾರದ ರಾಜಬೀದಿಯ ಎಡಗಡೆ ಇರುವ ಈ ಶಾಸನವು ತೋಪುಗಳಿಂದ ಬುರುಜ್ ಅಲ್ಲಾವನ್ನು ರಕ್ಷಿಸಲೆಂದು ಕೇಳಿಕೊಂಡಿದೆ. ೧೭೮೪ರ ಜೋಗಿ ಬಂಡೆಯ ಹತ್ತಿರವಿರುವ ಚಾಂದ್‌ಬಾಡಿ ದಡದಲ್ಲಿ ಹೈದರಾಲಿ ಕಟ್ಟಿಸಿದ ಭವ್ಯ ಕಟ್ಟಡದ ಮತ್ತು ಊರಿಗೆ ನೀರು ನೀಡುವ ಕೆರೆಯನ್ನು ಕಟ್ಟಿಸಿದುದರ ಬಗೆಗೆ ಉಲ್ಲೇಖವಿದೆ. ೧೭೭೯ರ ಮತ್ತೊಂದು ಶಾಸನವು ಕೆಳಕೋಟೆಯ ಆವರಣದ ಕೋಟೆಯಲ್ಲಿ ಲಭ್ಯವಾಗಿದ್ದು ಫತೇದರ್‌ವಾಜ್ ಫಾಟೀ ಮಹಲ್‌ಗಳನ್ನು ನಾಯಕ ಮಹಮ್ಮದುಸ್ಮಾನನು ಕಟ್ಟಿಸಿದನೆಂದು ಶಾಸನದಲ್ಲಿ ಬರೆದಿದೆ. ಹೀಗೆ ಈ ಶಾಸನವು ಅಂಚೆ ಕಛೇರಿಯಲ್ಲಿದೆ. ೧೭೮೩ರ ಶಾಸನವು ಅಲ್ಲಾ ಬಿಸ್ಮಿಲ್ಲಾ ಹಿರೇ ಎಂದು ಪ್ರಾರಂಭವಾಗುತ್ತಿದ್ದು ಟಿಪ್ಪು ಸುಲ್ತಾನನ ನಾಯಕ ಮಹಮ್ಮದ್ ಬಹಲ್ಲಮಿ ಕೋಟೆಯ ಮಹಾದ್ವಾರದ ಮೇಲೆ ಸುಲ್ತಾನನ ಹೆಸರಿನಲ್ಲಿ ಫಲಕವಿರಿಸಿದನು. ಇದಕ್ಕೆ ರೂಢಿಯಲ್ಲಿ ಸುಲ್ತಾನ್ ದರ್‌ವಾಜಾ ಎಂದು ಕರೆಯುವರು. ಈ ಶಾಸನವು ಈ ಅಂಶಗಳನ್ನೊಳಗೊಂಡಿದೆ. ಮೂರನೇ ಸುತ್ತಿನ ಕೋಟೆಯಲ್ಲಿ ಸಿಗುವ ೧೭೭೯ರ ಮತ್ತೊಂದು ಶಾಸನವು ಅಲ್ಲಾಹನು ಸರ್ವಶಕ್ತನು, ಅಧಿಕ ಸೂತ್ರಗಳು ದೇವರಿಗೆ ಸಲ್ಲವು, ಈ ಬಾಗಿಲು ಮಹಜ್ಜಮ ನೇಸರಿನಿಂದ ಶೋಭಿಸಲಿ ಎಂದು ಬರೆಯಲ್ಪಟ್ಟಿದೆ. ನಾಲ್ಕನೇ ಸುತ್ತಿನ ಕೋಟೆಯಲ್ಲಿರುವ ೧೭೬೮ರ ಶಾಸನವು ಪುನಃ ಫತೇಹೈದರ್ ಅಲಿಸ್ ನವಾಬ ಹೈದರಾಲಿಖಾನ್ ತೇಜಯಾ - ಇವನ ಕಾಲದಲ್ಲಿ ಈ ಕೋಟೆಯನ್ನು ಬಲಪಡಿಸುವ ಅವಕಾಶವು ಉಸ್ಮಾನನಿಗೆ ದೊರೆಯಿತೆಂದು ಕೆತ್ತಲ್ಪಟ್ಟಿದೆ. ಹೀಗೆ ಇಸ್ಲಾಂ ಶಾಸನಗಳು ಅನೇಕ ಲಭ್ಯವಿದ್ದು ಕೆಲವು ತ್ರುಟಿತವಾಗಿವೆ. ಆದರೂ ಇಸ್ಲಾಂ ಅರಸರು ನಡೆಸಿದ ಆಳ್ವಿಕೆಯ ಬಗೆಗೆ ಹೆಚ್ಚಿನ ವಿವರಗಳು ಕಾಗದದ ದಸ್ತಾವೇಜುಗಳಲ್ಲಿ ಸಿಗುತ್ತವೆ.

ಶಾಸನಗಳ ಭಾಷೆ

ಕೊಪ್ಪಳದಲ್ಲಿ ದೊರೆತಿರುವ ಶಾಸನಗಳು ಮೂರು ನಾಲ್ಕು ಭಾಷೆಗಳಲ್ಲಿ ದೊರೆಯುತ್ತವೆ. ಆವುಗಳು ಬ್ರಾಹ್ಮಿ, ಪಾಳಿ, ಪ್ರಾಕೃತ, ಸಂಸ್ಕೃತ, ಕನ್ನಡ, ಉರ್ದು ಮತ್ತು ಅರೇಬಿಕ್ ಭಾಷೆಗಳಲ್ಲಿ ದೊರೆಯುತ್ತವೆ. ಅಶೋಕನ ಶಿಲಾ ಶಾಸನಗಳು ಬ್ರಾಹ್ಮಿ ಭಾಷೆಯಲ್ಲಿವೆ. ಆದರೆ ಜೈನಶಾಸನಗಳು ಸಂಸ್ಕೃತ, ಪ್ರಾಕೃತ, ಕನ್ನಡವನ್ನು ಸಮಪ್ರಮಾಣದಲ್ಲಿ ಬಳಸಿಕೊಂಡು ಕೆತ್ತಲಾಗಿವೆ. ಪೂರ್ಣ ಸಂಸ್ಕೃತ ಶಾಸನಗಳು, ಪೂರ್ಣ ಪ್ರಾಕೃತ ಶಾಸನಗಳು, ಪೂರ್ಣ ಕನ್ನಡ ಶಾಸನಗಳು ಜೈನರ ಶಾಸನಗಳಲ್ಲಿ ದೊರೆತಿವೆ. ಶಾಸನದಲ್ಲಿ ಬಳಸಿರುವ ಭಾಷೆಯು ಹೆಚ್ಚು ಸರಳವಾಗಿದೆ. ಕೆಲವು ಶಾಸನಗಳಲ್ಲಿ ಗಂಭೀರವಾದ ಭಾಷೆಯನ್ನು ಬಳಸಲಾಗಿದೆ. ಕನ್ನಡ ಮತ್ತು ಸಂಸ್ಕೃತ ಪದಗಳನ್ನು ಸಮಪ್ರಮಾಣದಲ್ಲಿ ಬಳಸಿ ವಿಷಯವನ್ನು ತೀರ ಗಂಭೀರವಾಗಿ ನಿರೂಪಿಸುವ ಶಾಸನಗಳು ಉಂಟು. ಅಂತಹ ಶಾಸನಕ್ಕೆ ಒಂದು ಉದಾಹರಣೆಯೆಂದರೆ ಕ್ರಿ.ಶ. ೧೦೫೧ಕ್ಕೆ ಸೇರಿದ ಒಂದು ಶಾಸನ. ಅದರ ಪಾಠ ಹೀಗಿದೆ:

ಭೂಚಕ್ರಂ ಬೆಸಕೆಯ್ಯೆ ಸನ್ದ ಮುನಿಬೃನ್ದಾಧೀಶ್ವರ
......ಕುನ್ದಾಚಾರ್ಯ್ಯರ್ಧೃತ ಧೈರ್ಯರಾರ್ಯ್ಯತೆಯಿನೆನಾಚಾ
.........ಳ್ವರ್ಯ್ಯರ್॥ ಆರಿಕೆಯ ಪೊಳಲೊಳ್ ಕೆಲ್ಲಂ
(ಗೆ) ರೆಯೊಳ್ ನೆಗಳ್ದಭಯನನ್ದಿ ಪಣ್ಡಿತ ದೇವರ್ । ಮೆ
ರ್ತ್ತರಮಂ ಶ್ರುತಮಂ ತರಿಸಲವಂ ಮಹಿಮೆಯ ಮ
ಮುನಿವರೊಳ್॥ ಆ ಮುನಿಪತಿಗಳ ಶಿಷ್ಯರಿಳಾ ಮಹಿತ
(ಹೇ)ಮಚನ್ದ್ರಸಿದ್ಧಾನ್ತಿ ಗರುದ್ಧಾಮ ಗುಣರ್ ನೆಗಳ್ದರ್ ತತ್ಸ್ವಾಮ್ಯ
(ತ)ಮಯಮೆನಿಪ ಪಂಚಸಂಗ್ರಹಕೃತಿಯ ॥ ಸಾರಂ
ಳೋಕಸಾರಂ ಸಾರತರಂ ಅಬ್ಧಿಸಾರಮೆನೆ ಕೃತಿಗಳನಾರೆ ವೀರ.....
ಳ್ದರ್ ಸಂಸಾರ ಪಯೋರಾಶಿ ತರಣ ಪರಿಣತಮತಿಗಳಂ ॥ ಬರಿ
..............................................................

.................................................................

ವತ್ಸರದ ಭಾದ್ರಪದ ಮಾಸದೊಳೆ ಕಾಳಬ್ಬೆ ಕನ್ತಿಯರು ಆ

ಶ್ವಯುಜ ಬಹುಳ ತ್ರಯೋದಸಿ ಸುಕ್ರವಾರದನ್ದು ಶ್ರೀಮ

ದಿನ್ದ್ರ ನನ್ದಿ ಪಣ್ಡಿತದೇವರುಂ ದೇವಲೋಕಕ್ಕೆ ವೋದರ್॥

ಇನ್ನೂ ಕೆಲವು ಕಡೆ ಶಾಸನಗಳು ಸರಳ ರಚನೆಯಿಂದ ಕೂಡಿದ್ದು ನೇರ ನಿರೂಪಣೆಯಿಂದ ಕೂಡಿರುತ್ತವೆ. ಕ್ರಿ.ಶ. ೧೫-೧೬ನೇ ಶತಮಾನಕ್ಕೆ ಸೇರಿದ ಸೋಮನಾಥನ ಬೆಟ್ಟದಲ್ಲಿ ದೊರೆಯುವ ಅಂಥ ಒಂದು ಶಾಸನವನ್ನು ಇಲ್ಲಿ ನೋಡಬಹುದು. ಮಲ್ಲಶೆಟ್ಟಿಯ ಹೆಂಡತಿ ವಿರುಪಕ್ಕ ಎಂಬುವಳು ಸೋಮೇಶ್ವರನ ಸೇವೆಯನ್ನು ಮಾಡಿದಳು ಎಂದಿದೆ. ಆ ಶಾಸನದ ಪಾಠ ಹೀಗಿದೆ. :

ಸೋಮೇಶ್ವರಗೆ

ಮದವಳ(ಲ)

ಮಲ್ಲಿಸೆಟಿ

ಹೆಂಡತಿ ವಿರು

ಪಾಕ್ಷಸ್ವಾಮಿ ಸೇವಿಯ

ಮಾಡಿದಳು

ಕೊಪ್ಪಳದ ಶಾಸನಗಳು ಗುಂಪುಗುಂಪಾಗಿ ಕಂಡುಬರುತ್ತವೆ. ಕೊಪ್ಪಳ ನಗರದಲ್ಲಿ, ಮಳೆಮಲ್ಲಪ್ಪನ ಗುಡ್ಡದ ಮೇಲೆ, ಗವಿಮಠದ ಗುಡ್ಡದಮೇಲೆ, ಚಂದ್ರಬಂಡೆಯ ಮೇಲೆ ಕೋಟೆಯ ಓಣಿಯಲ್ಲಿ ಶಾಸನಗಳು ಸಿಗುತ್ತವೆ. ಕೋಟೆಯ ಮೇಲೆಯೂ ಸುಮಾರು ೨೦-೨೫ ಶಾಸನಗಳು ಕಂಡುಬಂದಿವೆ. ಈ ಎಲ್ಲಾ ಶಾಸನಗಳ ಸಂಖ್ಯೆ ಸುಮಾರು ಇನ್ನೂರನ್ನು ಮಿಕ್ಕುತ್ತದೆ. ಇವುಗಳಲ್ಲಿ ಶೇಕಡಾ ೯೫ರಷ್ಟು ಜೈನ ಶಾಸನಗಳಿವೆ. ಶಾಸನಗಳು ಮೊದಲ ಮತ್ತು ಕೊನೆಯ ಪದ್ಯಗಳು ಛಂದೋಬದ್ಧವಾಗಿವೆ. ನಡುವೆ ಗದ್ಯಭಾಗವಿರುತ್ತದೆ. ಅಲ್ಲಿ ನಿರೂಪಣೆಗೆ ತಕ್ಕಂತೆ ಸಾಲುಗಳನ್ನು ತುಂಡುಮಾಡಿಕೊಳ್ಳಬಾಗಿರುತ್ತದೆ. ಕೆಲವೆಡೆ ಬಳಸಿಕೊಂಡ ಕಲ್ಲಿನ ಮೇಲೆ ಈ ಸಾಲುಗಳನ್ನು ತುಂಡರಿಸುವುದು

ಅವಲಂಬಿಸಿರುತ್ತದೆ. ಆದರೆ ಈ ಶಾಸನಗಳ ಮೇಲಿರುವ ಶ್ಲೋಕಗಳು ಮಾತ್ರ ಸಂಸ್ಕೃತದ ಛಂದೋಪ್ರಕಾರಗಳಲ್ಲಿ ಕಂಡುಬರುತ್ತವೆ ಜೊತೆಗೆ ಶಾರ್ದೂಲ ಮತ್ತು ಖ್ಯಾತ ಕರ್ನಾಟಕ ವೃತ್ತಗಳನ್ನು ಬಳಸಿಕೊಂಡ ಪದ್ಯ ಭಾಗಗಳಿವೆ. ಆದರೆ ಗದ್ಯದಲ್ಲಿ ಯಾವ ವಿಶೇಷವೂ ಕಾಣದು. ಶಾಸನಗಳಲ್ಲಿ ನವರಸಗಳ ವರ್ಣನೆಯೂ ಇದೆ. ಕರುಣ, ವೀರ, ಶೃಂಗಾರ ರಸವಿರುವ ಶಾಸನಗಳು ಸಿಕ್ಕಿವೆ. ಭಕ್ತಿ ಮತ್ತು ಶಾಂತ ರಸಗಳಿರುವ ಪ್ರತಿಮೆಗಳು ಕಂಡುಬರುತ್ತವೆ. ವ್ಯಾಕರಣದ ನಿಟ್ಟಿನಿಂದ ಅಧ್ಯಯನ ಮಾಡಿದರೆ ಕಟ್ಟುನಿಟ್ಟಾಗಿ ವ್ಯಾಕರಣವನ್ನು ಬಳಸಿದಂತೆ ಕಂಡುಬರುವುದಿಲ್ಲ. ವಿಭಕ್ತಿ ಪ್ರತ್ಯಯ ಮತ್ತು ಕ್ರಿಯಾಪದಗಳು ಹಳಗನ್ನಡ ಭಾಷೆಯನ್ನು ಪ್ರತಿನಿಧಿಸುತ್ತವೆ. ರಳ ಕುಳ ಕ್ಷಗಳ ಬಳಕೆಯೂ ಇದೆ. ೧೨ನೆಯ ಶತಮಾನದ ನಂತರ ಣ ಮತ್ತು ನ ಕ್ಕೆ ಪ್ರತಿಯಾಗಿ ಬಿಂದುವನ್ನು ಬಳಸಿರುವ ಉದಾಹರಣೆಗಳಿವೆ. ಎಣ್ಣನೂರು ಮತ್ತು ನಂದೀಂದ್ರ ಮುಂತಾದ ಕನ್ನಡ ಪದಗಳ ಬಳಕೆಯಾಗಿದೆ. ಇರ್ ಧಾತುವಿಗೆ ಪ್ರತಿಯಾಗಿ ಇಲ್ದು ಮತ್ತು ವ್ಯಂಜನಗಳನ್ನು ದ್ವಿತ್ವವಾಗಿ ಉಪಯೋಗಿಸಿರುವುದು ಕಂಡುಬರುತ್ತದೆ. ಕೊಪ್ಪಳದ ಶಾಸನಗಳಲ್ಲಿ ಸಿಕ್ಕಿರುವ ಶಾಸನವನ್ನು ಅವಲೋಕನ ಮಾಡಿದರೆ, ಅಲಂಕಾರ, ಪ್ರತಿಮೆಗಳು ಕುಪ್ಪೆಕುಪ್ಪೆಯಾಗಿ ಸಿಗುತ್ತವೆ. ಪ್ರತಿಮೆ, ರೂಪಕ, ಉಪಮಾಲಂಕಾರಗಳು ನಿರಂತರವಾಗಿ ಕಂಡುಬರುತ್ತವೆ. ಅದೇನೇ ಇದ್ದರೂ ಈ ಶಾಸನಗಳ ಸಾಹಿತ್ಯಿಕ ಆಯಾಮವನ್ನು ಕಡೆಗಣಿಸುವಂತಿಲ್ಲ. ಚರಿತ್ರೆಯನ್ನು ನಿರ್ಭಿಡೆಯಿಂದ ಅಭಿವ್ಯಕ್ತಗೊಳಿಸುವ ಈ ಶಾಸನಗಳ ಪ್ರತ್ಯೇಕ ಅಧ್ಯಯನ ನಡೆಯಬೇಕೆಂಬುದು ಈ ಸಂದರ್ಭದಲ್ಲಿ ನಮ್ಮ ಅಪೇಕ್ಷೆಯಾಗಿದೆ.

## ೮. ೨. ವೀರಗಲ್ಲುಗಳು

ಕರ್ನಾಟಕದಲ್ಲಿ ವೀರಗಲ್ಲುಗಳು ಮಹಾಸತಿಕಲ್ಲುಗಳು ಹಾಗೆಯೇ ನಿಶಿಧಿ ಕಲ್ಲುಗಳಿಗೆ ಕೊರತೆಯೇನಿಲ್ಲ. ಇದು ಕರ್ನಾಟಕ ಚರಿತ್ರೆಯ ವಿಶೇಷವೂ ಹೌದು. ಕನ್ನಡನಾಡಿನ ಜನರು ಸಾಮಾನ್ಯವಾಗಿ ಶೂರರಾಗಿದ್ದಿರಬೇಕು. ನಾಡಿನ ಇತಿಹಾಸವು ಇದಕ್ಕೆ ಸ್ಪಷ್ಟವಾದ ಸಾಕ್ಷಿಯಾಗಿದೆ. ಅದು ಆ ಕಾರಣದಿಂದಲೇ ವೀರಗಲ್ಲುಗಳನ್ನು ಕರ್ನಾಟಕದಾದ್ಯಂತ ಕಾಣುತ್ತೇವೆ. ವೀರಗಲ್ಲುಗಳ ಜೊತೆ ಮಾಸ್ತಿ

ಅಥವಾ ಮಹಾಸತಿ ಕಲ್ಲುಗಳು ಅಂದರೆ ಮೃತ್ಯುವಶನಾದ ಪತಿಯನ್ನು ಹಿಂಬಾಲಿಸಿ ಸಹಗಮನ ಮಾಡಿದ ಮಹಾಸತಿಯರ ಸ್ಮಾರಕಕ್ಕಾಗಿ ನಿಲ್ಲಿಸಿದ ಕಲ್ಲುಳಿವು. ಊರಿನ ಹಿತಕ್ಕಾಗಿಯೋ ದುಷ್ಟಶಿಕ್ಷಣಕ್ಕಾಗಿಯೋ, ಸ್ವಾಮಿನಿಷ್ಠೆಯಿಂದಲೋ ಹೋರಾಡಿ ಮಡಿದ ವೀರಪುರುಷರ ಸ್ಮಾರಕಕ್ಕಾಗಿ ರಚಿತವಾದ ಶಾಸನವನ್ನುಳ್ಳವು ವೀರಗಲ್ಲುಗಳು. ಈ ವೀರಗಲ್ಲು ಮತ್ತು ಮಾಸ್ತಿಕಲ್ಲುಗಳು ವಿಶಿಷ್ಟ ಬಗೆಯ ಸ್ಮಾರಕಗಳು. ವೀರಗಲ್ಲುಗಳಲ್ಲಿ ಕಲ್ಲಿನ ಮೇಲಿರುವ ಶಿಲ್ಪವು ಪರಾಕ್ರಮದ ಸಂಕೇತದಂತೆ ತೋರುತ್ತದೆ. ಹೋರಾಟ ನಡೆದು ಅದರಲ್ಲಿ ನಾಯಕನು ಬಿದ್ದಂತೆಯೂ ಸ್ವರ್ಗದಿಂದ ಅಪ್ಸರೆಯರು ಬಂದು ಅವನನ್ನು ವಿಮಾನದಲ್ಲಿಟ್ಟು ಕೊಂಡೊಯ್ಯುತ್ತಿರುವಂತೆಯೂ ಇರುವ ಶಿಲ್ಪದಿಂದ ವೀರಗಲ್ಲುಗಳು ಅಲಂಕೃತವಾಗಿರುತ್ತವೆ. ಅನಂತರ ಅದರ ಕೆಳಗೆ ಶಾಸನವಿರುತ್ತದೆ. ಇದು ಸಾಮಾನ್ಯವಾಗಿ ವೀರಗಲ್ಲುಗಳ ಸಾಮಾನ್ಯರೂಪ. ಸಾಮಾನ್ಯ ಗದ್ಯದ ನೇರ ನಿರೂಪಣೆಯಲ್ಲಿರುವ ವೀರಗಲ್ಲುಗಳೇ ಹೆಚ್ಚು. ಇವುಗಳಲ್ಲಿ ಸಾಮಂತ ರಾಜನ ಅಥವಾ ಚಕ್ರವರ್ತಿಯ ನಾಮನಿರ್ದೇಶನ ಮತ್ತು ಶಾಸನ ರಚಿತವಾದ ಕಾಲ ಮೊದಲು ಬರುತ್ತದೆ. ಅನಂತರ ವೀರಗಲ್ಲಿನ ನಾಯಕ ಎದುರಿಸಬೇಕಾಗಿ ಬಂದ ಹೋರಾಟದ ಸ್ವರೂಪವನ್ನು ಮತ್ತು ಅವನು ಅದನ್ನು ಎದುರಿಸಿ ಸುರಲೋಕ ಪ್ರಾಪ್ತವಾದ ಬಗ್ಗೆ ನಿರೂಪಣೆ ಇರುತ್ತದೆ.

ಜಿತೇನ ಲಭ್ಯತೇ ಲಕ್ಷ್ಮೀಃ ಮೃತೇನಾಪಿ ಸುರಾಂಗನಾ
ಕ್ಷಣ ವಿಧ್ವಂಸಿನಿ ಕಾಯೇ ಕಾ ಚಿಂತಾ ಮರಣೇ ರಣೇ

ಎನ್ನುವ ಶ್ಲೋಕದಿಂದ ಈ ವೀರಗಲ್ಲುಗಳು ಮುಕ್ತಾಯವಾಗುತ್ತವೆ. ಜಯಶಾಲಿಯಾದರೆ ಲಕ್ಷ್ಮಿಯು ಲಭಿಸುತ್ತಾಳೆ. ಮೃತನಾದರೆ ಸುರಾಂಗನೆಯರು ನಿಮಿಷದಲ್ಲಿ ಅಳಿಯುವ ಈ ದೇಹಕ್ಕೆ ಕಾಳಗದಲ್ಲಿ ಅಳಿದನೆಂಬ ಕೊರಗೇಕೆ ಎನ್ನುವ ಈ ಮಂತ್ರವು ಕನ್ನಡ ನಾಡಿನ ವೀರರ ಮಂತ್ರವಾಗಿತ್ತು. ಅಂತಹ ವೀರರ ಮರಣವನ್ನು ಈ ವೀರಗಲ್ಲುಗಳು ಘೋಷಿಸುತ್ತವೆ. ಕೊಪ್ಪಳದಲ್ಲಿ ನಾಲ್ಕು ವೀರಗಲ್ಲುಗಳು ಲಭ್ಯವಾಗಿವೆ. ಅವುಗಳಲ್ಲಿ ಮಿಟ್ಟಿಕೇರಿಯಿಂದ ಸಿರಸಪ್ಪಯ್ಯನ ಮಠಕ್ಕೆ ಹೋಗುವ ಕವಲುದಾರಿಯಲ್ಲಿ ಅಗಳದ ಬಲಬದಿಯಲ್ಲಿರುವ ಸುಮಾರು ೭೫ ಸೆಂಟಿಮೀಟರ್‌ನಿಂದ ೯೦ ಸೆಂಟಿಮೀಟರ್ ಉದ್ದಗಲವಿರುವ ಒಂದು ವೀರಗಲ್ಲು ಸಿಗುತ್ತದೆ. ಚಿತ್ರದಲ್ಲಿ ವೀರಗಚ್ಚೆ ಹಾಕಿದ

ಎಡಗೈಯಲ್ಲಿ ಢಾಲು ಹಿಡಿದ, ತಲೆಗೆ ಉಕ್ಕಿನ ಶಿರಸ್ತ್ರಾಣ ಧರಿಸಿದ ವೀರಮಾತೆ ತನ್ನ ಬಲಗೈಯಲ್ಲಿರುವ ಕತ್ತಿಯಿಂದ ವೀರಗಾಸೆ ಹಾಕಿದ ಎತ್ತಿದ ಬಲಗೈಯಲ್ಲಿ ಕತ್ತಿಯನ್ನು ಹಿಡಿದ, ಎಡಗೈಯಲ್ಲಿ ಢಾಲು ಹಿಡಿದು ವೀರಪುರುಷನ ಎಡಭುಜಕ್ಕೆ ತಿವಿದು ಸೋಲಿನಂಚಿಗೆ ದೂಡಿದ ವೀರಮಾತೆಯ ಸಾಹಸ ಚಿತ್ರಣವಿದೆ. ವೀರಪುರುಷನು ವೀರಮಾತೆಯ ಯುದ್ಧದ ಚತುರತೆಗೆ ಮೆಚ್ಚಿ ಧರ್ಮಯುದ್ಧ ನೆನೆದು ಯುದ್ಧ ಮುಂದುವರಿಸದೇ ನಿಂತಿರುವನು. ಎರಡನೆಯ ವೀರಗಲ್ಲು ಗಂಗಮ್ಮನ ಕಟ್ಟೆಯ ಮೇಲಿದೆ. ಈ ವೀರಗಲ್ಲು ೮೬ - ೫೬ ಸೆಂಟಿಮೀಟರ್‌ಗಳ ಉದ್ದಗಲವಿದೆ. ಕುದುರೆಯ ಮೇಲೆ ಕುಳಿತು ಕಾದು ಜಯಗಳಿಸಿರುವಳು ಇವಳು. ಚೌರಿಯಂತಿರುವ ಬಾಲವನ್ನೆತ್ತಿ ಕೊಂಕಿಸಿದ ಉಬ್ಬಿದೆದೆಯ ಕೊಬ್ಬಿದ ಕುದುರೆಯ ಮೇಲೆ ಕುಳಿತು ಸುಂದರ ಜೀನಿನ ಮೇಲೆ ಪಾದಗಳನ್ನಿಟ್ಟು ಈ ವೀರಮಾತೆ ಎಡಗೈಯಿಂದ ಲಗಾಮನ್ನು ಬಿಗಿಹಿಡಿದು ಮೇಲೇರಿ ಬಂದ ವೀರಯೋಧನನ್ನು ವೀರಮಾತೆ ಬಲಗೈಯಲ್ಲಿನ ಕತ್ತಿಯಿಂದ ತಿವಿದು ಕೆಳಗುರುಳಿಸಿರುವಳು. ಕುದುರೆ ಈ ವೀರನನ್ನು ಮತ್ತೆ ಮೇಲೆದ್ದು ಬರದಂತೆ ಹಿಂಗಾಲು ನೆಲಕ್ಕೂರಿ ನೆಗೆದು ಮುಂಗಾಲುಗಳ ಗೊರಸುಗಳಿಂದ ನೆಲಕ್ಕೆ ಹತ್ತಿಕ್ಕಿದೆ. ವೀರಯೋಧನು ಹಿಡಿದ ಕತ್ತಿ ಅಲ್ಲೇ ನಿಂತಿದೆ. ಸಾವಿನೊಡನೆ ವೀರನು ಸೆಣಸಾಡುತ್ತಿರುವನು. ಮಾತೆಯು ವೀರಾವೇಶದಿಂದ ತುಂಬಿರುವಂತೆ ಕುದುರೆಯೂ ವೀರಾವೇಶವನ್ನು ಹೊಂದಿದೆ. ಮತ್ತೊಂದು ವೀರಗಲ್ಲು ಶಿರಸಪ್ಪಯ್ಯನ ಕೆರೆಯ ಪೂರ್ವದ ದಡದಲ್ಲಿ ಹುಣಸೆ ಮರದ ಅಡಿಯಲ್ಲಿ ೭೫-೭೬ ಸೆಂಟಿಮೀಟರ್ ಉದ್ದಗಲವುಳ್ಳದ್ದಾಗಿದೆ. ಅದಲ್ಲದೆ ಮತ್ತೊಂದು ವೀರಗಲ್ಲು ಅದಕ್ಕೆ ನೂರು ಮೀಟರ್ ಅಂತರದಲ್ಲಿದೆ. ಈ ವೀರಗಲ್ಲುಗಳನ್ನು ನೋಡಿದಾಗ ವೀರಸ್ತ್ರೀಯು ಯೋಧನೊಂದಿಗೆ ಹೋರಾಡಿ ತನ್ನ ಸ್ವಾಮಿನಿಷ್ಠೆಯನ್ನು ಮೆರೆದಿರುವುದು ಕಂಡುಬರುತ್ತದೆ. ಈ ವೀರಗಲ್ಲುಗಳ ಕೆಳಗಿರಬೇಕಾದ ಶಾಸನಗಳು ತ್ರುಟಿತವಾಗಿದ್ದು ಅವುಗಳ ಬಗೆಗೆ ಮಾಹಿತಿ ಸಿಗುತ್ತಿಲ್ಲ.

## ೮.೩. ನಿಶಿಧಿ ಕಲ್ಲುಗಳು

ನಿಶಿಧಿ ಕಲ್ಲುಗಳು ಕೊಪ್ಪಳದಲ್ಲಿ ಜೈನಧರ್ಮದ ಪ್ರತೀಕವಾಗಿ ಹೆಚ್ಚಿನ ಪ್ರಮಾಣದಲ್ಲಿ ದೊರೆಯುತ್ತವೆ. ಶ್ರವಣಬೆಳಗೊಳದಲ್ಲಿ ದೊರೆತ ನಿಶಿಧಿಕಲ್ಲುಗಳನ್ನು ಹೋಲುವ ಈ ಶಾಸನಗಳು ಕೊಪ್ಪಳದಲ್ಲಿಯೂ ಸಿಗುತ್ತವೆ. ಗಂಗರ ಚರಿತ್ರೆಗೆ ಈ ನಿಶಿಧಿಕಲ್ಲುಗಳು ಸಮಗ್ರ ಆಧಾರಗಳನ್ನು ಒದಗಿಸುತ್ತವೆ. ನಿಶಿಧಿ ಕಲ್ಲುಗಳು ಇನ್ನೊಂದು ಅರ್ಥದಲ್ಲಿ ಮರಣ ಶಾಸನಗಳು. ಜೈನರಲ್ಲಿ ಸಲ್ಲೇಖನ ವ್ರತವನ್ನು ಅನುಸರಿಸಿ ಸ್ವರ್ಗಕ್ಕೆ ಹೋಗುವ ವಿವರಗಳನ್ನು ಇವು ಒದಗಿಸಿಕೊಡುತ್ತವೆ. ಕೊಪ್ಪಳದಲ್ಲಿ ಗಂಗರ ಸಂಬಂಧಿಯಾದ ನಿಶಿಧಿಗಲ್ಲುಗಳು ದೊರೆತಿವೆ. ಗಂಗರ ರಾಜಮಲ್ಲ, ಅರುಮಳಿದೇವ, ಮಾರಸಿಂಹ, ಲೋಕಾದಿತ್ಯ, ಪದ್ಮಬ್ಬೆ, ಕುಂದಣಸ್ವಾಮಿ, ರೇವಕನಿಮ್ಮಡಿ, ಚಂಗಾಂಬೆ, ಬಿಜ್ಜಾಂಬ ಮೊದಲಾದವರೆಲ್ಲಾ ಇಲ್ಲಿ ಮಡಿದ ಧಾರ್ಮಿಕ ವಿಧಿಯಿಂದ ಸಲ್ಲೇಖನ ವ್ರತದಿಂದ ಉಪವಾಸ ಕೈಗೊಂಡು ನಿರ್ವಾಣ ಹೊಂದಿದವರ ಬಗೆಗೆ ನಿಶಿಧಿ ಕಲ್ಲುಗಳು ಇಲ್ಲಿ ದೊರೆಯುತ್ತವೆ.

ಏಕಶಿಲಾ ನಿರ್ಮಿತ ಸಂಕ್ಷಿಪ್ತ ದೇವಾಲಯ, ಪುಟ್ಟ ಜಿನಾಲಯ ಸಮುಚ್ಚಯ, ಜಿನಗೃಹಶ್ರೇಣಿ ಎಂಬಂತೆ ತಕ್ಷಣಕ್ಕೆ ದೂರದಿಂದ ಕಾಣುಬಂತೆ ಈ ನಿಶಿಧಿ ಕಲ್ಲುಗಳು ಕಾಣಿಸುತ್ತವೆ. ಕೊಪ್ಪಳದಲ್ಲಿ ಸಿಕ್ಕ ಕೆಲವು ನಿಶಿಧಿ ಕಲ್ಲುಗಳು ರಾಷ್ಟ್ರಕೂಟರ ಕಾಲದ ವಾಸ್ತು ಮಾದರಿಯನ್ನು ಗರ್ಭೀಕರಿಸಿಕೊಂಡಿವೆ. ಶಾಸನಾರಂಭದಲ್ಲಿ ಸಾಮಾನ್ಯವಾಗಿ ನಿಶಿಧಿಕಲ್ಲುಗಳಲ್ಲಿ ಒಂದಾದರೂ ಪ್ರಾರ್ಥನಾ ಪದ್ಯ ಬಳಕೆಯಾಗುವುದು ವಾಡಿಕೆ. ಅದರಂತೆ ಕೊಪ್ಪಳದ ಕೆಲವು ಶಾಸನಗಳಲ್ಲಿ ಪ್ರಾರ್ಥನಾ ಪದ್ಯಗಳು ಕಂಡುಬರುತ್ತವೆ. ಪ್ರಾರ್ಥನಾ ಪದ್ಯವಿಲ್ಲದ ಶಾಸನಗಳೂ ಇವೆ. ನಿಶಿಧಿ ಕಲ್ಲುಗಳಲ್ಲಿ ಪ್ರಾರಂಭದಲ್ಲಿ ಪ್ರಾರ್ಥನಾಪದ್ಯ ಬಳಸಬಾರದೆಂಬ ನಿಯಮವೇನೂ ಇಲ್ಲ. ಈ ಶಾಸನಗಳು ಇಂದ್ರಿಯ ನಿಗ್ರಹಿಸಿದ ಆಧ್ಯಾತ್ಮಿಕ ಸಾಧನೆಯ ಆತ್ಮಗೀತೆಗಳಾಗಿವೆ. ಹೊರಗಿನವರೊಂದಿಗೆ ಮಾಡಿದ ಹೋರಾಟವಿರದಿದ್ದರೂ ಒಳಗಿನ ಹಗೆಗಳೊಂದಿಗೆ ಕೈಕೊಂಡ ಹೋರಾಟ ಅನುರಣನವಾಗಿದೆ. ವಿವಾಹ, ಶೃಂಗಾರ ವಿರಹ, ಪುತ್ರೋತ್ಸವ ಮುಂತಾದ ಇತರ ಲೌಕಿಕ ವಿಷಯುಗಳ ಸಾಮಗ್ರಿಗಳು ಈ

ಶಾಸನಗಳಲ್ಲಿರುವುದಿಲ್ಲ. ಇಲ್ಲಿರುವುದು ಜೀವ ಹೋಗುವ ಹೆಜ್ಜೆ ಗುರುತುಗಳು. ದೀಪದ ಕುಡಿ ಆರುವ ಕ್ರಿಯೆ. ಇವು ಸಲ್ಲೇಖನಧಾರಿಗಳ ಹಂಸಗೀತೆ. ಕೊಪ್ಪಳವು ಜೈನರಿಗೆ ಆದಿತೀರ್ಥವೂ, ಮಹಾತೀರ್ಥವೂ ಆಗಿದ್ದುದರಿಂದ ಜಿನಮುನಿಗಳು ತಂಡೋಪತಂಡವಾಗಿ ಆಗಮಿಸಿ ಬಿಡಾರ ಮಾಡುತ್ತಿದ್ದರು. ಕೆಲವರಂತೂ ಮುಡಿಪುವುದಕ್ಕಾಗಿಯೇ ಇಲ್ಲಿಗೆ ಬರುತ್ತಿದ್ದರು. ಏಕೆಂದರೆ ಕೊಪ್ಪಳ ತೀರ್ಥದಲ್ಲಿ ಮರಣವೂ ಮಹಾನವಮಿಯಾಗಿತ್ತು. ವಿದ್ವಾಂಸರು ಹಲವು ನಿಶಿಧಿಕಲ್ಲುಗಳನ್ನು ಗುರುತಿಸಿದ್ದಾರೆ. ಡಾ. ಹಂಪಾನಾಗರಾಜಯ್ಯನವರು ಈ ವಿಷಯಗಳನ್ನು ಪ್ರಸ್ತಾಪಿಸುತ್ತಾ ಹಲವು ಹೊಸ ನಿಶಿಧಿ ಕಲ್ಲುಗಳನ್ನು ಪತ್ತೆ ಹಚ್ಚಿದ್ದಾರೆ. ಅವುಗಳಲ್ಲಿ ಜೈನಮುನಿಗಳ ಹೆಸರುಗಳು ಹೆಚ್ಚಾಗಿ ಕಂಡುಬರುತ್ತವೆ. ಇವರಲ್ಲದೆ ಗಂಗರ ಅರಸು ಮನೆತನದ ಮಹಾರಾಜರು ಮತ್ತು ರಾಣಿಯರು ಇಲ್ಲಿ ಬಂದು ಮುಡಿಪಿದ ಬಗೆಗೆ ಹಲವು ಆಧಾರಗಳು ಸಿಗುತ್ತವೆ. ಗಂಗರಾಜನ ಪತ್ನಿ ಪೊಲೆಯಬ್ಬೆಯ ಮಗಳು ಎರೆಯಬ್ಬೆ ಮುಕುಟ ಚೂಡಾಮಣಿಗಿಂತ ಚಿಕ್ಕವಳಾದ ಚಿಂದಬ್ಬರಸಿ ಗಂಗಬೂತುಗನ ಪತ್ನಿ ಪದ್ಮಬ್ಬರಸಿ ಬಂದು ಪ್ರಾಣತ್ಯಾಗ ಮಾಡಿದ ವಿವರಗಳು ಸಿಗುತ್ತವೆ. ಗಂಗಬೂತುಗ ಮತ್ತು ಅವನ ಪತ್ನಿ ಪದ್ಮಾವತಿಯ ಮಗಳು ಎರೆಗಂಗನ ಅಕ್ಕ ಮಲ್ಲಪ್ಪನ ಪತ್ನಿಯಾದ ಬಿಜ್ಜಬ್ಬರಸಿ ಆರಾಧನಾ ವಿಧಿಯಿಂದ ಮಡಿದಿರುವ ಶಾಸನವು ಕೊಪ್ಪಳದಲ್ಲಿ ಸಿಗುತ್ತದೆ. ಇಮ್ಮಡಿ ಜಯಸಿಂಹನ ಪತ್ನಿ ಬೋಂತಾದೇವಿಯು ತಾಯಿ ರೇವಕ್ಕ ನಿಮ್ಮಡಿ ಸತ್ತ ಉಲ್ಲೇಖವಿದೆ. ಏನೇ ಆದರೂ ನಿಶಿಧಿಕಲ್ಲುಗಳು ಚರಿತ್ರೆಯ ಮೇಲೆ ತುಂಬಾ ಹೊಸದಾದ ಮಾಹಿತಿಗಳನ್ನು ಕೊಡುತ್ತವೆ. ನಿಶಿಧಿಕಲ್ಲುಗಳನ್ನು ಶಾಸನದ ಜೊತೆಜೊತೆಗೆ ಇಟ್ಟು ಅವುಗಳ ಸಾಂಸ್ಕೃತಿಕ ಆಯಾಮಗಳನ್ನು ಗುರುತಿಸುವ ಪ್ರಯತ್ನಗಳು ನಡೆಯಬೇಕಾಗಿದೆ.

## ಅಧ್ಯಾಯ ೬

# ಸಮಾರೋಪ

ಕೊಪ್ಪಳದ ಸಂಸ್ಕೃತಿಯ ವಿವಿಧ ಮುಖಗಳನ್ನು ನೋಡಿದೆವು. ಆದರೆ ಇದು ಕೊಪ್ಪಳದ ಬಗೆಗಿನ ಸಮಗ್ರ ಅಧ್ಯಯನವಲ್ಲ. ಏಕೆಂದರೆ ಪ್ರಾರಂಭದಲ್ಲಿಯೇ ಹೇಳಿದಂತೆ ಸಂಸ್ಕೃತಿ ಎಂಬುದು ವಿರಾಡ್ರೂಪಿಯಾದ ಒಂದು ಶಕ್ತಿ. ಅದರ ಎಲ್ಲ ಅಂಶಗಳನ್ನು ಇಂಥ ಒಂದು ಪರಿಮಿತ ಪ್ರಯತ್ನದಲ್ಲಿ ಸಮಗ್ರವಾಗಿ ಹಿಡಿದು ನಿಲ್ಲಿಸುವುದು ಒಂದುಸಾಹಸವೇ ಸರಿ. ಅದರಲ್ಲಿಯೂ ಸಾವಿರಾರು ವರ್ಷಗಳಿಂದ ಬಾಳಿ ಬದುಕಿನಲ್ಲಿ ಬಿಳಲು ಬಿಟ್ಟು ವಿಸ್ತಾರವಾಗಿ ಬೆಳೆದು ನೆರಳನ್ನೀಯುತ್ತಾ ಸಾರ್ಥಕಮಾರ್ಗದಲ್ಲೇ ನಡೆದಿರುವ ಕೊಪ್ಪಳ ಜನಪದದ ಜೀವಂತ ಸಂಸ್ಕೃತಿಯನ್ನು ಸಂಪೂರ್ಣವಾಗಿ ವಿವೇಚಿಸಿ ಕೊನೆಮುಟ್ಟಿಸುವುದು ಸಾಧ್ಯವಿಲ್ಲದ ಕೆಲಸ. ಏಕೆಂದರೆ ಕೊಪ್ಪಳ ಸಂಸ್ಕೃತಿ ಅಂಥ ಒಂದು ಸನಾತನ ವೃಕ್ಷ. ಕಾಲದಿಂದ ಮತ್ತು ಸತ್ವದಿಂದ ಅದು ಸನಾತನ. ಆದರೆ ಅದರ ಚೇತನ ನಿತ್ಯನೂತನ. ಇಂದು ಹೊಸ

ಹೊಸ ಬಿಳಲುಗಳು ಬೇರೂರಿ ಬೆಳೆಯುತ್ತಿವೆ. ನಿರಂತರವಾಗಿ ಬೆಳೆದು ಬಂದ ಪರಂಪರೆಯಿಂದ ಈ ಬಿಳಲುಗಳು ಪೋಷಿತವಾಗುತ್ತವೆ. ಇದುವರೆಗಿನ ಸಮೀಕ್ಷೆ ಈ ಪರಂಪರೆಯನ್ನು ಚಿತ್ರಿಸುವ ಒಂದು ಸಣ್ಣ ಪ್ರಯತ್ನ ಮಾತ್ರ.

ಸಂಸ್ಕೃತಿಯು ವ್ಯಕ್ತಗೊಳ್ಳುವ ಪ್ರಧಾನವಾದ ಮಾಧ್ಯಮಗಳನ್ನು ಅದಕ್ಕೆ ಹಿನ್ನೆಲೆಯಾದ ಜೀವನ ದೃಷ್ಟಿಯನ್ನು ಮತ್ತು ಆ ಜೀವನ ದೃಷ್ಟಿಗೆ ಪೋಷಕವಾದ ಭಾರತೀಯ ಮತ್ತು ಕರ್ನಾಟಕ ಸಂಸ್ಕೃತಿಯನ್ನು ಅಖಂಡವಾಗಿ ವಿವೇಚಿಸಲಾದ ನೆರವನ್ನು ಪಡೆದುಕೊಂಡು ಕೊಪ್ಪಳದ ಸಂಸ್ಕೃತಿಯನ್ನು ಅಧ್ಯಯನ ಮಾಡಲಾಗಿದೆ. ನಿಜವಾಗಿ ನೋಡಿದರೆ ಕೊಪ್ಪಳದ ಸಂಸ್ಕೃತಿಯು ಭಾರತೀಯ ಅಥವಾ ಕರ್ನಾಟಕ ಸಂಸ್ಕೃತಿಗಿಂತ ಭಿನ್ನವಾದುದೇನೂ ಅಲ್ಲ. ಭರತಖಂಡದ ಅಥವಾ ಅಖಂಡ ಕರ್ನಾಟಕದ ಅವಿಭಾಜ್ಯ ಅಂಗವಾಗಿರುವ ಕೊಪ್ಪಳ ತನ್ನ ಆಶಯ- ಆಶೋತ್ತರಗಳಲ್ಲಿ ತನ್ನ ಸಾಧನೆಯ ಮಾರ್ಗಗಳಲ್ಲಿ ಅನುಭವದ ಅಭಿವ್ಯಕ್ತಿಯ ಮಾಧ್ಯಮವನ್ನು ರೂಪಿಸಿಕೊಳ್ಳುವ ಕಲಾಪರಂಪರೆಯಲ್ಲಿ ಭಾರತೀಯ ಮನೋಧರ್ಮವನ್ನೇ ಅದು ಅನುಸರಿಸಿದೆ. ಆದರೆ ಅದರ ಪ್ರಾದೇಶಿಕ ವೈವಿಧ್ಯಕ್ಕೆ ತನ್ನದೇ ಆದ ವಿಶಿಷ್ಟ ರೂಪವನ್ನಿತ್ತು ಅದರ ಶ್ರೀಮಂತಿಕೆಗೆ ಕಾರಣವಾಯಿತು ಎಂಬುದನ್ನು ಈ ವಿವೇಚನೆಯಿಂದ ಕಂಡುಕೊಂಡಿದ್ದೇವೆ.

ಕರ್ನಾಟಕವನ್ನಾಳಿದ ವಿವಿಧ ರಾಜವಂಶಗಳು ಈ ಪ್ರದೇಶಕ್ಕೆ ಬಂದ ಮತ್ತು ಇಲ್ಲಿಯೇ ಹುಟ್ಟಿ ಬೆಳೆದ ಧಾರ್ಮಿಕ ಪಂಥಗಳು ಕೊಪ್ಪಳ ಜನಪದದಲ್ಲಿ ಅವು ರೂಪಿಸಿದ ಕಲಾಭಿವ್ಯಕ್ತಿಗಳು ಇವೆಲ್ಲವುಗಳನ್ನು ಕೊಪ್ಪಳದ ವೈಶಿಷ್ಟ್ಯಗಳನ್ನು ಗುರುತಿಸುವಲ್ಲಿ ನೆರವಾಗುತ್ತವೆ. ಮುಖ್ಯವಾಗಿ ಇಲ್ಲಿ ಕಾಣುವುದು ಒಂದು ಸಮನ್ವಯ ಮತ್ತು ಸಾಮರಸ್ಯ ದೃಷ್ಟಿ. ಕರ್ನಾಟಕ ಸಂಸ್ಕೃತಿಯ ಎಲ್ಲ ಅಂಶಗಳನ್ನು ಕೊಪ್ಪಳವು ಸಂಪೂರ್ಣವಾಗಿ ಅರಗಿಸಿಕೊಂಡಿರುವುದು ಅದರ ಚಲನವಲನದ ಒಂದೊಂದು ಅಂಶದಲ್ಲೂ ಕಂಡುಕೊಳ್ಳಬಹುದು.

ರಾಜಕೀಯ ಚರಿತ್ರೆಯನ್ನು ನೋಡಿದರೆ ಮೌರ್ಯರು ಅಥವಾ ಅವರಿಗಿಂತ ಹಿಂದಿನ ಪ್ರಾಗೈತಿಹಾಸಿಕ ಕಾಲಘಟ್ಟದ ರಾಜಕೀಯ ವ್ಯವಸ್ಥೆಗಳಿಂದ ಹಿಡಿದು ಸ್ವಾತಂತ್ರ್ಯಾನಂತರದ ಕರ್ನಾಟಕ ಸರ್ಕಾರದ ಆಡಳಿತದವರೆಗೂ ಕೊಪ್ಪಳವನ್ನು ವಿಶೇಷ ಕೇಂದ್ರವನ್ನಾಗಿ ಮಾರ್ಪಡಿಸಲಾಗಿದೆ. ಇದಕ್ಕಾಗಿ ಎಲ್ಲಾ ರಾಜಮನೆತನಗಳು ಶ್ರಮಿಸಿವೆ. ಸಮನ್ವಯ ಮತ್ತು ಸಾಮರಸ್ಯ ಭಾವನೆಯನ್ನು ಎಲ್ಲ ಅರಸುಮನೆತನಗಳು ರೂಢಿಸಿಕೊಂಡಿವೆ. ರಾಜರ ವೈಯಕ್ತಿಕ ಒಲವನ್ನು ಅವಲಂಬಿಸಿ ಒಂದೊಂದು ಕಾಲಕ್ಕೆ ಒಂದೊಂದು ಧರ್ಮಕ್ಕೆ ಹೆಚ್ಚು ಪ್ರೋತ್ಸಾಹ ಸಿಕ್ಕ ಒಂದು ಕೇಂದ್ರ ಪರಿಸರದ ನಿರ್ಮಾಣ ಕೊಪ್ಪಳವೇ ಆಗಿದೆ. ಒಂದೇ ವಂಶದಲ್ಲಿಯೂ ಒಬ್ಬೊಬ್ಬ ರಾಜರ ಒಂದೊಂದು ಧರ್ಮಕ್ಕೆ ಕೊಪ್ಪಳವನ್ನು ಕೇಂದ್ರವನ್ನಾಗಿ ಮಾಡಿದ್ದಾರೆ. ರಾಜಕೀಯ ಚರಿತ್ರೆಯಲ್ಲಿ ಉದ್ದಕ್ಕೂ ಕಾಣುವ ಒಂದು ಪ್ರಧಾನ ಅಂಶವೆಂದರೆ ಯುದ್ಧಗಳು. ಈ ಯುದ್ಧಗಳು ಕೊಪ್ಪಳ ಪ್ರದೇಶದಲ್ಲಿ ತೀರ ವಿರಳವಾಗಿ ಜರುಗಿರುವುದು ಕೊಪ್ಪಳದ ವಿಶೇಷವೆನ್ನಬಹುದು. ಕರ್ನಾಟಕದ ರಾಜರ ಪರಾಕ್ರಮ ಪಾಶವೀವೃತ್ತಿಯಿಂದ ಪ್ರೇರಿತವಾಗಿರಲಿಲ್ಲ. ಅವರೆಲ್ಲರೂ ಧರ್ಮವಿಜಯಿಗಳಾಗಿದ್ದರು. ಶತ್ರುಗಳೊಂದಿಗೆ ಹೋರಾಡುತ್ತಿರುವಾಗಲೂ ಉದಾತ್ತ ಆದರ್ಶ ಅವರ ಕಣ್ಣ ಮುಂದಿರುತ್ತಿತ್ತು. ಈ ಎಲ್ಲ ಅಂಶಗಳನ್ನು ಕನ್ನಡದ ರಾಜಕೀಯ ಅರಸುಮನೆತನಗಳ ಶೌರ್ಯ ಸಾಹಸ, ಪರಾಕ್ರಮಗಳನ್ನು ಕೊಪ್ಪಳದ ಶಾಸನಗಳು ಬಿಂಬಿಸುತ್ತವೆ. ಪ್ರಾಚೀನ ರಾಜ್ಯಪದ್ಧತಿಯಲ್ಲಿ ರಾಜವಂಶದ ಶಕ್ತಿ, ನಾಡಿನ ಆಗುಹೋಗುಗಳಲ್ಲಿ ಪ್ರಮುಖ ಪಾತ್ರ ವಹಿಸುತ್ತಿತ್ತು. ನಾಡಿನ ರಾಜಕೀಯ ಚರಿತ್ರೆಯೆಂದರೆ ಎಲ್ಲ ಜನಜೀವನದ ಒಂದು ಅವಿಭಾಜ್ಯ ಅಂಗವಾಗಿತ್ತು. ಜನಪದವು ಜೀವನದ ಅಂತರಂಗವನ್ನು ಆವರಿಸಿದ್ದುದು ರಾಜ್ಯಶಕ್ತಿಯಲ್ಲ; ಅದು ಧರ್ಮಶಕ್ತಿ. ರಾಜರು ಸಹ ಇದಕ್ಕೆ ಅಧೀನರಾಗಿ ನಡೆಯುತ್ತಿದ್ದರು. ಆಡಳಿತ ಕ್ರಮವನ್ನು ಆರ್ಥಿಕ ರೀತಿನೀತಿಗಳನ್ನು ರೂಪಿಸುವುದರಲ್ಲಿ ಸಹ ರಾಜನಿಗೆ ಧರ್ಮಶಾಸ್ತ್ರಗಳೇ ಮಾರ್ಗದರ್ಶಕಗಳಾಗಿರುತ್ತಿದ್ದವು. ರಾಜ್ಯಶಕ್ತಿ ಧರ್ಮಶಕ್ತಿಗೆ ಅಧೀನವಾಗಿ ನಡೆದಿರುವುದು ಕೊಪ್ಪಳದ ಶಾಸನಗಳಿಂದ ತಿಳಿದುಬರುತ್ತದೆ. ಸಮಷ್ಟಿ ಜೀವನದ ಒಳಿತು ಕೆಡುಕುಗಳನ್ನೆಲ್ಲಾ ಕನ್ನಡಿಯಲ್ಲಿ ಹಿಡಿದಿರುವ ಹಾಗೆ ಜನಜೀವನ ಸಂಸ್ಕೃತಿಯ ಸ್ವರೂಪವನ್ನು ತಿಳಿಯುವುದಕ್ಕೆ ಶಾಸನಗಳು ಅಮೂಲ್ಯ

ಆಧಾರಗಳಾಗಿ ಪರಿಣಮಿಸಿವೆ. ಧರ್ಮ ಮತ್ತು ವೀರ ಜೀವನಗಳು ಹೇಗೆ ಅವುಗಳಿಗೆ ಪ್ರಮುಖವಾದ ಪ್ರಚೋದಕ ಶಕ್ತಿಗಳಾಗಿ ಪರಿಣಮಿಸಿದೆ ಎಂಬುದನ್ನು ಈ ಅಧ್ಯಯನದಲ್ಲಿ ಕಂಡುಕೊಂಡಿದ್ದೇವೆ. ಕೊಪ್ಪಳದಲ್ಲಿ ವೀರಜೀವನವೂ ಅಂತ್ಯದಲ್ಲಿ ಧರ್ಮಪರ್ಯವಸಾನವಾಗಿರುತ್ತಿತ್ತು. ಊರಿನ ಮತ್ತು ನಾಡಿನ ರಕ್ಷಣೆಗೆ ಕೆಡುಕಿನ ನಾಶಕ್ಕೆ, ಒಳಿತಿನ ಸಂವರ್ಧನೆಗೆ ಕೊಪ್ಪಳದ ನಾಡಿನ ವೀರರು ತಮ್ಮನ್ನು ಅರ್ಪಿಸಿಕೊಳ್ಳುತ್ತಿದ್ದರು. ಧರ್ಮವೀರತ್ವವನ್ನು ಸಾರುವ ಇಲ್ಲಿಯ ವೀರಗಲ್ಲುಗಳು ತೋರಿಸಿಕೊಡುತ್ತವೆ. ನಿಶಿಧಿಕಲ್ಲುಗಳಂತೂ ಕರ್ನಾಟಕ ಶಾಸನಸಂಪತ್ತಿನ ವೈಶಿಷ್ಟ್ಯವನ್ನು ತೋರಿಸುತ್ತವೆ. ದಾನಶಾಸನ, ದತ್ತಿಶಾಸನ ಮೊದಲಾದವುಗಳನ್ನು ನೋಡಿದಾಗ ಕೊಪ್ಪಳದ ಧಾರ್ಮಿಕ ಜೀವನದ ವಿವಿಧ ಮುಖಗಳ ಪರಿಚಯ ಈ ಅಧ್ಯಯನದಿಂದ ನಮಗೆ ಆಗುತ್ತದೆ. ರಾಜರು ಸಾಮಂತರು, ಅಧಿಕಾರಿಗಳು, ರಾಣಿಯರು ಮುನಿಗಳು ಮಾತ್ರವಲ್ಲದೆ ಸಾಮಾನ್ಯ ಕೆಲಸಗಾರರು ಸೇವಕರು ಕೂಡ ದಾನವಿತ್ತು ಶಾಸನಸ್ತರಾಗಿರುವುದು ಕೊಪ್ಪಳದ ಶಾಸನಗಳಲ್ಲಿ ಕಂಡುಬರುವ ವಿಶೇಷ ಅಂಶ. ಧರ್ಮಸಮನ್ವಯವನ್ನು ಶಾಸನಗಳು ಸಾರಿ ಹೇಳುತ್ತವೆ.

ಕೊಪ್ಪಳದಲ್ಲಿ ಧರ್ಮ ಮತ್ತು ರಾಜಕೀಯ ಚರಿತ್ರೆ ಈ ಎರಡು ಒಂದನ್ನೊಂದು ಅವಲಂಬಿಸಿ ಬೆಳೆದುಬಂದಿರುವುದು ಗೊತ್ತಾಗುತ್ತದೆ. ಕೊಪ್ಪಳವು ಯಾವ ಸಂದರ್ಭದಲ್ಲೋ ಯಾರಿಗೋ ರಾಜಧಾನಿಯಾಗಿಲ್ಲ. ಆದರೆ ರಾಜಧಾನಿಗಿಂತ ಮಹತ್ವದ ಸ್ಥಾನವನ್ನು ಅದು ಪಡೆದುಕೊಂಡಿದೆ. ಅಗ್ರಹಾರಗಳ ರಾಜಧಾನಿಯಾಗಿ, ಬಸದಿಗಳ ತವರೂರಾಗಿ, ಪವಿತ್ರ ಗಂಗಾಜಲದಂತೆ ಕೊಪ್ಪಳತೀರ್ಥ ಎಂದು ಪ್ರಸಿದ್ಧವಾಗಿ ಅದು ಚರಿತ್ರೆಯಲ್ಲಿ ತನ್ನ ಪಾತ್ರವನ್ನು ಹಿರಿದಾಗಿಸಿಕೊಂಡಿದೆ. ಯಾವುದೇ ಒಂದು ಪ್ರಾದೇಶಿಕತೆಯ ಹಿರಿಮೆ ಆ ಪ್ರದೇಶದ ಸಮಗ್ರ ಬೆಳವಣಿಗೆಯನ್ನೇ ಆಧರಿಸಿರುತ್ತದೆ. ಕೊಪ್ಪಳದಲ್ಲಿ ಇಂಥ ಬೆಳವಣಿಗೆಗಳು ಹಲವು. ಇಡೀ ಭಾರತದಲ್ಲಿಯೇ ಮೊಟ್ಟಮೊದಲು ಅಖಂಡ ಭಾರತದ ರಾಜ್ಯವೊಂದನ್ನು ನಿರ್ಮಿಸಿ ಅದನ್ನು ಧರ್ಮಸಾಮ್ರಾಜ್ಯವನ್ನಾಗಿ ಪರಿವರ್ತಿಸಿದ ಅಶೋಕನು ಇಲ್ಲಿ ಎರಡು ಶಾಸನಗಳನ್ನು ನೆಲೆಗೊಳಿಸಿದನು. ತಾನು ಬೌದ್ಧನಾಗಿ ಎರಡು ವರ್ಷಗಳ ತರುವಾಯ ನೆಟ್ಟ ಈ ಶಾಸನಗಳು ಇಡೀ ದಕ್ಷಿಣ ಭಾರತದಲ್ಲಿ ಬೌದ್ಧ ಧರ್ಮವನ್ನು ಸಾರುವ ಮತ್ತು ಪ್ರತಿಪಾದಿಸುವ

ಮಾಧ್ಯಮಗಳಾಗಿ ಹೊರಹೊಮ್ಮುತ್ತವೆ. ಅಶೋಕನ ಸೇನೆ ಕೊಪ್ಪಳದವರೆಗೂ ಬಂದು ಆಕ್ರಮಣವನ್ನು ಮಾಡಿತ್ತೋ ಇಲ್ಲವೋ ತಿಳಿಯದು. ಆದರೆ ಅಶೋಕನ ಧರ್ಮಸಾಮ್ರಾಜ್ಯದ ಇಚ್ಛಾಶಕ್ತಿ ಕೊಪ್ಪಳ ಮತ್ತು ಅದಕ್ಕಿಂತ ದಕ್ಷಿಣ ಭಾರತದ ತುತ್ತ ತುದಿಯವರೆಗೂ ಆಕ್ರಮಿಸಿಕೊಂಡಿದೆ. ರಾಜಕೀಯ ಮತ್ತು ಧಾರ್ಮಿಕ ಇಚ್ಛಾಶಕ್ತಿಗಳು ಒಂದರಲ್ಲೊಂದು ಸಾಮರಸ್ಯಗೊಂಡು ಅವೆರಡೂ ತಮ್ಮ ತಮ್ಮ ಪಾಲಿನ ವಿಕ್ರಮವನ್ನು ಸಾಧಿಸಿಕೊಂಡಿವೆ. ಕೊಪ್ಪಳ ಈ ನಿಟ್ಟಿನಲ್ಲಿ ಅವರಿಗೆ ಒಂದು ಕೇಂದ್ರಶಕ್ತಿಯಾಗಿ ಪರಿಣಮಿಸಿದೆ. ಮಸ್ಕಿ, ಸಿದ್ಧಾಪುರ, ಜಟಿಂಗರಾಮೇಶ್ವರ ಮುಂತಾದ ಶಾಸನಗಳಲ್ಲಿ ಹೇಳಿರುವುದಕ್ಕಿಂತ ಭಿನ್ನವಾದ ವಿಷಯವನ್ನು ಅಶೋಕನ ಶಾಸನಗಳಲ್ಲಿ ಕಂಡುಕೊಳ್ಳಬಹುದು. ಅದಕ್ಕೂ ಮುನ್ನ ಪ್ರಾಗೈತಿಹಾಸಿಕ ಕಾಲಘಟ್ಟಗಳಲ್ಲಿ ದೊರೆತ ಕಲ್ಗೋರಿಗಳು, ಅಲ್ಲಿ ಬದುಕಿ ಬಾಳಿದ್ದ ಜನರ ಆಯುಧಗಳು ಮತ್ತು ಇನ್ನಿತರ ಅವಶೇಷಗಳನ್ನು ಕಂಡುಕೊಂಡಾಗ ಕೊಪ್ಪಳವು ಕ್ರಿ.ಪೂ.ದಲ್ಲಿ ಸಾಕಷ್ಟು ಸಾಧಿಸಿದೆ ಎಂಬುದು ಈ ಅಧ್ಯಯನದಲ್ಲಿ ಕಂಡುಕೊಂಡ ಅಂಶವಾಗಿದೆ.

ಒಂದು ಸಂಸ್ಕೃತಿಯ ಹಿರಿಮೆ ಅದು ಎಷ್ಟು ಹಳತು ಎಂಬುದರೊಂದಿಗೆ ನಿರ್ಧಾರವಾಗುತ್ತದೆ. ಏಕೆಂದರೆ ಸಂಸ್ಕೃತಿಯು ಒಮ್ಮೆಲೆ ಹುಟ್ಟಿ ಒಮ್ಮೆಲೆ ವಿಕಾಸವಾಗಿ ಸಮಾಜವನ್ನು ಆಕ್ರಮಿಸುವಂಥದ್ದಲ್ಲ. ಅದು ಅದರ ಹುಟ್ಟು ಒಂದು ಯಕ್ಷ ಪ್ರಶ್ನೆ. ಸಂಸ್ಕೃತಿ ರೂಪುಗೊಳ್ಳಬೇಕಾದರೆ ಅಲ್ಲಿ ಅನೇಕ ವಿಷಯಗಳು ಕೆಲಸ ಮಾಡುತ್ತವೆ. ಮಾನವನ ಬೌದ್ಧಿಕ ಆಸಕ್ತಿಗಳು ಅವನ ಆರ್ಥಿಕ ಚಟುವಟಿಕೆಗಳು ಅವನ ರಾಜಕೀಯ ಸಂಘಟನೆಗಳು, ಅವನ ಸಾಮಾಜಿಕ ನಡವಳಿಕೆಗಳು, ಧಾರ್ಮಿಕ ಆಚರಣೆಗಳು ಇತ್ಯಾದಿ ಅಂಶಗಳು ಸಂಸ್ಕೃತಿ ಮೈಗೂಡಿಕೊಳ್ಳಲಿಕ್ಕೆ ಕಾರಣವಾಗುತ್ತವೆ. ಪ್ರಾಗೈತಿಹಾಸಿಕ ಕಾಲಘಟ್ಟದ ಮಾನವ ಎಲ್ಲ ಹಂತಗಳನ್ನು ದಾಟಿ ಸಂಸ್ಕೃತಿ ಎಂಬ ಘನೀಕೃತ ರೂಪಕ್ಕೆ ಕಾರಣನಾಗಿದ್ದಾನೆ. ಕ್ರಿ.ಶಕದ ಹೊತ್ತಿಗಾಗಲೇ ಕೊಪ್ಪಳದಲ್ಲಿ ಸಾಂಸ್ಕೃತಿಕವಾದಂಥ ಪರಿಸರವು ಹುಟ್ಟಿಕೊಂಡಿರುವುದು ತಿಳಿದುಬರುತ್ತದೆ. ಈ ಹಿನ್ನೆಲೆಯಲ್ಲಿ ವಿವೇಚನೆಯನ್ನು ಪ್ರಕೃತ ಅಧ್ಯಯನದಲ್ಲಿ ಮಾಡಲಾಗಿದೆ.

ಕ್ರಿಸ್ತ ಶಕದ ಆರಂಭದಿಂದ ಹಲವು ಸಾಂಸ್ಕೃತಿಕ ಹೊಸ ಅಂಶಗಳನ್ನು ಕೊಪ್ಪಳ ಪ್ರದೇಶವು ರೂಢಿಸಿಕೊಂಡಿದೆ. ಭೌಗೋಳಿಕವಾಗಿ ಆ ಪ್ರದೇಶ ವಿಭಿನ್ನ ರೀತಿಯಿಂದ ಕಾಣದೊರೆಯುತ್ತದೆ. ಏಕೆಂದರೆ ಮೂರು ಕಡೆ ಬೆಟ್ಟಗಳಿಂದ ಆವೃತವಾದ ಮತ್ತು ಒಂದು ಕಡೆ ಮಾತ್ರ ಸಮಮಟ್ಟದ ಭೂ ಪಾತಳಿಯನ್ನು ಕಾಣಬಹುದು. ರಾಜಕೀಯ ಸಂಘಟನೆಗಳು ಬೆಟ್ಟಗಳ ಮೇಲೆ ಕೋಟೆಗಳನ್ನು ಕಟ್ಟಿಕೊಳ್ಳಲಿಕ್ಕೆ ಕಾರಣವಾದವು. ಪ್ರಾಗೈತಿಹಾಸಿಕ ಮಾನವ ನಿಸರ್ಗ ನಿರ್ಮಿತ ಗವಿಗಳಲ್ಲಿ ವಾಸವಾಗಲು ನೆರವಾದವು. ತುಂಗಭದ್ರಾ ನದಿ ಅನತಿ ದೂರದಲ್ಲಿ ಹರಿಯುತ್ತಿದ್ದುದರಿಂದ ನೀರಿಗೆ ಯಾವುದೇ ರೀತಿಯಿಂದ ತೊಂದರೆ ಇರುತ್ತಿರಲಿಲ್ಲ. ಕೃಷಿಯೋಗ್ಯವಾದ ಭೂಮಿಯು ಲಭ್ಯವಿದ್ದುದರಿಂದ ಆಹಾರಧಾನ್ಯಗಳನ್ನು ಬೆಳೆಯುವ ಅವಕಾಶ ಹೇರಳವಾಗಿತ್ತು. ಗುಡ್ಡಗಾಡು ಪ್ರದೇಶ ಪಶುಸಾಕಣಿಗೆ ಒಂದು ಪ್ರಶಸ್ತ ಪರಿಸರವನ್ನುಂಟುಮಾಡಿತ್ತು. ಈ ಹಿನ್ನೆಲೆಯಲ್ಲಿ ಅಲ್ಲಿ ಜನಜೀವನವು ನೆಲೆಸಿ ಹಲವು ಸಾಮಾಜಿಕ ಆರ್ಥಿಕ, ಶೈಕ್ಷಣಿಕ ಮತ್ತು ರಾಜಕೀಯ ಇಚ್ಛಾಶಕ್ತಿಗಳನ್ನು ಹೊಂದಲು ಕಾರಣವಾಯಿತು. ಈ ಕಾರಣದಿಂದಲೇ ಅಲ್ಲಿ ಚರಿತ್ರೆಯಾದ್ಯಂತ ಸಂಸ್ಕೃತಿಯ ಎಲ್ಲ ಆಯಾಮಗಳು ವಿಕಾಸ ಹೊಂದಲು ಈ ಭೌಗೋಳಿಕ ಪ್ರದೇಶವು ಸಾಕಷ್ಟು ಪ್ರಭಾವ ಬೀರಿರುವುದು ಈ ಅಧ್ಯಯನದಿಂದ ಗೊತ್ತಾಗುತ್ತದೆ.

ಕದಂಬರ ಮಯೂರವರ್ಮನ ಚಂದ್ರವಳ್ಳಿ ಶಾಸನವು ಕೊಪ್ಪಳವನ್ನು ಸಹಜವಾಗಿ ಹೆಸರಿಸುತ್ತದೆ. ಆ ಶಾಸನವನ್ನು ಕೆತ್ತಿಸಿದ ಚಾಮನು ಕೊಪ್ಪಳದವನಾಗಿದ್ದಾನೆ. ಈ ಕಾರಣದಿಂದ ಕೊಪ್ಪಳವು ಅದೆಷ್ಟೋ ಹಳತಾದ ಶೈಕ್ಷಣಿಕ ಕೇಂದ್ರವಾಗಿತ್ತು ಎಂಬುದನ್ನು ಗುರುತಿಸಬಹುದಾಗಿದೆ. ಕನ್ನಡದ ಪ್ರಾಚೀನ ಸಾಹಿತ್ಯಗಳಲ್ಲಿ ಅಲ್ಲಲ್ಲಿ ಕೊಪ್ಪಳದ ಉಲ್ಲೇಖ ಮತ್ತು ಅದರ ಪಾವಿತ್ರ್ಯದ ವರ್ಣನೆಗಳು ದೊರೆಯುತ್ತವೆ. ಕೊಪ್ಪಳವು ಒಂದು ಕಾಲಕ್ಕೆ ಗಂಗಾಜಳದಂತೆ ಪವಿತ್ರವಾಗಿತ್ತು, ಬಳಿಯುರಳೆಯಷ್ಟು ಶ್ವೇತ ಬಣ್ಣದಂತಹ ಪಾವಿತ್ರ್ಯವನ್ನು ಅದು ಉಳಿಸಿಕೊಂಡಿದೆ. ಅತ್ತಿಮಬ್ಬೆಯ ವರ್ಣನೆಯಲ್ಲಿ ರತ್ನತ್ರಯರಲ್ಲಿ ಒಬ್ಬನಾದ ರನ್ನನು ಕೊಪ್ಪಳವನ್ನು ಹಾಡಿ ಹೊಗಳಿದ್ದಾನೆ. ಅದು ಅಜಿತಸೇನ ಮುನಿಯ ಗುಣಾವಳಿಯಂತೆ ಪವಿತ್ರವಾಗಿತ್ತೆಂದು ತಿಳಿಮುಬರುತ್ತದೆ. ಅಜಿತಸೇನ ಮುನಿ

ಗುಣಾವಶೇಷಗಳನ್ನು ಇಡೀ ಒಂದು ಕಾವ್ಯದ ಪರ್ಯಂತ ವರ್ಣಿಸಲ್ಪಟ್ಟಿದೆ. ಜೈನಮುನಿಗಳು ಅಹಿಂಸಾಪ್ರಿಯರು. ಅವರು ಶಾಂತಚಿತ್ತರು. ಅವರು ಸಾಹಿತ್ಯ ಪ್ರಾಜ್ಞರು, ಅವರು ನಿತ್ಯ ಯೋಗಕರ್ಮಗಳಲ್ಲಿ ಕಾಲವನ್ನು ದೂಡುವವರು. ಯಾವ ಜೀವ ಜಂತುಗಳಿಗೂ ತೊಂದರೆಯನ್ನು ಕೊಡಲಾರದಂಥ ವ್ಯಕ್ತಿತ್ವವುಳ್ಳವರು. ವೈರಾಗ್ಯಪ್ರಿಯರು. ಇಂತಹ ಜೈನಮುನಿಗಳನ್ನು ಪಾವಿತ್ರ್ಯದಲ್ಲಿ ಸರಿಗಟ್ಟುವಂಥ ಮನಸ್ಸುಗಳು ಕೊಪ್ಪಳದಲ್ಲಿ ಅಂದು ನೆಲೆಸಿರಬೇಕು. ಈ ಕಾರಣದಿಂದಲೇ ಇಡೀ ಜೈನಕವಿಗಳು ಕೊಪ್ಪಳವನ್ನು ಒಂದು ಪಾವಿತ್ರದ, ಒಂದು ಅಧ್ಯಾತ್ಮದ, ಒಂದು ಸ್ವರ್ಗಸಮಾನವಾದ ಕೇಂದ್ರವನ್ನಾಗಿ ಮಾಡಿಕೊಂಡಿರುವರು. ಸುಮಾರು ಒಂದೂವರೆಸಾವಿರ ವರ್ಷಗಳ ಕಾಲ ಅದು ಜೈನರ ಮಹತ್ವದ ಕೇಂದ್ರವಾಗಿದೆ. ಅಲ್ಲಿ ಅನೇಕ ಜೈನರಸರು ಅವರ ಪರಿವಾರಗಳು, ಮುನಿಗಳು, ಮುನಿಗಳ ಪರಿವಾರಗಳು, ಅವರ ಶಿಷ್ಯ ಪರಂಪರೆಗಳು, ಸ್ವರ್ಗಕ್ಕೆ ಹೋದುದರ ಬಗೆಗೆ ಮನೋಜ್ಞವಾದ ಉಲ್ಲೇಖಗಳು ದೊರೆಯುತ್ತವೆ. ಶಾಸನಗಳು, ನಿಶಿಧಿಕಲ್ಲುಗಳು, ಸಾಹಿತ್ಯ ಮುಂತಾದ ಆಕರಗಳಿಂದ ಇದನ್ನು ಗ್ರಹಿಸಬಹುದಾಗಿದೆ. ಈ ಹಿನ್ನೆಲೆಯಲ್ಲಿ ಪ್ರಕೃತ ಅಧ್ಯಯನವು ಸಾರ್ಥಕಗೊಂಡ ಒಂದು ಪ್ರಯತ್ನವಾಗಿದೆ ಎಂದು ಹೇಳಬಹುದಾಗಿದೆ.

ಪ್ರಯತ್ನಶೀಲತೆ ಮತ್ತು ವಿವೇಚನಾಶೀಲತೆಯಿಂದ ಇಲ್ಲಿಯ ಅಧ್ಯಯನವನ್ನು ಹಲವು ದೃಷ್ಟಿಕೋನಗಳನ್ನಿಟ್ಟುಕೊಂಡು ಮಾಡಲಾಗಿದೆ. ಪ್ರಾಗೈತಿಹಾಸಿಕ ಯುಗದ ಪೂರ್ವದಲ್ಲಿ ಶಿಲಾಯುಗದ ಬೇರೆ ಬೇರೆ ಘಟ್ಟಗಳಲ್ಲಿ ಕೊಪ್ಪಳವು ಜನವಸತಿ ಕೇಂದ್ರವಾಗಿತ್ತೆಂದು Hypothises( (ಊಹಾತ್ಮಕ ಸತ್ಯ)ವನ್ನು ರೂಪಿಸಿಕೊಂಡು ವಿವೇಚಿಸಲಾಗಿದೆ. ಡಾರ್ವಿನ್ನನ ವಿಕಾಸ ಸಿದ್ಧಾಂತವನ್ನು ಬದಿಗಿಟ್ಟುಕೊಂಡು ಮಾನವನ ಬದುಕಿನ ವಿಕಾಸದ ಹೆಜ್ಜೆಗಳನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಪಡಲಾಗಿದೆ. ಏಕೆಂದರೆ ಒಮ್ಮೆಂದೊಮ್ಮೆಗೆ ಕೊಪ್ಪಳದಲ್ಲಿ ಬೃಹತ್ ಶಿಲಾಯುಗದಲ್ಲಿ ಮಾನವ ಬಂದು ವಾಸವಾಗಿದ್ದಿರಬಹುದು ಎಂಬುದು ಅಲ್ಲಿ ಚರಿತ್ರೆಗೆ ಬಗೆದ ದೂರಾನ್ವಯ ನೀತಿಯಾಗಬಹುದು. ಶಿಲಾಯುಗದಲ್ಲಿ ಅದು ಜನವಸತಿ ಪ್ರದೇಶವಾಗಿತ್ತೋ ಇಲ್ಲವೋ ಎನ್ನುವುದನ್ನು ಮಾನವ ಶಾಸ್ತ್ರಜ್ಞರ ಹಲವು ವಾದಗಳ

ಹಿನ್ನೆಲೆಯಲ್ಲಿ ಈ ಅಧ್ಯಯನವನ್ನು ಎತ್ತಿಕೊಳ್ಳಲಾಗಿದೆ. ಶಿಲಾಯುಗದ ಮಾನವರು ಹಳೆಯ ಮತ್ತು ನವಶಿಲಾಯುಗದ ಕಾಲದಲ್ಲಿ ಕೊಪ್ಪಳದಂತಹ ಸನ್ನಿವೇಶದಲ್ಲಿ ವಾಸವಾಗಿದ್ದಿರಲೇಬೇಕು. ಏಕೆಂದರೆ ಬೃಹತ್ ಶಿಲಾಯುಗದವು ಎನ್ನಲಾಗುವ ಕಲ್ಲಿನ ಆಯುಧಗಳನ್ನು ಪುನರ್ ಪರಿಶೀಲಿಸಿದಾಗ ಅವು ಶಿಲಾಯುಗದ ಆಯುಧಗಳೆಂಬಂತೆ ತೋರುತ್ತವೆ. ಈ ವಿಷಯಗಳಲ್ಲಿ ಏಕಾಏಕಿಯಾಗಿ ಇವು ಬೃಹತ್ ಶಿಲಾಯುಗದ ಆಯುಧಗಳು ಎಂದು ಹೇಳಲು ಆಧಾರಗಳು ಸಾಲವು. ಬೃಹತ್ ಶಿಲಾಯುಗದ ಕಾಲದಲ್ಲಿ ಜನವಸತಿಯ ಪ್ರದೇಶ ಅದಾಗಿರುವುದರಿಂದ ಅಲ್ಲಿ ಹಳೆಯ ಮಧ್ಯ ಮತ್ತು ನವಶಿಲಾಯುಗದ ಅವಶೇಷಗಳು ಹಾಳಾಗಿರಬಹುದು ಅಥವಾ ನಮಗೆ ಇಂದು ದೊರೆಯದಾಗಿರಬಹುದು. ಏಕೆಂದರೆ ಹಳೆಯ ಶಿಲಾಯುಗದ ಅವಶೇಷಗಳು ಕೊಪ್ಪಳಕ್ಕೆ ನೂರಿನ್ನೂರು ಕಿಲೋಮೀಟರ್ ವ್ಯಾಪ್ತಿಯೊಳಗೆ ಸಿಕ್ಕಿರುವುದರಿಂದ ಅಲ್ಲಿ ಶಿಲಾಯುಗದ ಜನರು ವಾಸಿಸಿರಲೇಬೇಕು ಎಂಬುದು ಸ್ಪಷ್ಟವಾಗುತ್ತದೆ. ಬಳ್ಳಾರಿ ಜಿಲ್ಲೆಯ ಕುಡಿತಿನಿ, ಮತ್ತು ಕೂಡ್ಲಿಗಿ ತಾಲ್ಲೂಕಿನಲ್ಲಿ ದೊರೆತಿರುವ ಶಿಲಾಯುಗದ ಮಾನವಾಕಾರದ ಹೆಬ್ಬಂಡೆಗಳು ಜೊತೆಗೆ ಆಯುಧಗಳ ಅವಶೇಷಗಳನ್ನು ಗಮನಿಸಲಾಗಿ ಕೊಪ್ಪಳವು ಶಿಲಾಯುಗ ಸಂಸ್ಕೃತಿಯಲ್ಲಿ ಜನವಸತಿ ಸ್ಥಾನವಾಗಿರಬೇಕೆಂದು ಬಲವಾಗಿ ಪ್ರತಿಪಾದಿಸಲು ಅವಕಾಶಗಳನ್ನು ಈ ಅಧ್ಯಯನವು ಕಲ್ಪಿಸಿಕೊಟ್ಟಿದೆ.

ರಾಜಕೀಯ ಸಂಘಟನೆಗಳು ಯಾವಾಗ ಆರಂಭವಾದವು ಎಂಬುದನ್ನು ಇಲ್ಲಿ ವಿಶದವಾಗಿ ಚರ್ಚಿಸಲಾಗಿದೆ. ಪ್ರಾಗೈತಿಹಾಸಿಕ ಕಾಲಘಟ್ಟದ ನಂತರ ಮೌರ್ಯರ ಕಾಲದ ಆಡಳಿತದವರೆಗೆ ಇಲ್ಲಿ ಯಾವುದೇ ಆಧಾರಗಳು ರಾಜಕೀಯ ಸಂಘಟನೆಗಾಗಲಿ ಅಥವಾ ಜನಜೀವನದ ಪರವಾಗಿಯಾಗಲಿ ದೊರೆಯುತ್ತಿಲ್ಲ. ಈ ಹಿನ್ನೆಲೆಯಲ್ಲಿ ಕೊಪ್ಪಳ ಪ್ರದೇಶದಲ್ಲಿ ಕ್ರಿ.ಪೂ. ೫ ರಿಂದ ೩ನೇ ಶತಮಾನದವರೆಗೆ ಯಾವ ರಾಜರು ಆಳ್ವಿಕೆ ನಡೆಸುತ್ತಿದ್ದರು, ಅಲ್ಲಿರುವ ಜನ ಯಾವ ಭಾಷಿಕರು, ಯಾವ ಜನಾಂಗದವರು, ಯಾವ ಸಂಸ್ಕೃತಿಯುಳ್ಳವರು ಎಂಬುದು ದೊರೆಯದಿರುವುದು ಈ ಅಧ್ಯಯನಕ್ಕೆ ಕೊರತೆಯನ್ನುಂಟುಮಾಡಿದೆ. ಏಕೆಂದರೆ ಕಲ್ಗೋರಿಗಳ ತರುವಾಯದಲ್ಲಿ ಮಾನವ ಸಂಸ್ಕೃತಿ ಈ

ಪ್ರದೇಶದಲ್ಲಿ ಹೇಗೆ ಇತ್ತು ಎಂಬುದನ್ನು ತಿಳಿಯಲಿಕ್ಕೆ ಆಧಾರಗಳೇ ಇಲ್ಲ. ಈ ಪ್ರಯತ್ನಗಳ ಹಿನ್ನೆಲೆಯಲ್ಲಿ ಅಧ್ಯಯನ ಸಾಕಷ್ಟು ಪ್ರಯತ್ನಪಟ್ಟಿದ್ದರೂ ಮಸುಕಾದ ಚಿತ್ರಣವನ್ನು ಕಟ್ಟಿಕೊಡಲಾಗಿದೆ.

ಕದಂಬರ ಶಾಸನಗಳಲ್ಲಿ ಕೊಪ್ಪಳದ ಉಲ್ಲೇಖ ಸಿಕ್ಕನಂತರ ಬಾದಾಮಿ ಚಾಲುಕ್ಯರವರೆಗೆ ಆ ಸ್ಥಳದಲ್ಲಿ ಶಾಸನಗಳು ದೊರೆಯುತ್ತಿಲ್ಲ. ಸುಮಾರು ನೂರಿನ್ನೂರು ವರ್ಷಗಳ ಕಾಲದ ಇತಿಹಾಸವು ಅಲ್ಲಿ ದೊರೆಯುತ್ತಿಲ್ಲ. ಶಾಸನಗಳಾಗಲಿ ಸಾಹಿತ್ಯ ಕೃತಿಗಳಾಗಲೀ ಇದರ ಬಗ್ಗೆ ವಿವರಣೆ ನೀಡುತ್ತಿಲ್ಲ. ಈ ಬಗೆಯ ವಿವರಣೆಗಳನ್ನು ಅಧ್ಯಯನವು ಸಾಕಷ್ಟು ಪ್ರಮಾಣದಲ್ಲಿ ಒದಗಿಸಿಕೊಡುತ್ತದೆ. ಕೊಪ್ಪಳದ ರಾಜಕೀಯ ಚರಿತ್ರೆಯನ್ನು ನಿರೂಪಿಸುವಲ್ಲಿ ಅಧ್ಯಯನವು ಯಶಸ್ಸನ್ನು ಹೊಂದಿದೆ.

ಶಿಲಾಶಾಸನಗಳ ಅಧ್ಯಯನವನ್ನು ಒಂದು ಅಧ್ಯಾಯವನ್ನಾಗಿ ಮಾಡಿಕೊಂಡು ಅವುಗಳ ವೈಶಿಷ್ಟ್ಯಗಳನ್ನು ಹೇಳಲಾಗಿದೆ. ಶಾಸನದ ವಿಷಯಗಳನ್ನು ಕುರಿತು ಚರ್ಚಿಸಲಾಗಿದೆ. ಶಾಸನದ ಸ್ವರೂಪಗಳನ್ನು ವಿಶದೀಕರಿಸಲಾಗಿದೆ. ಈ ನಿಟ್ಟಿನಲ್ಲಿ ಒಂದು ಸಾರ್ಥಕ ಪ್ರಯತ್ನವು ಅಧ್ಯಯನದಲ್ಲಿ ಒಡಮೂಡಿದೆ ಎಂಬುದನ್ನು ಹೇಳಬಹುದು.

ಕೋಟೆಯ ನಿರ್ಮಾಣ, ದೇವಾಲಯಗಳ ನಿರ್ಮಾಣ, ಬಸದಿಗಳ ನಿರ್ಮಾಣ ಇತ್ಯಾದಿ ವಾಸ್ತು ಸಂಬಂಧಿಯಾದ ವಿವರಗಳಿಗೆ ಒಂದು ಅಧ್ಯಾಯವನ್ನು ಮೀಸಲಾಗಿಟ್ಟು ಅದರ ಕೇಂದ್ರ ಪರಿಸರದ ಸುತ್ತ ವಿವರಗಳನ್ನು ದಾಖಲಿಸಲಾಗಿದೆ. ಸಮರ್ಥ ಆಕರಗಳು ದೊರೆಯದಿದ್ದ ಕಾರಣ ಕೊಪ್ಪಳದ ಕೋಟೆಯನ್ನು ಕಟ್ಟಿದವರಾರು ಎಂಬ ಪ್ರಶ್ನೆಗೆ ತೀರ್ಮಾನಕ್ಕೆ ಬರಲಾಗಿಲ್ಲ. ಇದು ಅಧ್ಯಯನದ ತಾಂತ್ರಿಕ ಕೊರತೆಯೆಂದು ಭಾವಿಸಲಾಗಿದೆ.

ಪ್ರಾಗೈತಿಹಾಸಿಕ ಕಾಲಘಟ್ಟದ ಕೊಪ್ಪಳದ ಚರಿತ್ರೆಯನ್ನು ಹಿಡಿಯಲು ಸಾಕಷ್ಟು ಪ್ರಯತ್ನ ಮಾಡಲಾಗಿದೆ. ಕಲ್ಗೋರಿಗಳು, ಇನ್ನಿತರ ಶಿಲಾಯುಗದ ಆಯುಧ ಮತ್ತು ಅವಶೇಷಗಳನ್ನು ಗಮನಿಸಿ ಹಳೆಯ ಮಧ್ಯಮ ಮತ್ತು ನವಶಿಲಾಯುಗದ ಸಂದರ್ಭದಲ್ಲಿ ಇಲ್ಲಿ ಜನವಸತಿ ಇದ್ದಿರಬಹುದೆಂದು

ಬಲವಾಗಿ ಶಂಕಿಸಲಾಗಿದೆ. ಆದರೆ ಬೃಹತ್ ಶಿಲಾಯುಗದಲ್ಲಿ ಜನವಸತಿ ಪ್ರದೇಶವಾಗಿ ಕೊಪ್ಪಳ ಪ್ರದೇಶವನ್ನು ಕಾಣಲಾಗಿದೆ. ಈ ಹಿನ್ನೆಲೆಯೊಂದಿಗೆ ಭಾರತದ ಬೃಹತ್ ಶಿಲಾಯುಗದ ಚರಿತ್ರೆಗೆ ಹೊಸ ಅಂಶದ ಸೇರ್ಪಡೆಯೆಂದು ಬಗೆಯಲಾಗಿದೆ.

ಸಾಂಪ್ರದಾಯಿಕ ಚಾರಿತ್ರಿಕ ಅಂಶಗಳನ್ನು ಆದರ್ಶವಾದಿ ಚಿಂತನೆಗೊಳಪಡಿಸಿ ಚರ್ಚಿಸಿಕೊಳ್ಳಲಾಗಿದೆ. ಅಶೋಕನ ಧರ್ಮಸಾಮ್ರಾಜ್ಯದಂತಹ ವಿಷಯಗಳಲ್ಲಿ, ರಜಕಾರರ ಚಳುವಳಿಯ ಹಿನ್ನೆಲೆಯಲ್ಲಿ ನಿರೂಪಿಸಿದ ಸಂಕಥನವು ಹಲವು ಹೊಸಹೊಳಹುಗಳನ್ನು ಹೇಳುತ್ತದೆ. ರಜಕಾರರ ಚಳುವಳು ಚರಿತ್ರೆಯಲ್ಲಿ ಕಪ್ಪುಚುಕ್ಕೆಯಾಗಿದ್ದರೂ ರಜಕಾರರ ಚಳುವಳಿಯಂಥ ಒಂದು ಘಟನೆ ಆ ಪ್ರದೇಶದಲ್ಲಿ ಉಂಟುಮಾಡಿದ ಪರಿಣಾಮಗಳನ್ನು ಬಹಳ ಸೂಕ್ಷ್ಮವಾಗಿ ಚರ್ಚಿಸಿಕೊಳ್ಳಲಾಗಿದೆ. ಜನತೆ ಸಾಧಿಸಿಕೊಂಡ ಸಮನ್ವಯವನ್ನು ಇಲ್ಲಿ ಎತ್ತಿ ಹೇಳಲಾಗಿದೆ.

ಧರ್ಮದಂತಹ ಸೂಕ್ಷ್ಮ ವಿಚಾರಗಳಲ್ಲಿ ಆ ಪ್ರದೇಶದ ಜನ ಹೇಗೆ ಬೇರೆ ಬೇರೆ ಧರ್ಮಗಳ ಪರಿಸರಕ್ಕೆ ಹೊಂದಿಕೊಳ್ಳುತ್ತಿದ್ದರು ಎಂಬುದು ಕುತೂಹಲಕಾರಿಯಾದಂಥಹ ಅಂಶವಾಗಿತ್ತು. ಅದನ್ನು ಅಧ್ಯಯನದಲ್ಲಿ ತುಂಬಾ ಜಾಗರೂಕತೆಯಿಂದ ವಿಶ್ಲೇಷಿಸಿ ಅದಕ್ಕೆ ಸಂಬಂಧಿಸಿದಂತೆ ಹಲವು ತೀರ್ಮಾಣಗಳನ್ನು ತೆಗೆದುಕೊಳ್ಳಲಾಗಿದೆ. ಕರ್ನಾಟಕದ ಹೃದಯವೈಶಾಲ್ಯತೆಗೆ ಧರ್ಮಸಮನ್ವಯತೆ ಒಗ್ಗಿಕೊಂಡು ಬಂದ ಅಂಶ. ಈ ಅಂಶ ಕೊಪ್ಪಳದ ಪರಿಸರದಲ್ಲಿ ಹೇಗೆ ಮುಖಾಮುಖಿಯಾಗಿದೆ ಎಂಬುದನ್ನು ನೋಡಲಾಗಿದೆ.

ಆಕರಗಳ ಕೊರತೆಯಿಂದಾಗಿ ಹಲವು ಅಂಶಗಳಲ್ಲಿ ನಿರ್ದಿಷ್ಟತೆಯನ್ನು ಕಂಡುಕೊಳ್ಳಲಾಗಿಲ್ಲ. ಇಂಥ ಸಂದರ್ಭಗಳಲ್ಲಿ ಅಧ್ಯಯನದ ವ್ಯಾಪ್ತಿಯನ್ನು ಗಮನಿಸಿ ಮುಂದಿನ ಅಧ್ಯಯನಗಳಿಗೆ ಭೂಮಿಕೆಯನ್ನು ರೂಪಿಸಿಕೊಡಲಾಗಿದೆ. ಕೊಪ್ಪಳದ ಧರ್ಮಗಳು, ಶಾಸನಗಳು, ಕೋಟೆ, ಮುಂತಾದವುಗಳು ಸ್ವತಂತ್ರ ಅಧ್ಯಯನವನ್ನು ರೂಪಿಸಿಕೊಳ್ಳುವಂತ ಗರಿಮೆಯನ್ನುಳ್ಳವುಗಳು. ಈ ಹಿನ್ನೆಲೆಯಲ್ಲಿ ಹೊಸ ಅಧ್ಯಯನಗಳಿಗೆ ಭೂಮಿಕೆಯನ್ನು ಸಿದ್ಧಪಡಿಸಿಕೊಡಲಾಗಿದೆ.

ಅದೇನೇ ಇದ್ದರೂ ಕೊಪ್ಪಳ ಪ್ರದೇಶಕ್ಕೆ ಒಂದು ಸರಳ ರೇಖಾತ್ಮಕ ಚರಿತ್ರೆಯನ್ನು ರೂಪಿಸಿಕೊಡುವಲ್ಲಿ ಪ್ರಕೃತ ಅಧ್ಯಯನವು ಯಶಸ್ವಿಯಾಗಿದೆ. ಇದೇ ಈ ಅಧ್ಯಯನದ ಪ್ರಮುಖ ಉದ್ದೇಶವಾಗಿತ್ತು. ಆಕರಗಳ ಕೊರತೆಯಿರದಿದ್ದರೆ ಕೊಪ್ಪಳದ ಸಾಂಸ್ಕೃತಿಕ ಅಧ್ಯಯನವು ಎಲ್ಲ ನಿಟ್ಟುಗಳಿಂದ ಕೂಡಿರುತ್ತಿತ್ತು. ಆದರೆ ಆಕರಗಳು ದೊರೆಯದ ಹಿನ್ನೆಲೆಯಲ್ಲಿ ಸರಳ ರೇಖಾತ್ಮಕವಾದ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡಲಾಗಿದೆ. ಉತ್ಖನನ ಮುಂತಾದ ಸಾಂಸ್ಕೃತಿಕ ಚಟುವಟಿಕೆಗಳು ಆ ಭಾಗದಲ್ಲಿ ದೊರೆತರೆ ಮಾತ್ರ ಕೊಪ್ಪಳ ಪ್ರದೇಶದ ಸಮಗ್ರ ಅಧ್ಯಯನ ಸಾಧ್ಯ. ಮುಂದಿನ ಅಧ್ಯಯನಗಳು ಅದನ್ನು ನಿರೂಪಿಸಲು ಸಶಕ್ತವಾಗಲೆಂಬ ಆಕಾಂಕ್ಷೆಯಿಂದ ಪ್ರಕೃತ ಪ್ರಬಂಧಕ್ಕೆ ಸಮಾರೋಪವನ್ನು ನಿವೇದಿಸಲಾಗಿದೆ.

# ಅನುಬಂಧ

೧. ಛಾಯಾ ಚಿತ್ರಗಳು

೨. ನಕ್ಷೆಗಳು

೩. ಪ್ರಮುಖ ಪರಾಮರ್ಶನ ಗ್ರಂಥಗಳು

೪. ಅಧ್ಯಯನ ಸಂದರ್ಭದಲ್ಲಿ ಸಂದರ್ಶಿಸಿದ
ಸ್ಥಳಗಳ ಪಟ್ಟಿ

# ಛಾಯಾ ಚಿತ್ರಗಳು

೧೯. ಚಂದ್ರನಾಥ ಬಸ್ತಿ, ಕೊಪ್ಪಳ

೨೦. ಬಾಗಿಲುವಾಡ, ಕೊಪ್ಪಳ ಬಸ್ತಿ

೨೧. ಟಿಪ್ಪು ಸುಲ್ತಾನನ ಆಡಳಿತಗಾರ ಬಹಲ್ಲಮಿ, ಟಿಪ್ಪು ಸುಲ್ತಾನನ ಹೆಸರಿನಲ್ಲಿ ನಿರ್ಮಿಸಿದ ದರವಾಜ, ಇದನ್ನು ಸುಲ್ತಾನ ದರವಾಜಾ ಎಂದೇ ಕರೆಯುವರು.

೨೨. ವೀರಗಲ್ಲು, ಕೊಪ್ಪಳ

೨೩. ಪಾರ್ಶ್ವನಾಥ ತೀರ್ಥಂಕರರ ಬಸದಿ, ಕೊಪ್ಪಳದ ರೂಪರೇಷೆ

೨೪. ಬಸದಿಯ ಆದಿನಾಥ ಶಿಲ್ಪ, ಕೊಪ್ಪಳ

೨೫. ಪಾಶ್ವನಾಥ ಬಿಂಬ, ಕೊಪ್ಪಳ

೨೬. ಗಚ್ಚಿನ ಕೋಟೆಯಲ್ಲಿ ಸಿಕ್ಕಿರುವ ವಿಶೇಷ ವಾಸ್ತುಶಿಲ್ಪವಿರುವ ಬಾವಿ

೨೭. ಉಸ್ಮಾನ್

೨೮. ಕೋಟೆ ದೃಶ್ಯ, ಕೊಪ್ಪಳ

೨೯. ಗವಿಮಠದ ಆವರಣ, ಕೊಪ್ಪಳ

೩೦. ಕೋಟೆ ಭಾಗದಲ್ಲಿರುವ ನೀರಿನ ಹೊಂಡ

೩೧. ಬಿಜಾಪುರದರಸನ ಶಾಸನವಿರುವ ಉಸ್ಮಾನ್‌ನ ಪ್ರಾಂಗಣ ಭಾಗ

೩೨. ಸಿದ್ಧಲಿಂಗೇಶ್ವರ ದೇವಾಲಯ, ಹಿರೇ ಸಿಂದೋಗಿ

೩೩. ಗೋಣಿ ಬಸವೇಶ್ವರ ದೇವಾಲಯ

೩೪. ಈಶ್ವರ ದೇವಾಲಯ ಕೊಪ್ಪಳ

೩೫. ಸೋಮೇಶ್ವರ ದೇವಾಲಯ, ಮಾದಿನೂರು

13



ಬಸದಿಯ ಆದಿನಾಥ ಶಿಲ್ಪ, ಕೊಪ್ಪಳ

14



ಪಾರ್ಶ್ವನಾಥ ಬಿಂಬ, ಕೊಪ್ಪಳ

15





ಟಿಪ್ಪುಸುಲ್ತಾನನ ಆದಳಿತಗಾರ ಬಹಲ್ಲುಮಿ. ಟಿಪ್ಪು ಸುಲ್ತಾನನ ಹೆಸರಿನಲ್ಲಿ ನಿರ್ಮಿಸಿದ ದರವಾಜಾ
'ಸುಲ್ತಾನ ದರವಾಜಾ'

23




ಪಾರ್ಶ್ವನಾಥ ತೀರ್ಥಂಕರ ಬಸದಿ, ಕೊಪ್ಪಳ

24



ಬಸದಿಯ ಆದಿನಾಥ ಶಿಲ್ಪ, ಕೊಪ್ಪಳ

25



ಪಾರ್ಶ್ವನಾಥ ಬಿಂಬ, ಕೊಪ್ಪಳ

26



32



33 ಸಿದ್ಧಲಿಂಗೇಶ್ವರ ದೇವಾಲಯ, ಹಿರೆಸಿಂಧೋಗಿ, ಕೊಪ್ಪಳ ತಾಲೂಕು



ಗೋಣಿಬಸವೇಶ್ವರ ದೇವಾಲಯ, ಅಳವಂಡಿ, ಕೊಪ್ಪಳ ತಾಲೂಕು

34



ಈಶ್ವರ ದೇವಾಲಯ, ಕೊಪ್ಪಳ

35



ಸೋಮೇಶ್ವರ ದೇವಾಲಯ, ಮಾದಿನೂರು, ಕೊಪ್ಪಳ ತಾಲೂಕು

# ರಾಷ್ಟ್ರಕೂಟರ ಸಾಮ್ರಾಜ್ಯ




ಕಲ್ಯಾಣಿ ಚಾಲುಕ್ಯರು
ಪ್ರತಿಹಾರರು
ಎಲಿಚ್ಚಪುರ
ಅಜಂತಾ
ಎಲ್ಲೋರ
ಪಾಲರು
ಕಲ್ಯಾಣ
ವೆಂಗಿ
ಐಹೊಳೆ
ಪಟ್ಟದಕಲ್ಲು
ಬಾದಾಮಿ
ಕೊಪ್ಪಳ
ಬನವಾಸಿ
ಬಳ್ಳಿಗಾಮೆ
ಕೋಲಾರ
ಶ್ರವಣಬೆಳಗೊಳ
ಹಳೆಬೀಡು
ಬೇಲೂರು
ಸೋಮನಾಥಪುರ
ಪಲ್ಲವರು
ಚೋಳರು
ಪಾಂಡ್ಯರು


ಹೊಯ್ಸಳರ ರಾಜ್ಯ
ದೇವಗಿರಿಯ ಯಾದವರು
ಬನವಾಸಿ
ಇಟ್ಟಗಿ
ಬಾರಕೂರು
ಉಡುಪಿ
ಮಂಗಳೂರು
ದೋರಸಮುದ್ರ
ಬೇಲೂರು
ಸೋಮನಾಥಪುರ
ತಲಕಾಡು
ಶ್ರೀರಂಗಂ


1760ರಲ್ಲಿ ಮರಾಠ ಸಾಮ್ರಾಜ್ಯ
ಚೀನಾ
ಟಿಬೆಟ್
ಸಿಖ್ಖರು
ಮುಲ್ತಾನ್
ಪಾಕಿಸ್ತಾನ
ದೆಹಲಿ
ಲಕ್ನೊ
ಗ್ವಾಲಿಯರ್
ಇಂದೋರ್ ಭೋಪಾಲ್
ಮರಾಠಸಾಮ್ರಾಜ್ಯ
ಬೆಂಗಾಳ್
ಕಲ್ಕತ್ತಾ
ನಿಜಾಮನ ಪ್ರದೇಶಗಳು
ಮೈಸೂರ್
ಮರಾಠ ಸಾಮ್ರಾಜ್ಯ

ಕೊಪ್ಪಳದ ಕೋಟೆಯ ಸಮಗ್ರ
ವಿಹಂಗಮ ನೋಟ



# ಪ್ರಮುಖ ಪರಾಮರ್ಶನ ಗ್ರಂಥಗಳು ಮತ್ತು ಪೂರಕ ಆಕರಗಳು


| ೧ | ೨ | ೩ |
|---|---|---|
| ಕೃತಿ ಹೆಸರು | ಲೇಖಕರು/ಸಂಪಾದಕರು | ಪ್ರಕಟಣೆ ವರ್ಷ |
| ೧. ಅನೇಕಾಂತವಾದ | ಕಮಲಾ ಹಂಪನಾ | ೧೯೮೧ |
| ೨. ಅಶೋಕ | ನಾ ಕಸ್ತೂರಿ | ೧೯೫೭ |
| ೩. ಆದಯ್ಯನ ರಗಳೆ<br>ಸಂ: ಫ.ಗು. ಹಳಕಟ್ಟಿ | ಹರಿಹರ | ೧೯೬೮ |
| ೪. ಇತಿಹಾಸ ದರ್ಶನ | ಸಂ: ಸೂರ್ಯನಾಥ ಕಾಮತ್ (ಸಂಪುಟ ೧, ೨) | |
| ೫. ಅಶೋಕನ ಶಾಸನಗಳು | ಸಂ: ಶ್ರೀನಿವಾಸ ರಿತ್ತಿ | ೧೯೭೮ |
| ೬. ಎಪಿಗ್ರಾಫಿಯಾ ಇಂಡಿಕಾ | ಸಂ: ಫ್ಲೀಟ್ ಜೆ. ಎಫ್. | ೧೯೫೭ |
| ೭. ಕರ್ನಾಟಕದ ದೇವಾಲಯ ಕೋಶ (ಕೊಪ್ಪಳ ಜಿಲ್ಲೆ) | ಸಂ: ಡಾ. ಕೆ. ಎಂ. ಸುರೇಶ,<br>ವಾಸುದೇವ ಬಡಿಗೇರ<br>ಡಾ. ಎಸ್.ವೈ. ಸೋಮಶೇಖರ,<br>ಮೂಡಲಗೇರಿ ಕೊಟ್ರೇಶ | ೨೦೦೧ |
| ೮. ಕರ್ನಾಟಕ ಕೈಫಿಯತ್ತುಗಳು | ಸಂ: ಎಂ. ಎಂ. ಕಲಬುರ್ಗಿ | ೧೯೯೪ |
| ೯. ಕರ್ನಾಟಕದ ಇತಿಹಾಸ<br>ಆರ್. ರಾಮಕೃಷ್ಣನ್ | ಹೆಚ್. ವಿ. ಶ್ರೀನಿವಾಸ ಮೂರ್ತಿ | ೧೯೭೬ |
| ೧೦. ಕರ್ನಾಟಕ ದರ್ಶನ | ಬಿಂದುಮಾಧವ | ೧೯೪೭ |
| ೧೧. ಕನ್ನಡ ನಾಡಿನ ಚರಿತ್ರೆ (ಭಾಗ ೩)<br>ವಾಸುದೇವ ಬಡಿಗೇರ | ಎಂ. ಹೆಚ್. ಕೃಷ್ಣ | ೧೯೭೨ |
| ೧೨. ಕರ್ನಾಟಕ ಸಾಮ್ರಾಜ್ಯ | ರಾಮಚಂದ್ರ ಹಣುಮಂತ ದೇಶಪಾಂಡೆ | ೧೯೫೬ |
| ೧೩. ಕರ್ನಾಟಕದ ಅರಸು ಮನೆತನಗಳು | ಆರ್.ಎಸ್. ಪಂಚಮುಖಿ | ೧೯೬೮ |
| ೧೪. ಕರ್ನಾಟಕ ಕವಿಚರಿತ್ರೆ. ಭಾಗ ೧,೨,೩<br>ಭಾಗ - ೨<br>ಭಾಗ - ೩ | ಆರ್. ನರಸಿಂಹಾಚಾರ್ | ೧೯೦೭<br>೧೯೧೯<br>೧೯೨೩ |

| ೧ | ೨ | ೩ |
| --- | --- | --- |
| ೧೫. ಕರ್ನಾಟಕದ ಗತವೈಭವ | ಆಲೂರು ವೆಂಕಟರಾವ್ | ೧೯೫೭ |
| ೧೬. ಕರ್ನಾಟಕ ರಾಜ್ಯ ಗ್ಯಾಜಿಟಿಯರ್ (ರಾಯಚೂರು ಜಿಲ್ಲೆ) | | |
| ೧೭. ಕನ್ನಡ ನಾಡಿನ ಚರಿತ್ರೆ (ಕರ್ನಾಟಕದ ಧರ್ಮಗಳು) | ಎಸ್. ಸಿ. ನಂದಿಮಠ | ೧೯೯೮ |
| ೧೮. ಕರ್ನಾಟಕ ಇತಿಹಾಸ (ಆರು ಸಂಪುಟಗಳು) | ಪ್ರ. ಸಂ : ಷೇಕ್ ಅಲಿ ಕನ್ನಡ ವಿಶ್ವವಿದ್ಯಾಲಯ | ೧೯೯೭ |
| ೧೯. ಕರ್ನಾಟಕದ ಪರಂಪರೆ (ಭಾಗ ೧) | | ೧೯೭೦ |
| ಕರ್ನಾಟಕದ ಪರಂಪರೆ (ಭಾಗ ೨) | | ೧೯೭೧ |
| ೨೦. ಕರ್ನಾಟಕದ ಶಾಸನಗಳು | ಆರ್. ಎಸ್. ಪಂಚಮುಖಿ | ೧೯೪೩ |
| ೨೧. ಕರ್ಣಾಟ ಸಂಸ್ಕೃತಿಯ ಪೂರ್ವಪೀಠಿಕೆ (ಪ್ರಥಮ ಭಾಗ) | ಶಂಬಾ ಜೋಶಿ | ೧೯೩೭ |
| ೨೨. ಕರ್ನಾಟಕ ಸಂಸ್ಕೃತಿ ಸಂಶೋಧನೆ | ಕಪಟರಾಳ ಕೃಷ್ಣರಾವ್ | ೧೯೭೦ |
| ೨೩. ಕರ್ಣಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ (ದ್ವಿತೀಯ ಭಾಗ) | ಡಾ. ಶಂಬಾ ಜೋಶಿ | ೧೯೬೬ |
| ೨೪. ಕರ್ನಾಟಕ ಸಂಸ್ಕೃತಿ | ದೇವುಡು | ೧೯೫೨ |
| ೨೫. ಕರ್ನಾಟಕ ಸಂಸ್ಕೃತಿ ಸಮೀಕ್ಷೆ | ಡಾ. ಎಚ್. ತಿಪ್ಪೇರುದ್ರಸ್ವಾಮಿ | ೧೯೬೮ |
| ೨೬. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ | ಡಾ. ಎಂ. ಚಿದಾನಂದ ಮೂರ್ತಿ | ೧೯೬೪ |
| ೨೭. ಕನ್ನಡ ಸಾಹಿತ್ಯದಲ್ಲಿ ಕೊಪ್ಪಳ ನಾಡು | ಲೇಖನ : ಬಿ.ವಿ. ಶಿರೂರು | ೧೯೭೬ |
| ೨೮. ಕನ್ನಡ-ಕನ್ನಡಿಗ-ಕರ್ನಾಟಕ | ಪ್ರ : ಕನ್ನಡ ಪುಸ್ತಕ ಪ್ರಾಧಿಕಾರ | ೧೯೯೬ |
| ೨೯. ಕನ್ನಡ ಸಾಹಿತ್ಯ ಚರಿತ್ರೆ | ಡಾ. ರಂ.ಶ್ರೀ. ಮುಗಳಿ | ೧೯೯೩ |
| ೩೦. ಕನ್ನಡ ಧಾರ್ಮಿಕ ಸಾಹಿತ್ಯಕ್ಕೆ - ಕ್ರೈಸ್ತ ಮಿಶನರಿಗಳ ಕೊಡುಗೆ | ಎಡ್ವರ್ಡ್ ನೊರಿನೋ | ೧೯೯೬ |
| ೩೧. ಕವಿವರ ಕಾಮಧೇನು - ಅತ್ತಿಮಬ್ಬೆ | ಹಂಪನಾ | ೧೯೯೬ |
| ೩೨. ಕವಿರಾಜಮಾರ್ಗ | ಚಿದಾನಂದ ಮೂರ್ತಿ ಮತ್ತು ಇತರರು | ೧೯೭೩ |

| ೧ | | ೨ | ೩ |
|---|---|---|---|
| ೩೩. | ಕವಿರಾಜಮಾರ್ಗ ವಿವೇಕ | ಮುಳಿಯ ತಿಮ್ಮಪ್ಪಯ್ಯ | ೧೯೭೩ |
| ೩೪. | ಕೊಪ್ಪಳ ಜಿಲ್ಲೆಯ ಶಾಸನಗಳು (ಶಾಸನ ಪರಿಚಯ) | ಪಿ.ಬಿ. ದೇಸಾಯಿ | ೧೯೫೪ |
| ೩೫. | ಇಂಗ್ಲಿಷ್ ಕೊಪ್ಪಳದ ಆರು ಶಾಸನಗಳು ಎಪಿಗ್ರಾಫಿಯಾ ಇಂಡೋ- ಇಸ್ಲಾಮಿಕ್ | ಯಜ್ದಾನಿ | ೧೯೩೬ |
| ೩೬. | ಕೊಪ್ಪಳ ನಾಡಿನ ಇತಿಹಾಸ (ಲೇಖನ) | ಗುರುರಾಜ ಬಿ.ಕೆ. | ೧೯೭೬ |
| ೩೭. | ಕೊಪಣ-ಕೊಪ್ಪಳ (ಲೇಖನ) | ಶಾಸ್ತ್ರಿ ನಾ. ಭ | ೧೯೩೮ |
| ೩೮. | ಕುಮ್ಮಟ ಕೇಸರಿ | ವರದರಾಜರಾವ್ | ೧೯೭೩ |
| ೩೯. | ಕೊಪ್ಪಳ | ಮೋಹನ ಚಂದ ಕಿರಣಗಿ | ೧೯೭೫ |
| ೪೦. | ಕೌಟಿಲ್ಯನ ಅರ್ಥಶಾಸ್ತ್ರ | ಕೆ. ಕೃಷ್ಣ ಭಟ್ | ೧೯೯೨ |
| ೪೧. | ಕೊಪ್ಪಳ ಶಾಸನಗಳು | ಹಂ. ಪ. ನಾಗರಾಜಯ್ಯ | ೧೯೯೮ |
| ೪೨. | ಗವಿಮಠ ಮತ್ತು ಪಾಲ್ಕಿಗುಂಡು ಅಶೋಕನ ಶಾಸನಗಳು | ಟರ್ನರ್ ಆರ್. ಎಲ್. | ೧೯೫೨ |
| ೪೩. | ಚಾವುಂಡರಾಯಪುರಾಣ | ಸಂ : ಕಮಲಾ ಹಂಪನಾ<br>ಸಂ : ಕೆ. ಆರ್. ಶೇಷಗಿರಿ | ೧೯೮೧ |
| ೪೪. | ಚಂದ್ರಕೊಡೆ | ಹಂಪನಾ (ಕನ್ನಡ ವಿ.ವಿ.) | ೧೯೯೭ |
| ೪೫. | ಚಂದ್ರವಳ್ಳಿ ಶಾಸನದ ಮೇಲೆ ಹೊಸ ಬೆಳಕು (ಲೇಖನ) | ಬಿ. ರಾಜಶೇಖರಪ್ಪ<br>(ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ) | ೧೯೮೪ |
| ೪೬. | ಚಾವುಂಡರಾಯ ಪುರಾಣಂ | ಸಂ : ಬೆಳ್ಳಾವೆ ವೆಂಕಟನಾರಾಯಣ ಶಾಸ್ತ್ರಿ | ೧೯೨೫ |
| ೪೬. | ಚಾರ್ಲ್ಸ್ ಡಾರ್ವಿನ್ | ಎನ್. ಎಫ್. ವೀರಪ್ಪ | ೧೯೮೧ |
| ೪೭. | ಜೈನಧರ್ಮ | ಮಿರ್ಜಿ ಅಣ್ಣಾರಾಯ | ೧೯೯೭ |
| ೪೮. | ಜೈನ ಸಾಹಿತ್ಯ ಪರಿಸರ | ಕಮಲಾ ಹಂಪನಾ | ೧೯೮೧ |
| ೪೯. | ತಲಕಾಡಿನ ಗಂಗರ ದೇವಾಲಯಗಳು: ಒಂದು ಅಧ್ಯಯನ | ದೇವರ ಕೊಂಡಾರೆಡ್ಡಿ | ೧೯೯೩ |
| ೫೦. | ತಿರಳ್ಗನ್ನಡ | ಸಂ : ಗವಿಸಿದ್ಧ ಎನ್. ಬಳ್ಳಾರಿ<br>ಜಂಬಣ್ಣ , ಅಮರಚಿಂತ,<br>ಮಲ್ಲಿಕಾರ್ಜುನ ಹಿರೇಮಠ | ೧೯೯೩ |

| ೧ | | ೨ | ೩ |
|---|---|---|---|
| ೫೧. | ದಕ್ಷಿಣ ಭಾರತದ ಇತಿಹಾಸ | ಪಿಳ್ಳೈ ಕೆ. ಕೆ. (ಅನು) ಜಿ. ಎಸ್. ಕೃಷ್ಣರಾವ್ | ೧೯೬೭ |
| ೫೨. | ದಕ್ಷಿಣ ಭಾರತದ ಇತಿಹಾಸ | ಜಿ. ರಂಗಸ್ವಾಮಯ್ಯ, ಬಿ. ಷೇಕ್ ಅಲಿ. | ೧೯೭೨ |
| ೫೩. | ನಡೆದು ಬಂದ ದಾರಿ (ಸಂ- ૩) | ಸಂ : ಜಿ.ಬಿ. ಜೋಶಿ, ಕೆ.ಡಿ. ಕುರ್ತಕೋಟಿ. | ೧೯೬೧ |
| ೫೪. | ಪ್ರಾಚೀನ ಭಾರತದ ಇತಿಹಾಸ | ನಂಜಮ್ಮಣ್ಣಿ | ೧೯೭೪ |
| ೫೫. | ಪ್ರವಾಸಿ ಕಂಡ ಇಂಡಿಯಾ | ಎಚ್. ಎಲ್. ನಾಗೇಗೌಡ | ೧೯೭೬ |
| ೫೬. | ಪ್ರಾಚೀನ ಕೊಪಣ ಕ್ಷೇತ್ರ (ಲೇಖನ) ಗವಿದೀಪ್ತಿ | | ೧೯೭೬ |
| ೫೭. | ಪ್ರಾಚೀನ ಭಾರತ | ಜಿ. ರಂಗಸ್ವಾಮಯ್ಯ | |
| ೫೮. | ಪ್ರಾಚೀನ ಭಾರತ | ಆರ್. ಎಸ್. ಶರ್ಮ | |
| ೫೯. | ಭಾರತದ ಪ್ರೌಢ ಇತಿಹಾಸ | ಆರ್.ಸಿ. ಮುಜುಮ್‌ದಾರ್, ಹೆಚ್.ಸಿ.ರಾಯ್, ಕಾಲಿ ಕಿಂಕರ ದತ್ತ, ಚೌಧರಿ (ಅನು) ಎಂ. ಎಸ್. ಶಾರದಾ ಪ್ರಸಾದ್ | ೧೯೮೬ |
| ೬೦. | ಭಾರತದ ಇತಿಹಾಸ | ಪ್ರೊ: ಶಿವಣ್ಣ | ೧೯೯೮ |
| ೬೧. | ಭಾರತದ ಸಮಗ್ರ ಇತಿಹಾಸ | ಸದಾಶಿವ | ೧೯೯೯ |
| ೬೨. | ಭಾರತದ ಸ್ವಾತಂತ್ರ್ಯ ಚಳುವಳಿ (೧೮೫೭-೧೯೪೭) | ಎ.ಪಿ. ಶ್ರೀನಿವಾಸ ಮೂರ್ತಿ | ೧೯೯೬ |
| ೬೩. | ಭಾರತೀಯ ಸಂಸ್ಕೃತಿ | ಸಂ : ಅ.ನ.ಕೃ | ೧೯೭೩ |
| ೬೪. | ಭಾರತೀಯ ಸಂಸ್ಕೃತಿಗೆ ಜೈನಧರ್ಮದ ಕೊಡುಗೆ | ಮೂಲ : ಹೀರಾಲಾಲ್ (ಅನು) ಮಿರ್ಜಿ ಅಣ್ಣಾರಾಯ | |
| ೬೫. | ಭಾರತೀಯ ಸಂಸ್ಕೃತಿ | ಎಸ್. ಶ್ರೀಕಂಠ ಶಾಸ್ತ್ರಿ | ೧೯೬೩ |
| ೬೬. | ಭಾರತೀಯ ಸಂಸ್ಕೃತಿ ಸಂಘಟನೆ | ಸಿಂಪಿ ಲಿಂಗಣ್ಣ | ೧೯೯೭ |
| ೬೭. | ಮೈಸೂರು ದೇಶದ ವಾಸ್ತುಶಿಲ್ಪ | ವೆಂಕೋಬಾರಾವ್ | ೧೯೪೩ |
| ೬೮. | ಭಾರತೀಯ ಸಾಹಿತ್ಯ ಮತ್ತು ಸಂಸ್ಕೃತಿಗೆ ಪಾಶ್ಚಾತ್ಯ ವಿದ್ವಾಂಸರ ಸೇವೆ | ಐ.ಮಾ. ಮುತ್ತಣ್ಣ | ೧೯೮೭ |
| ೭೦. | ಬಿತ್ತದ್ದನ್ನು ಬೆಳಕೋ | ಡಾ. ಶಂಬಾ ಜೋಶಿ | ೧೯೮೪ |
| ೭೧. | ಮರೆತು ಹೋದ ಮಹಾಕ್ಷೇತ್ರಗಳು (ಲೇಖನ - ದಿವ್ಯಧ್ವನಿ) | ಹಂಪನಾ | ೧೯೭೫ |

| ೧ | ೨ | ೩ |
|---|---|---|
| ೭೨. ಮಾರ್ಗ ಸಂ-೧ | ಎಂ. ಎಂ. ಕಲಬುರ್ಗಿ | ೧೯೯೫ |
| ೭೩. ಮಾರ್ಗ ಸಂ-೨ | ಎಂ. ಎಂ. ಕಲಬುರ್ಗಿ | ೧೯೯೫ |
| ೭೪. ಮಾರ್ಗ ಸಂ-೩ | ಎಂ. ಎಂ. ಕಲಬುರ್ಗಿ | ೧೯೯೭ |
| ೭೫. ಮಹಾಮಾರ್ಗ | ಸಂ: ಸದಾನಂದ ಕನವಳ್ಳಿ, ವೀರಣ್ಣ ರಾಜೂರ | ೧೯೯೮ |
| ೭೬. ಯುಗಯಾತ್ರೀ ಭಾರತೀಯ ಸಂಸ್ಕೃತಿ ಭಾಗ ೧ | ಸಂ: ಕೆ.ವಿ. ಪುಟ್ಟಪ್ಪ | ೧೯೭೦ |
| ೭೭. ಯುಗಯಾತ್ರೀ ಭಾರತೀಯ ಸಂಸ್ಕೃತಿ ಭಾಗ ೨ | ಸಂ: ಕೆ.ವಿ. ಪುಟ್ಟಪ್ಪ | ೧೯೭೧ |
| ೭೮. ಯುಗಯಾತ್ರೀ ಭಾರತೀಯ ಸಂಸ್ಕೃತಿ ಭಾಗ ೩ | ಸಂ: ಹರಿದಾಸ ಭಟ್ಟಾಚಾರ್ಯ | ೧೯೭೫ |
| ೭೯. ಯುಗಯಾತ್ರೀ ಭಾರತೀಯ ಸಂಸ್ಕೃತಿ ಭಾಗ ೪ | ಸಂ: ಹರಿದಾಸ ಭಟ್ಟಾಚಾರ್ಯ | ೧೯೮೮ |
| ೮೦. ರನ್ನ ಕವಿ ವಿರಚಿತ ಅಜಿತ ತೀರ್ಥಂಕರ ಪುರಾಣ ತಿಲಕಂ | ಸಂ: ದೇವೀರಪ್ಪ ಹೆಚ್., ಜವರೇಗೌಡ | ೧೯೫೫ |
| ೮೧. ವಿಮೋಚನೆ | ವಿವಿಧ ಲೇಖಕರು (ಪ್ರ: ಜಿಲ್ಲಾ ದಳಿತ, ಕೊಪ್ಪಳ) | ೧೯೯೯ |
| ೮೨. ಶಂಬಾ ಅವರ ಆಯ್ದ ಲೇಖನಗಳು | ಸಂ: ಮಾ. ಜಿ. ವೆಂಕಟೇಶ್ | ೧೯೯೮ |
| ೮೩. ಶಾಸನಗಳಲ್ಲಿ ಕಿಷ್ಕಿಂಧೆ | ಅ. ಸುಂದರ | ೧೯೯೭ |
| ೮೪. ಶಾಸನ ಪರಿಚಯ | ಪಿ.ಬಿ. ದೇಸಾಯಿ | ೧೯೫೬ |
| ೮೫. ಶಾಸನ ಸಾಹಿತ್ಯ ಸಂಚಯ | ಅಣ್ಣಿಗೇರಿ., ಮೇವುಂಡಿ ಮಲ್ಲಾರಿ | ೧೯೭೨ |
| ೮೬. ಶಾಸನಗಳಲ್ಲಿ ಶಿವಶರಣರು | ಎಂ. ಎಂ. ಕಲಬುರ್ಗಿ | ೧೯೭೦ |
| ೮೭. ಶಾಸನ ಪದ್ಯಮಂಜರಿ | ಆರ್. ನರಸಿಂಹಾಚಾರ್ | ೧೯೭೦ |
| ೮೮. ಶ್ರವಣ ಬೆಳಗೊಳ (ಲೇಖನ) | ಎಸ್. ಎಸ್. ಶೆಟ್ಟರ್ | ೧೯೮೧ |
| ೮೯. ಸಂಸ್ಕೃತಿ | ಮುಳಿಯ ತಿಮ್ಮಪ್ಪಯ್ಯ | ೧೯೫೭ |
| ೯೦. ಸಂಸ್ಕೃತಿ | ಡಿ.ವಿ.ಜಿ. | ೧೯೮೫ |

| ೧ | ೨ | ೩ |
|---|---|---|
| ೯೧. ಸಂಶೋಧನಾ ಲೇಖನಗಳು | ಎಸ್. ಶ್ರೀಕಂಠ ಶಾಸ್ತ್ರಿ<br>ಸಂ: ಬಾ.ರಾ. ಗೋಪಾಲ<br>ಟಿ.ವಿ. ವೆಂಕಟಾಚಲಶಾಸ್ತ್ರಿ | ೧೯೭೫ |
| ೯೨. ಸಂಶೋಧನಾ ಸ್ವರೂಪ | ಬಿ.ವಿ. ಶಿರೂರ್ | ೧೯೯೨ |
| ೯೩. ಸಮಗ್ರ ಭಾರತದ ಇತಿಹಾಸ | ಹೆಚ್. ರಾಮಲಿಂಗಪ್ಪ | ೧೯೯೪ |
| ೯೪. ಸಮಾಧಿ, ಬಲಿದಾನ,<br>ವೀರಮರಣ ಸ್ಮಾರಕಗಳು | ಎಂ. ಎಂ. ಕಲಬುರ್ಗಿ | ೧೯೮೦ |
| ೯೫. ಸಾಂತರರು ಒಂದು ಅಧ್ಯಯನ | ಹಂಪನಾ | ೧೯೯೭ |
| ೯೬. ಸೋಸಲೆಯ ನಿಶಿಧಿ ಶಾಸನ<br>( ಇತಿಹಾಸ ದರ್ಶನ ಸಂಪುಟ) | ಸಂ: ದೇವರ ಕೊಂಡಾರೆಡ್ಡಿ | ೧೯೮೯ |
| ೯೭. ಸ್ಥಳನಾಮ ಪರಿವರ್ತನೆ ಪ್ರಭಾವ | ಸಂ: ಕೆ.ವಿ. ನಾರಾಯಣ | ೧೯೯೯ |
| ೯೮. ಹೊಸಗನ್ನಡದ ಅರುಣೋದಯ | ಶ್ರೀನಿವಾಸ ಹಾವನೂರು | ೧೯೮೩ |
| ೯೯. ಹೊಸಗನ್ನಡದ ದಯ ಕಾಲ | ರಾ. ಯ. ಧಾರವಾಡಕರ್ | ೧೯೭೫ |
| ೧೦೦. Ancient India V-4 | Archeological Department<br>Govt. of India | ೧೯೭೬ |
| ೧೦೧ Curpus of<br>Kadamba Inscriptions | B.R. Gopal | |
| ೧೦೨. Epigraphica Carnatica | Dr. J.F. Fleet | ೧೯೮೮ |
| ೧೦೩. History of Mysore V-3 | C. Hayavadana Rao | ೧೯೮೨ |
| ೧೦೪. Heritage of Karnataka | R.S. Muguli | ೧೯೬೮ |
| ೧೦೫. Indian Archeaology Review | | ೧೧೯೭<br>೧೧೭೮ |
| ೧೦೬. Koppal & its Fort<br>(Journal of Hyderabad) | Alexendar | ೧೯೧೬ |
| ೧೦೭. Jainism & Culture | S.S. Sharma | ೧೯೪೭ |

| ೧ | ೨ | ೩ |
| --- | --- | --- |
| ೧೦೮. Jainism in south India and some Jain Epigraph of Sollapur | P.B. Desai | ೧೯೫೭ |
| ೧೦೯. Karnataka through the Ages | Ed : R.R. Divakar | ೧೯೬೮ |
| ೧೧೦. Kannada Inscriptions of of Andhrapradesh | P.S. Achar and P.B. Desai | ೧೯೩೮ |
| ೧೧೧. Midieval Jainism | Salatore | ೧೯೩೮ |
| ೧೧೨. Mysore Inscriptions | B.L. Rice | ೧೮೭೯ |
| ೧೧೩. Pali Sanskrit & Old Kannada Inscriptions (Indian Antiquari Journal) | J.F. Fleet | ೧೯೭೨ |
| ೧೧೪. Rastrakuta & their times | A. S. Altekar | |

# ಅಧ್ಯಯನದ ಸಂದರ್ಭದಲ್ಲಿ ಸಂದರ್ಶಿಸಲಾದ ಸ್ಥಳಗಳು

| | | |
|---|---|---|
| ೧. ಅಂಟರಠಾಣಾ | ಕುಷ್ಟಗಿ ತಾಲ್ಲೂಕು | **ಕೊಪ್ಪಳ** ಜಿಲ್ಲೆ |
| ೨. ಕಡೂರು | - ಅದೇ - | - ಅದೇ - |
| ೩. ಕುಷ್ಟಗಿ | - ಅದೇ - | - ಅದೇ - |
| ೪. ಚಂದ್ರಗಿರಿ | - ಅದೇ - | - ಅದೇ - |
| ೫. ಚಳಗೇರಾ | - ಅದೇ - | - ಅದೇ - |
| ೬. ತಾವರಗೇರಾ | - ಅದೇ - | - ಅದೇ - |
| ೭. ಪುರ್ತಗೇರಿ | - ಅದೇ - | - ಅದೇ - |
| ೮. ಪುರ | - ಅದೇ - | - ಅದೇ - |
| ೯. ಶಿರಗುಂಪಿ | - ಅದೇ - | - ಅದೇ - |
| ೧೦. ಹನುಮಸಾಗರ | - ಅದೇ - | - ಅದೇ - |
| ೧೧. ಹಿರೇ ಹೊನ್ನಾಪುರ | - ಅದೇ - | - ಅದೇ - |
| ೧೨. ಹೂಲಗೇರಿ | - ಅದೇ - | - ಅದೇ - |
| ೧೩. ಅಳವಂಡಿ | ಕೊಪ್ಪಳ ತಾಲ್ಲೂಕು | ಕೊಪ್ಪಳ ಜಿಲ್ಲೆ |
| ೧೪. ಇರಕಲ್ ಗಡ | - ಅದೇ - | - ಅದೇ - |
| ೧೫. ಉಪ್ಪಿನ ಬೆಟಗೇರಿ | - ಅದೇ - | - ಅದೇ - |
| ೧೬. ಕವಲೂರು | - ಅದೇ - | - ಅದೇ - |
| ೧೭. ಕಿನ್ನಾಳ | - ಅದೇ - | - ಅದೇ - |
| ೧೮. ಕೂಕನಪಲ್ಲಿ | - ಅದೇ - | - ಅದೇ - |
| ೧೯. ಕೆರೆಹಳ್ಳಿ | - ಅದೇ - | - ಅದೇ - |
| ೨೦. ಕೊಪ್ಪಳ | - ಅದೇ - | - ಅದೇ - |
| ೨೧. ಗೊಂಡಬಾಳು | - ಅದೇ - | - ಅದೇ - |
| ೨೨. ಚಿಕ್ಕ ಸಿಂದೋಗಿ | - ಅದೇ - | - ಅದೇ - |
| ೨೩. ಚುಕನಕಲ್ಲು | - ಅದೇ - | - ಅದೇ - |
| ೨೪. ನರೇಗಲ್ಲು | - ಅದೇ - | - ಅದೇ - |
| ೨೫. ಬಹದ್ದೂರ್ ಬಂಡೆ | - ಅದೇ - | - ಅದೇ - |
| ೨೬. ಬೈರಾಪುರ | - ಅದೇ - | - ಅದೇ - |
| ೨೭. ಮಾದಿನೂರು | - ಅದೇ - | - ಅದೇ - |

| | | |
|---|---|---|
| ೩೮. ಮುದ್ದಾಬಳ್ಳಿ | ಕೊಪ್ಪಳ ತಾಲ್ಲೂಕು | ಕೊಪ್ಪಳ ಜಿಲ್ಲೆ |
| ೩೯. ಯತ್ನಟ್ಟಿ | - ಅದೇ - | - ಅದೇ - |
| ೪೦. ಲಾಚನಕೇರಿ | - ಅದೇ - | - ಅದೇ - |
| ೪೧. ಹಲಗೇರಿ | - ಅದೇ - | - ಅದೇ - |
| ೪೨. ಹಿರೇಸಿಂದೋಗಿ | - ಅದೇ - | - ಅದೇ - |
| ೪೩. ಹುಲಿಗಿ | - ಅದೇ - | - ಅದೇ - |
| ೪೪. ಅಂಜನಾದ್ರಿ | ಗಂಗಾವತಿ ತಾಲ್ಲೂಕು | ಕೊಪ್ಪಳ ಜಿಲ್ಲೆ |
| ೪೫. ಆನೆಗೊಂದಿ | - ಅದೇ - | - ಅದೇ - |
| ೪೬. ಕನಕಗಿರಿ | - ಅದೇ - | - ಅದೇ - |
| ೪೭. ಕರಡಿಗುಡ್ಡ | - ಅದೇ - | - ಅದೇ - |
| ೪೮. ಕುಮ್ಮಟದುರ್ಗ | - ಅದೇ - | - ಅದೇ - |
| ೪೯. ಚಿಕ್ಕ ಜಂತಕಲ್ಲು | - ಅದೇ - | - ಅದೇ - |
| ೫೦. ಚಿಕ್ಕ ಬೆನಕಲ್ | - ಅದೇ - | - ಅದೇ - |
| ೫೧. ದೇವಿಘಾಟ್ | - ಅದೇ - | - ಅದೇ - |
| ೫೨. ನವಲಿ | - ಅದೇ - | - ಅದೇ - |
| ೫೩. ಪಂಪಾಸರೋವರ | - ಅದೇ - | - ಅದೇ - |
| ೫೪. ಬಸರಿ ಹಾಳ್ | - ಅದೇ - | - ಅದೇ - |
| ೫೫. ಮುಷ್ಟೂರು | - ಅದೇ - | - ಅದೇ - |
| ೫೬. ವೆಂಕಟಗಿರಿ | - ಅದೇ - | - ಅದೇ - |
| ೫೭. ಹನುಮನಾಳ | - ಅದೇ - | - ಅದೇ - |
| ೫೮. ಹಳೇ ಅಯೋಧ್ಯೆ | - ಅದೇ - | - ಅದೇ - |
| ೫೯. ಹಿರೇ ಜಂತಕಲ್ | - ಅದೇ - | - ಅದೇ - |
| ೬೦. ಹೆಬ್ಬಾಳ್ | - ಅದೇ - | - ಅದೇ - |
| ೬೧. ಹೇಮಗುಡ್ಡ | - ಅದೇ - | - ಅದೇ - |
| ೬೨. ಇಟಗಿ | ಯಲಬುರ್ಗಾ ತಾಲ್ಲೂಕು | ಕೊಪ್ಪಳ ಜಿಲ್ಲೆ |
| ೬೩. ಕರಾಮುಡಿ | - ಅದೇ - | - ಅದೇ - |
| ೬೪. ಕಲ್ಲೂರು | - ಅದೇ - | - ಅದೇ - |
| ೬೫. ಕುಕನೂರು | - ಅದೇ - | - ಅದೇ - |
| ೬೬. ಕೋನಸಾಗರ | - ಅದೇ - | - ಅದೇ - |
| ೬೭. ತಳಕಲ್ಲು | - ಅದೇ - | - ಅದೇ - |
| ೬೮. ದಮ್ಮೂರು | - ಅದೇ - | - ಅದೇ - |
| ೬೯. ಬಂಡಿ | - ಅದೇ - | - ಅದೇ - |

| | | |
|---|---|---|
| ೭೦. ಬಳಗೇರಾ | ಯಲಬುರ್ಗಾ ತಾಲ್ಲೂಕು | ಕೊಪ್ಪಳ ಜಿಲ್ಲೆ |
| ೭೧. ಮುಧೋಳ | - ಅದೇ - | - ಅದೇ - |
| ೭೨. ಮಂಡಲಗಿರಿ | - ಅದೇ - | - ಅದೇ - |
| ೭೩. ಯಲಬುರ್ಗಾ | - ಅದೇ - | - ಅದೇ - |
| ೭೪. ಲಿಂಗನಬಂಡಿ | - ಅದೇ - | - ಅದೇ - |
| ೭೫. ವಜ್ರಬಂಡಿ | - ಅದೇ - | - ಅದೇ - |
| ೭೬. ಶಿರೂರ | - ಅದೇ - | - ಅದೇ - |
| ೭೭. ಸಂಕನೂರು | - ಅದೇ - | - ಅದೇ - |
| ೭೮. ಹಿರೇ ಮ್ಯಾಗೇರಿ | - ಅದೇ - | - ಅದೇ - |